ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ

ಸಂಪುಟ – ೧

# ಸಮಗ್ರ ಕಾವ್ಯ

ಸಂಪಾದಕರು

**ಡಾ. ಜಿ.ಬಿ. ಹರೀಶ**



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

**Prof. M.V. Seetharamaiah Samagra Sahithya** - Vol-1 Samagra Kavya (Complete works of Prof. M.V. Seetharamaiah: Poetry), Edited by **Dr. G.B. Harisha**, Published by **Sri Manu Baligar**, Commissioner, Department of Kannada and Culture, Kannada Bhavana, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೦
ಪ್ರತಿಗಳು : ೧೦೦೦
ಪುಟಗಳು : xxviii + ೬೩೪
ಬೆಲೆ : ರೂ. ೧೩೦/-

ರಕ್ಷಾಪುಟ ವಿನ್ಯಾಸ : **ಮಯೂರ ಪ್ರಿಂಟ್ ಆ್ಯಡ್ಸ್**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪

# ಪ್ರಕಾಶಕರ ಮಾತು

ಕನ್ನಡ ಓದುಗರಿಗೆ ಸುಲಭ ಬೆಲೆಯಲ್ಲಿ ಉತ್ತಮ ಕೃತಿಗಳು ಲಭ್ಯವಾಗಬೇಕೆನ್ನುವ ಉದ್ದೇಶದಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜನಪ್ರಿಯ ಸಾಹಿತ್ಯ ಪ್ರಕಾಶನದಡಿ ಹಲವಾರು ಪ್ರಕಟಣಾ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರಲಾಗುತ್ತಿದೆ. ಎಂ. ಗೋಪಾಲಕೃಷ್ಣ ಅಡಿಗ, ಹುಯಿಲಗೋಳ ನಾರಾಯಣರಾಯರು, ನಾಡೋಜ ಚೆನ್ನವೀರ ಕಣವಿ, ಕೆ.ಎಸ್. ನರಸಿಂಹಸ್ವಾಮಿ, ಡಿ.ಎಸ್. ಕರ್ಕಿ, ಕೀರ್ತಿನಾಥ ಕುರ್ತಕೋಟಿ ಹಾಗೂ ಪ್ರೊ. ಎಲ್.ಎಸ್. ಶೇಷಗಿರಿರಾವ್ ಹೀಗೆ ಪ್ರಮುಖ ಸಾಹಿತಿಗಳ ಸಮಗ್ರ ಸಾಹಿತ್ಯ ಪ್ರಕಟಣೆಗಳನ್ನು ಹೊರತರಲಾಗುತ್ತಿದೆ. ಪ್ರಸಕ್ತ ವರ್ಷ ಪ್ರೊ. ಎಂ.ವಿ. ಸೀತಾರಾಮಯ್ಯನವರ ಜನ್ಮಶತಮಾನೋತ್ಸವ ವರ್ಷವಾಗಿದ್ದು, ಈ ಸಂದರ್ಭದಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಹೊರತರಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಉದ್ದೇಶಿಸಿದೆ. ಒಬ್ಬ ಲೇಖಕರ ಸಮಗ್ರ ಅಧ್ಯಯನ ಮಾಡಲು ಅನುಕೂಲವಾಗ ಬೇಕೆಂಬುದು ಈ ಯೋಜನೆಯ ಆಶಯ.

'ರಾಘವ' ಎಂಬ ಕಾವ್ಯನಾಮದಿಂದ ಖ್ಯಾತರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರು ಕವನ, ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯ, ಗ್ರಂಥ ಸಂಪಾದನೆ, ಕಾವ್ಯಮೀಮಾಂಸೆ, ಸಂಶೋಧನೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಗಾಢ ಅಧ್ಯಯನ ಹಾಗೂ ಬರವಣಿಗೆಯ ಅಚ್ಚುಕಟ್ಟಿನಿಂದ ಐದು ದಶಕಗಳ ಕಾಲ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಹಸ್ತಪ್ರತಿಶಾಸ್ತ್ರ ಎಂಬ ನೂತನ ಸಂಶೋಧನಾ ಕ್ಷೇತ್ರವನ್ನು ಆರಂಭಿಸಿ ಅಳಿಸಿ ಹೋಗುತ್ತಿದ್ದ ಪ್ರಾಚೀನ ಸಾಹಿತ್ಯದ ಸಂಗ್ರಹ, ಸಂರಕ್ಷಣೆಯತ್ತ ನಾಡಿನ ಗಮನವನ್ನು ಸೆಳೆದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರದು ಬಹುಮುಖ ಪ್ರತಿಭೆ.

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಸಾಹಿತ್ಯ ಸೃಷ್ಟಿಯನ್ನು ಆರಂಭಿಸಿ ಹಳಗನ್ನಡ ಪರಂಪರೆ ಮತ್ತು ಆಧುನಿಕ ಕನ್ನಡ ಹಾಗೂ ಇಂಗ್ಲಿಷ್ ಸಾಹಿತ್ಯದ ಹೊಸತನಗಳನ್ನು ಮೈಗೂಡಿಸಿಕೊಂಡು ಸಾಹಿತ್ಯ ನಿರ್ಮಿತಿಗೆ ತೊಡಗಿದ ಎರಡು ಪರಂಪರೆಗಳ ಭವ್ಯಸೇತು ಪ್ರೊ. ಎಂ.ವಿ. ಸೀತಾರಾಮಯ್ಯನವರು. ಸೃಜನಶೀಲ ಸಾಹಿತ್ಯದ ಜೊತೆಜೊತೆಗೆ ಸಂಶೋಧನಾತ್ಮಕ ಸಾಹಿತ್ಯವನ್ನು ಬೆಳೆಸಿದ ಅಪೂರ್ವ ಸಾಧಕರು. ಅಧ್ಯಯನ–ಅಧ್ಯಾಪನಗಳಲ್ಲಿ ಅಪಾರ ಅನುಭವ ಪಡೆದಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಕನ್ನಡ ಭಾಷೆಯನ್ನು ಬೆಳೆಸುವಲ್ಲಿ ಗಣನೀಯವಾದ ಸೇವೆಯನ್ನು

ಸಲ್ಲಿಸಿದ್ದಾರೆ. ಅವರ ವಿಸ್ತೃತ ಹಾಗೂ ವ್ಯಾಪಕ ಸಾಹಿತ್ಯ ಸೇವೆಯನ್ನು ಗುರುತಿಸಿ, 'ಮುಗಿಯದ ಮಾಯೆ' ಕವನ ಸಂಕಲನಕ್ಕೆ ದೇವರಾಜ್ ಬಹದ್ದೂರ್ ಬಹುಮಾನ; 'ತೊಟ್ಟಿಲು ತೂಗುವ ಕೈ' ನಾಟಕಕ್ಕೆ, 'ಜೀವನ ನಾಟಕ' ಕಾದಂಬರಿಗೆ ರಾಜ್ಯ ಸರ್ಕಾರದ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ; 'ಆಸ್ವಾದ' ಅಭಿನಂದನ ಗ್ರಂಥ ಹೀಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳನ್ನು ನೀಡಿ ಗೌರವಿಸಲಾಗಿದೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಇಲಾಖೆಯಿಂದ ಪ್ರಕಟಿಸಲು ಸಹಕರಿಸಿದ ಬಿ.ಎಂ.ಶ್ರೀ. ಪ್ರತಿಷ್ಠಾನದ ಡಾ. ನಾ. ಗೀತಾಚಾರ್ಯ ಅವರಿಗೂ ಈ ಸಂಪುಟವನ್ನು ಸಂಪಾದಿಸಿಕೊಟ್ಟ ಡಾ. ಆರ್. ಲಕ್ಷ್ಮೀನಾರಾಯಣ ರವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತದೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯ ಪ್ರಕಟಣಾ ಯೋಜನೆಗೆ ಒಪ್ಪಿಗೆ ನೀಡಿದ ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಬಿ.ಆರ್. ಜಯರಾಮರಾಜೇ ಅರಸ್ ಅವರಿಗೆ, ಈಗಿನ ಇಲಾಖಾ ಕಾರ್ಯದರ್ಶಿಗಳಾದ ಬಸವರಾಜು ಅವರಿಗೆ ವಿಶೇಷ ವಂದನೆಗಳು ಹಾಗೂ ಈ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಶ್ರೀ ಬಲವಂತರಾವ್ ಪಾಟೀಲ್, ಜಂಟಿ ನಿರ್ದೇಶಕರು (ಸುವರ್ಣ ಕರ್ನಾಟಕ), ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಕಾರ್ಯಕ್ರಮ ಅಧಿಕಾರಿ, ಪ್ರಕಟಣಾ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು. ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ...ಂಟ್ ಆ್ಯಡ್ಸ್‌ನ ಮಾಲೀಕರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ನಾಡಿನ ಸಂಶೋಧನಾ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿರುವ ವಿದ್ವಾಂಸರಾದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ಒದಗಿಸುವುದು ನಮ್ಮ ಆಶಯವಾಗಿರುತ್ತದೆ. ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಸಾಹಿತ್ಯಾಸಕ್ತರು ಪ್ರೀತಿಯಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

ಬೆಂಗಳೂರು

**ಮನು ಬಳಿಗಾರ್**
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಸಂಪಾದಕರ ಮಾತು

ವಿಚಿತ್ರ ಸನ್ನಿವೇಶದಲ್ಲಿ ನಾವು ಬದುಕುತ್ತಿದ್ದೇವೆ. ಪ್ರೊ.ಎಂ.ವಿ.ಸೀ. ಅವರ ಶತಮಾನೋತ್ಸವ ವರ್ಷ ಮುಗಿದಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಎಂ.ವಿ.ಸೀ. ಅವರ ಸಮಗ್ರ ಸಾಹಿತ್ಯ ಅಚ್ಚಾಗುತ್ತಿವೆ. ಅದರಲ್ಲಿ ಒಂದು ಸಂಪುಟ ಅವರ ಸಮಗ್ರ ಕವಿತೆಗಳದ್ದು.

ವಿಚಿತ್ರ ಎಂದೆ ಯಾಕೆ? ಕೆಲವರು ನಿತ್ಯ ನೆನಪಾಗುತ್ತಾರೆ. ಕೆಲವರು ವರ್ಷಕ್ಕೊ, ಹತ್ತು ವರ್ಷಕ್ಕೊ ಒಮ್ಮೆ ನೆನಪಾಗುತ್ತಾರೆ. ಕೆಲವರು ಸದಾ ನೆನಪಾದರೂ ವಿಶೇಷವಾಗಿ ನೂರು ತುಂಬಿದಾಗ ನೆನಪಾಗುತ್ತಾರೆ. ತುಂಬು ಬಾಳು ಬಾಳಿದವರೂ ನೂರು ತುಂಬಿದಾಗಲಾದರೂ ನೆನಪಾಗುತ್ತಾರಲ್ಲ, ಅದು ವಿಚಿತ್ರ.

ಈ ಎಂ.ವಿ.ಸೀ. ಯಾರು? ಅವರ ಕೃತಿಗಳನ್ನು ಈಗಿನ ತರುಣ ಪೀಳಿಗೆಯ ಕವಿ, ವಿಮರ್ಶಕರು ಏಕೆ ಓದಬೇಕು? ಅಧ್ಯಯನ ಮಾಡಬೇಕು ಎಂದು ಹಲವರ ಅಂಬೋಣ. ಕವಿ ಯಾರೆಂದು ಗೊತ್ತಿಲ್ಲದೆ ನನ್ನ ಪೀಳಿಗೆಯವರು ಎಂ.ವಿ.ಸೀ. ಕವಿತೆಗಳನ್ನು ಅಧ್ಯಯನ ಮಾಡಿದ್ದುಂಟು. 'ಹೂವನು ಮಾರುತ ಹೂವಾಡಗಿತ್ತಿ' ಅಂಥ ಒಂದು ನೆನಪುಗಲ್ಲು.

ಮಕ್ಕಳ ಸಾಹಿತ್ಯ, ಕತೆ, ಕಾದಂಬರಿ, ನಾಟಕ, ಪ್ರಬಂಧ, ಸಂಶೋಧನೆಗಳಲ್ಲಿ ಕೈಯಾಡಿಸಿದವರು ಇವರು. ಕೈ ಆಡಿಸಿದ್ದು ಮಾತ್ರವಲ್ಲ ನಾಕು ಕಾಲ ನಿಲ್ಲುವಂಥ ಬೆಳೆ ತೆಗೆದವರು. ಆದರೂ ಸಮಗ್ರವಾಗಿ ಓದಲು ನೂರು ವರ್ಷ ತುಂಬಬೇಕಾಯಿತು. ಇದಕ್ಕೆ ಏನು ಕಾರಣ? ಆಲಸ್ಯ? ಕೃತಿಗಳ ಅಲಭ್ಯತೆ? ಓದುವ ದಾರಿ ತಿಳಿಯದಿರುವುದು? ಈ ಎಲ್ಲವೂ ಹೌದು. ಜೊತೆಗೆ ಇನ್ನೊಂದು ಕಾರಣವಿದೆ.

ನವೋದಯದಲ್ಲಿ ಬೇಂದ್ರೆ, ಕುವೆಂಪು, ಗೋವಿಂದಪೈ, ಮಾಸ್ತಿ, ಡಿ.ವಿ.ಜಿ., ಪು.ತಿ.ನ.–ಇಂತ ಹಿರಿ ಆಲದ ಮರಗಳಿರುವಾಗ ತಾರುಣ್ಯದಿಂದ ನಳನಳಿಸುವ ಮರಗಿಡಗಳನ್ನು ಕೇಳುವವರು ಯಾರು? ಆಗಿನ ಹಿರಿಯ ಲೇಖಕರ ಒಂದು ಹಂತದ ಓದು ಈಗ ಮುಗಿದಿದೆ ಎನಿಸುತ್ತದೆ. ಹೀಗಾಗಿ ನವೋದಯದ ಎರಡನೆಯ ಅಲೆಯ ಲೇಖಕ ಲೇಖಕಿಯರನ್ನು ರಸಿಕರು, ವಿಮರ್ಶಕರು ಇನ್ನಾದರೂ ಪ್ರಾಂಜಲ ಮನಸ್ಸಿನಿಂದ ಓದಿಯಾರು.

ಎಂ.ವಿ.ಸೀ. ಬಾಳಿದ್ದು ಕನ್ನಡ ನಾಡಿನಲ್ಲಿ. ಬರೆದದ್ದು ಕನ್ನಡ ಭಾಷೆಯಲ್ಲಿ. ಶಾಸ್ತ್ರ–ಕಾವ್ಯ ಎಂದು ಸೀಳು ಬುದ್ಧಿ ಇಟ್ಟುಕೊಂಡವರಲ್ಲ ಅವರು. ಪ್ರಾಚೀನ ಸಾಹಿತ್ಯವನ್ನು ಕುರಿತು ಹೇರಳ ಲೇಖನಗಳನ್ನು ಬರೆದಂತೆಯೇ 'ಹಕ್ಕಿಹಾಡು', 'ಕಾವ್ಯಲಾಪ', 'ರಾಗ', 'ಅಶೋಕಚಕ್ರ', 'ಆ ಚಿತ್ರಗಳು', 'ಹೂವಾಡಗಿತ್ತಿ', 'ರಾಷ್ಟ್ರರಥ', 'ರಾಷ್ಟ್ರದಿನೋತ್ಸವ ಗೀತ' ಮುಂತಾದ ಕವನಸಂಕಲನಗಳನ್ನು ಬರೆದಿದ್ದಾರೆ. ಇದರಲ್ಲಿ

ನವೋದಯದ ಅತಿರಥ ಮಹಾರಥರ ಮುಂದೆ ತಾವೆಂತು ಪದ್ಯ ಪ್ರಕಟಿಸುವುದು ಎಂಬ ಸಂಕೋಚದಿಂದಾಗಿ ಹಲವು ಕವನಗಳು ತಡವಾಗಿಯೇ ಪ್ರಕಟವಾಗಿವೆ.

ಈ ಪರಿಮಿತಿಗಳೊಂದಿಗೆ ಮತ್ತು ತಮ್ಮ ನಿರಂತರವಾದ ಅನಾರೋಗ್ಯದ ಕಾಟದಿಂದಾಗಿ ಅವರ ಕವನಗಳಿಗೆ ಆಗ ಸಿಗಬೇಕಾದ ಚರ್ಚೆಯ ಗೌರವ ಒದಗಲಿಲ್ಲ.

* * *

ದೊಡ್ಡ ಪರ್ವತಕ್ಕೆ ಬೆಲೆ ಬರುವುದು ಅದರ ಸುತ್ತಲೂ ಇರುವ ಅನೇಕ ಗುಡ್ಡಗಳಿಂದ. ಗುಡ್ಡಕ್ಕೂ ದೊಡ್ಡಪರ್ವತದ ಸಮೀಪ ಇರುವುದರಿಂದ ಗೌರವ. ಅಸ್ತಿತ್ವ ಮತ್ತು ಗೌರವ ಸಾಹಿತ್ಯ ಚರಿತ್ರೆಯಲ್ಲಿ ಪಕ್ಕಪಕ್ಕದಲ್ಲೇ ಸಂಚರಿಸುತ್ತಿರುತ್ತವೆ. ಹಲವು ಅಲೆಗಳಿಂದ ಕೂಡಿ ಸಮುದ್ರಕ್ಕೆ ಶೋಭೆ, ಮೆರುಗು. ಕೆಲವು ದೊಡ್ಡ ಅಲೆಗಳು, ಹಲವು ಕಿರುದೆರೆಗಳು ಸಾಹಿತ್ಯ ಚರಿತ್ರೆಯ ೨೦ನೇ ಶತಮಾನದ ನವೋದಯದ ಪುಟಗಳನ್ನು ಪರ್ವತ, ಅಲೆಗಳ ರೂಪಕದ ಮೂಲಕ ಗ್ರಹಿಸಬಹುದು.

ಸದ್ಯಕ್ಕೆ ಈಗಿರುವ ಹೊಸಗನ್ನಡ ಕಾವ್ಯ ಚರಿತ್ರೆಯಲ್ಲಿ ಎಂ.ವಿ.ಸೀ. ಇರಬಹುದು, ಯರ್ಮುಂಜ, ಪಾಂಡೇಶ್ವರ ಗಣಪತಿರಾವ್ ಇರಬಹುದು. ಬೆಳಗೆರೆ ಜಾನಕಮ್ಮ, ಗೋವಿಂದರಾವ್ ಇರಬಹುದು. ಕಿರುದೆರೆಗಳಾಗಿ ಅಲ್ಲಲ್ಲಿ ವಿಮರ್ಶೆಯ ಕಣ್ಣಿಗೆ ಕಾಣಿಸಿಕೊಂಡಿದ್ದಾರೆ. ಕರ್ನಾಟಕ ಸಂಸ್ಕೃತಿಯ ನೂರು ವರ್ಷಗಳ ಘಟ್ಟದಲ್ಲಿ ರಸಿಕಸಂಪ್ರದಾಯ ನಶಿಸಿ, ಪಾಶ್ಚಾತ್ಯ ಪ್ರಣೀತ ವಿಮರ್ಶಾ ಸಂಪ್ರದಾಯ ತಲೆಯೆತ್ತಿದ್ದರಿಂದ ಆದ ನಷ್ಟವನ್ನು ಕನ್ನಡ ವಿಮರ್ಶೆ ಇನ್ನೂ ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

* * *

ಎಂ.ವಿ.ಸೀ. ಅವರು ಕಾವ್ಯ ರಚಿಸಿದ ಕಾಲದಲ್ಲಿ ಎರಡು ಪ್ರಬಲ ಶಕ್ತಿಗಳು ಕೆಲಸ ಮಾಡುತ್ತಿದ್ದವು.

೧) ಯುರೋಪಿನ ಅದರಲ್ಲೂ ಇಂಗ್ಲೆಂಡಿನ ಯಜಮಾನ್ಯದ ಎದುರು ತಲೆಯೆತ್ತಿದ ಸಾಂಸ್ಕೃತಿಕ ರಾಷ್ಟ್ರೀಯತೆ (Cultural Nationalism).

೨) ಯುರೋಪಿನ ಮೂಲದಿಂದ ಹೊರಟು ರಷ್ಯಾ ಮಾರ್ಗದ ಮೂಲಕ ಭಾರತವನ್ನು ಪ್ರವೇಶಿಸಿದ ಕಮ್ಯುನಿಸಂ (European Communism). ಎಂ.ವಿ.ಸೀ. ಅವರ ಕವಿತೆಗಳು ಸಾಂಸ್ಕೃತಿಕ ರಾಷ್ಟ್ರೀಯತೆಯ ಅಂಗಗಳಾದ ನಾಡಚೆಲುವು, ಸಭ್ಯತೆ, ಗಾಂಧೀಜಿಯಂಥ ಮಹಾನ್ ಚೇತನ ನಿಲುಮೆ ಇವುಗಳನ್ನು ಹಲವು ಸ್ತರಗಳಲ್ಲಿ ಅನುಸಂಧಾನಿಸಿದೆ.

ಕನ್ನಡದ ಮನಸ್ಸು ಮಹಾತ್ಮಗಾಂಧೀಜಿಯವರ ನಿಲುವು, ವ್ಯಕ್ತಿತ್ವ, ಕನಸನ್ನು ಹಲವು ಬಗೆಗಳಲ್ಲಿ ಧ್ಯಾನಿಸಿ ಕವಿತೆ ಮಾಡಿದೆ. ಈ ನಿಟ್ಟಿನಲ್ಲಿ ಗಾಂಧಿವಾದದತ್ತ ಸೆಳೆತವಿದ್ದ ಸೀತಾರಾಮಯ್ಯನವರು ೧೯೪೪ರಲ್ಲಿ ಮಹಾತ್ಮ ಗಾಂಧೀಜಿಯವರನ್ನು ಅನಾರೋಗ್ಯದ ಕಾರಣದಿಂದ ಸೆರೆಯಿಂದ ಬಿಡುಗಡೆ ಮಾಡಿದಾಗ, ಅವರ ಆರೋಗ್ಯ ಕೋರಿ ಬರೆದ ಕವನ ಗಮನ ಸೆಳೆಯುವಂತಿದೆ.

"ದೇವ ಕರುಣಿಸು ಜಯದ ನಾಯಕಗೆ
ಜೀವದಿಂದುಳುಹೆಮಗೆ ನಾಡ ಬಿಡುಗಡೆಗೆ

ಹಿಂಸೆಯನ್ನಡಗಿಸಲು, ಹಿಂಸಕರನೆದುರಿಸೆ, ಅ
ಹಿಂಸೆಯೆನ್ನುವ ಹಿರಿಯ ತತ್ತ್ವವನು ಸಾರಿ,
ಧ್ವಂಸಕರ ಲೋಕದಲಿ ಶಾಂತಿ ಮೂಡಿಸೆ, ಪರಮ-
ಹಂಸ ಸಂದೇಶವಾಚರಿಸುತಿಹ ಗಾಂಧಿಗೆ"

(-'ಮಹಾತ್ಮರ ಶ್ರೇಯಃ ಪ್ರಾರ್ಥನೆ')

'ಅಶೋಕ ಚಕ್ರ' ಕವನ ಸಂಕಲನದಲ್ಲಿ ಅನೇಕ ಬಗೆಯ ಸಾಂಸ್ಕೃತಿಕ ರಾಷ್ಟ್ರವಾದದ ಕವನಗಳಿವೆ. ಭಾರತವೆನ್ನುವುದಕ್ಕೆ ೫೦೦೦ ವರ್ಷಗಳ ಹಲವು ಸ್ತರಗಳ ಜೀವನ ವೈವಿಧ್ಯತೆ, ರಸವಿದೆ. ಅದು ಬ್ರಿಟಿಷರ ವಸಾಹತುಶಾಹಿಯಲ್ಲಿ ಕೇವಲ ೧೫೦ ವರ್ಷಗಳಿಂದ ಹೊರಟ ರಾಜಕೀಯಾತ್ಮಕ ರಾಷ್ಟ್ರವಾದವಲ್ಲ ಎಂಬ ನಿಲುವು ಎಂ.ವಿ.ಸೀ. ಅವರ ಹಲವು ಕವಿತೆಗಳಲ್ಲಿದೆ.

೧. "ಸ್ವತಂತ್ರ ಭಾರತದರುಣೋದಯದ
ಮುಂಗಿರಣವದೋ ಮೂಡುತಿದೆ;
ಶತಮಾನದ ಮೇಲಿನ ಕಡು ದಾಸ್ಯವ
ಭಂಗಗೈದ ತಮವೋಡುತಿದೆ"

(ಜಯವಾಗಲಿ ಇಳೆಗೆಲ್ಲ ಜಯ)

೨. "ಇಂದಿನ ಜಯ ಹೊರಶಕ್ತಿಯ ಹುಸಿಜಯ
ಹಿಂಗಲಿಲ್ಲ ಲೋಕದೊಳು ಭಯ;
ಮುಂದೆ ಭಾರತವು ತೋರುವ ಆತ್ಮದ
ಜಯವಾಗಲಿ ಇಳೆಗೆಲ್ಲ ಜಯ"

(ಅದೇ)

೩. "ಎನಿತೊ ಶತಮಾನಂಗಳಿಂದವರ ನಾವ್ ತುಳಿದು
ಗೈದ ಪಾಪದ ಫಲವೆ ನಮ್ಮ ಇಂದಿನ ದಾಸ್ಯ;"

(ಅಸ್ಪೃಶ್ಯನಾರು?)

೪. "ಮತದ ಮೈಲಿಗೆ ಕಳೆದು ಒಮ್ಮತದ ಮಡಿಯುಟ್ಟು
ಸ್ವಾತಂತ್ರ್ಯ ಮಂದಿರದೊಳೆಲ್ಲ ನೆರೆದು
ಭಾರತಾಂಬೆಯನೇಕನಿಷ್ಠೆಯಲಿ ಭಜಿಪಂತೆ
ಹರಸು, ಹೇ! ಭಾರತದ ಭಾಗ್ಯದೈವ!"

(ಹರಸು, ಹೇ! ಭಾರತದ ಭಾಗ್ಯದೈವ)

ಬುದ್ಧ, ಕೃಷ್ಣ, ಅಶೋಕ, ಗಾಂಧಿ, ಇವರ ಆಶಯಗಳನ್ನು ಒಳಗೊಳ್ಳುವ ಹಲವು ನಿಟ್ಟಿನ ಕವನಗಳನ್ನು ಎಂ.ವಿ.ಸೀ. ರಚಿಸಿದ್ದಾರೆ. ಅವುಗಳನ್ನು ಕರ್ನಾಟಕ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಅಭ್ಯಾಸ ಮಾಡಬೇಕಿದೆ. ಯಾರಾದರೂ ಒಂದೆರಡು ಪಿಹೆಚ್.ಡಿ. ಮಾಡುವಷ್ಟು ಶಕ್ತಿ ಅವರ ಕವನ ಸಂಕಲನಗಳಲ್ಲಿದೆ.

* * *

ಉದಾರವಾದಿ ಹಿಂದೂ ದೃಷ್ಟಿಯ ಮಾಸ್ತಿಯವರ ದಾರಿ ತುಳಿದವರು ಎಂ.ವಿ.ಸೀ. ಉಗ್ರ ಪ್ರಾಂತಾಭಿಮಾನದ ಬದಲು ಎಲ್ಲರನ್ನೂ ತಮ್ಮವರೆಂದು ನೋಡುವ, ಸ್ವೀಕರಿಸುವ ದೃಷ್ಟಿ ಇವರ ಕವಿತೆಗಳ ಹಿಂದಿದೆ. ಗಾಂಧಿ ಮಾದರಿಯ ಹಿಂದೂ ದೃಷ್ಟಿ ಕವಿತೆಗಳು ಅವರಲ್ಲಿ ಹಲವಿರುವುದು ನೋಡಿದ್ದೇವೆ. ಕೊನೆಯಲ್ಲಿ ಅವರ ಕವಿತೆಗಳ ಭಾಷೆ, ಶೈಲಿ, ಛಂದಸ್ಸಿನ ವೈವಿಧ್ಯ, ಅನುವಾದಿತ ಕವನಗಳು ಇವುಗಳನ್ನೆಲ್ಲ ಅಧ್ಯಯನ ಮಾಡಬೇಕಿದೆ. ನವೋದಯದ ಮತ್ತು ಉಳಿದ ಪಂಥಗಳ ಕವಿಗಳೊಂದಿಗೆ ಎಂ.ವಿ.ಸೀ. ಅವರ ಕವಿತೆಗಳನ್ನು ತೌಲನಿಕವಾಗಿ ಓದುವ ಅವಶ್ಯಕತೆಯಿದೆ.

ಈ ಹಿಂದೆ ಎತ್ತಿದ ಪ್ರಶ್ನೆಯ ಎರಡನೆಯ ಭಾಗವಾಗಿ, ಕಮ್ಯುನಿಸಂ ಕುರಿತು ಎಂ.ವಿ.ಸೀ. ಧೋರಣೆಯ ಕಾವ್ಯಾಭಿವ್ಯಕ್ತಿ ಕುರಿತು ಕೆಲವು ಮಾತುಗಳನ್ನಾಡಬೇಕಾದ ಅವಶ್ಯಕತೆಯಿದೆ. ಬೇರೆ ಬೇರೆ ಕಾರಣಗಳಿಗಾಗಿ ಕನ್ನಡದ ಮುಖ್ಯ ಕವಿ ಸಾಹಿತಿಗಳು ಯುರೋಪ್ ಕೇಂದ್ರಿತ ಕಮ್ಯುನಿಸಂ ಜೊತೆ ಭಿನ್ನಾಭಿಪ್ರಾಯ ಹೊಂದಿದ್ದಾರೆ. ಮಾಸ್ತಿ, ಕಾರಂತ, ಅಡಿಗ, ಲಂಕೇಶ್ ಮುಂತಾದವರ ಸಾಹಿತ್ಯವನ್ನು ಅವರ ರಾಜಕೀಯ ನಿಲುವಿನ ದೃಷ್ಟಿಯಿಂದ ನೋಡಿದರೆ ಈ ಮಾತಿಗೆ ಪುರಾವೆ ಸಿಗುತ್ತದೆ.

ಎಂ.ವಿ.ಸೀತಾರಾಮಯ್ಯನವರ 'ಕಾವ್ಯಾಲಾಪ' ಒಂದು ವಿಶಿಷ್ಟ ಕವನ ಸಂಕಲನ. "ನನ್ನ ಮಾತು' ಎಂಬ ಮುನ್ನುಡಿ ರೂಪದ ಲೇಖಕನ ಮಾತಿನಲ್ಲಿ ಎಂ.ವಿ.ಸೀ. 'ಕಾವ್ಯಲಾಪ' ಹುಟ್ಟಿಕೊಂಡ ಹಿನ್ನೆಲೆಯನ್ನು ವಿವರಿಸಿಕೊಂಡಿದ್ದಾರೆ.

"ಕಾವ್ಯಲಾಪ", ೪೦-೫೦ ಪದ್ಯಗಳ ಒಂದು ತೀರ ಚಿಕ್ಕ ಪುಸ್ತಕ. ಪುಸ್ತಕ ಚಿಕ್ಕದಾದರೂ, ಅದರ ಪರಿಣಾಮ, ಅಂದಿನ ಸಾಹಿತ್ಯ ಪ್ರಪಂಚದಲ್ಲಿ ತಕ್ಕಮಟ್ಟಿಗೆ ಆಯಿತು. ರಷ್ಯದ ಅಕ್ಟೋಬರ್ ಕ್ರಾಂತಿಯ ಪ್ರಭಾವ ನನ್ನ ಮೇಲಾಗಿದ್ದರೂ, ನಾನು ಕಮ್ಯೂನಿಸಮ್ಮಿನ ಸಿದ್ಧಾಂತವನ್ನು ಪೂರ್ತಿ ಒಪ್ಪಿರಲಿಲ್ಲ. ಮಹಾತ್ಮರು ಬೋಧಿಸಿದ ಅಹಿಂಸಾಯುತ ಕ್ರಾಂತಿಯಲ್ಲಿ ನನ್ನ ನಿಷ್ಠೆ ದೃಢವಾಗಿ ನೆಲೆಸಿತ್ತು."

ನವೋದಯ ಕಾಲಘಟ್ಟದ ಕಾವ್ಯದ ತಾತ್ವಿಕತೆಯನ್ನು ಆದಷ್ಟು ಮಟ್ಟಿಗೆ ಪ್ರತಿಪಾದಿಸುವ 'ಕಾವ್ಯಾಲಾಪ', ಕನ್ನಡ ಕವಿತೆಯ ಚರಿತ್ರೆಯಲ್ಲಿ ಗಣ್ಯ ಕೃತಿಯಲ್ಲದಿದ್ದರೂ, ಗಮನಿಸಲೇಬೇಕಾದ ಕೃತಿ.

"ರಾಮಾಯಣವ ಸುಡಿರೊ ಭಾರತವ ಬಿಸುಡಿರೋ
  ಎಂದೆನಲು ಅವು ಬರಿಯ ಹಾಳೆಕಟ್ಟೆ?
ಆ ಮಹಾಕಾವ್ಯಗಳು ನಮ್ಮ ಜನಜೀವನದ
  ಹಾಸು ಹೊಕ್ಕವ ತೆಗಳೆ ನೀನೆ ಕೆಟ್ಟೆ!" (೧೮)

'ಕಾವ್ಯಲಾಪ' ಜನ್ಮ ತಳೆಯಲು ೧೯೪೭-೪೫ರ ಸುಮಾರಿನಲ್ಲಿ, ಜೋರಿದ್ದ ಪ್ರಗತಿಶೀಲ ಚಳವಳಿಯ(progressive movement) ಕೆಲವು ಧೋರಣೆಗಳು ಕಾರಣ. ಅದರ ಹಿನ್ನೆಲೆಯನ್ನು ಸ್ವತಃ ಎಂ.ವಿ.ಸೀ. ಅವರೇ ಹೀಗೆ ಕಾಣಿಸಿದ್ದಾರೆ:

"ಸಾಹಿತ್ಯ ಬಡವರ ಬವಣೆಯನ್ನು ಚಿತ್ರಿಸಬೇಕು, ಆ ಮೂಲಕ ಸರ್ವಸಮಾನತಾ ತತ್ವವನ್ನು ಪ್ರತಿಪಾದಿಸಬೇಕು-ಎಂಬ ನಿಲುವಿನಲ್ಲಿ ತಪ್ಪೇನೂ ಇಲ್ಲ. ಪ್ರಗತಿಶೀಲ

ಪಂಥದ ಬರಹಗಾರರು ಇಷ್ಟಕ್ಕೆ ನಿಲ್ಲದೆ, ಸಮಕಾಲೀನ ಕವಿಗಳು ನಿಸರ್ಗದ ವರ್ಣನೆ ಮಾಡುತ್ತಿದ್ದುದನ್ನೂ ಪ್ರಾಚೀನ ಸಾಂಸ್ಕೃತಿಕ ಪರಂಪರೆಯಲ್ಲಿ ನಿಷ್ಠೆಯುಳ್ಳವರಾಗಿದ್ದುದನ್ನೂ ಕಟುವಾಗಿ ಟೀಕಿಸಿದರು; ....ಇವರು ಪ್ರಗತಿಶೀಲರ ದೃಷ್ಟಿಯಲ್ಲಿ ಪ್ರತಿಗಾಮಿಗಳಾದರು. ಹರೆಯದ ಬಿಸಿರಕ್ತದ "ರಾಘವ"ನಿಗೆ ಇದು ಸಹಿಸಲಿಲ್ಲ. ಪ್ರಗತಿಶೀಲ ಸಾಹಿತ್ಯದ ನಿಲುವನ್ನು ಪದ್ಯರೂಪದಲ್ಲಿ ಪ್ರತಿಭಟಿಸುತ್ತಾ, ಆ ಗುಂಪಿನೊಂದಿಗೆ ಏಕಾಂಗಿಯಾಗಿಯೇ ಹೋರಾಡಿದನು." (ನನ್ನ ಮಾತು)

ಉದಾರ ಮನಸ್ಸಿನ ಸೌಜನ್ಯದಿಂದ ಕೂಡಿದ ಎಂ.ವಿ.ಸೀ. 'ಕಾವ್ಯಾಲಾಪ'ಕ್ಕೆ ವಿರುದ್ಧವಾಗಿ 'ವ್ಯರ್ಥಾಲಾಪ' ಕವನ ಸಂಕಲನ ಬಂತೆಂದು ದಾಖಲಿಸಿ, ತಮ್ಮ ಬರೆಹದಿಂದ ಪ್ರಗತಿಶೀಲದ ಕಾವು ತಗ್ಗಿತು ಎಂದು ತಾವೇದೂ ಭಾವಿಸಿಲ್ಲ ಎಂದೂ ಬರೆಯುತ್ತಾರೆ. ಪ್ರಗತಿಶೀಲ ಕಾವ್ಯದ ಅಳಿವಿಗೆ ಅವರು ಕೊಡುವ ಕಾರಣ "ಅದರ ಸಿದ್ಧಾಂತ ತಳಹದಿಯೇ ಕಾವ್ಯತತ್ತ್ವಕ್ಕೆ ವಿರುದ್ಧವಾದದ್ದರಿಂದ ಬೇಗನೆ ನಿಂತುಹೋಯಿತು." (ನನ್ನ ಮಾತು)

ಈ ಅಸ್ತವ್ಯಸ್ತ ಜಗತ್ತಿನಲ್ಲಿ ನಮ್ಮ ಬದುಕುಗಳೇ ಹರಿದು ಹಂಚಿಹೋಗಿವೆ. ಆಸಕ್ತಿಗಳೂ ದಿಕ್ಕಾಪಾಲಾಗಿವೆ. ಕಾವ್ಯಕ್ಕೆ ಸಂಬಂಧಿಸಿದ ಒಟ್ಟು ಸ್ಪಂದನವನ್ನು ಹಿಡಿದು ಕೇಂದ್ರಕ್ಕೆ ತರುವಲ್ಲಿ ಇಂಥ ಸಮಗ್ರಗಳು ನೆರವಿಗೆ ಬರಬಹುದೆನಿಸುತ್ತದೆ. ಪ್ರೊ. ಎಂ.ವಿ.ಸೀ. ಅವರ ಸಮಗ್ರ ಕಾವ್ಯ ಸಂಪುಟವು ಕಾವ್ಯ ಕುರಿತು ಅದರಲ್ಲೂ ನವೋದಯ-ಪ್ರಗತಿಶೀಲ ಸಾಹಿತ್ಯ ಕುರಿತು ಹೊಸ ಒಳನೋಟ ಕೊಡುವುದರಲ್ಲಿ ಸಂಶಯವಿಲ್ಲ.

* * *

ಈ ಸಮಗ್ರ ಕಾವ್ಯ ಸಂಪುಟದಲ್ಲಿ ಎಂ.ವಿ.ಸೀ. ಅವರು 'ಹಂಸಪಥ'ದಲ್ಲಿ ಪ್ರಕಟಿಸಿದ್ದ, ಆದರೆ ಅವರ ಮೂಲ ಸಂಕಲನಗಳಲ್ಲಿ ಈಗಾಗಲೇ ಸೇರಿರುವ ಕವನಗಳನ್ನು ಕೈಬಿಡಲಾಗಿದೆ ಎಂಬುದನ್ನು ಓದುಗರು ಗಮನಿಸಬೇಕು. ಮಕ್ಕಳ ಸಂಪುಟದಲ್ಲಿ ಸೇರಿರುವುದರಿಂದ ಇಲ್ಲಿ 'ಹೂವಾಡಗಿತ್ತಿ' ಸಂಕಲನದ ಪದ್ಯಗಳನ್ನು ಕೈಬಿಡಲಾಗಿದೆ.

## ಕೃತಜ್ಞತೆ

ಪ್ರೊ. ಎಂ.ವಿ.ಸೀತಾರಾಮಯ್ಯನವರ ಸಮಗ್ರ ಕಾವ್ಯ ಸಂಪುಟವನ್ನು ಹೊರತರಲು ಸಹಾಯ ಮಾಡಿದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳಿಗೆ, ಈ ಸಂಪುಟ ಸರಣಿಯನ್ನು ಪ್ರಕಟಿಸುತ್ತಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಿಗೆ ಮತ್ತು ಆಡಳಿತ ವರ್ಗದವರಿಗೆ ಕೃತಜ್ಞತೆಗಳು. ಪ್ರೊ.ಎಂ.ವಿ.ಸೀ. ಅವರ ಸುಪುತ್ರರಾದ ಎಂ.ಎಸ್. ಭಾಸ್ಕರ್ ಅವರಿಗೆ ವಿಶೇಷ ನಮನಗಳು.

'ನಿನಗಿದೊ ನಿನದೆ ನೂಲು' ಇದು ರಾಘವರದ್ದೇ ಒಂದು ಸಾಲು. ಪ್ರೊ. ಎಂ.ವಿ.ಸೀತಾರಾಮಯ್ಯನವರ ಸಮಗ್ರ ಕಾವ್ಯ ಸಂಪುಟವನ್ನು ಸಂಪಾದಿಸಲು ಸಹಕಾರ ನೀಡಿದ ಎಲ್ಲರನ್ನೂ ಕೃತಜ್ಞತೆಯಿಂದ ನೆನೆಸಿಕೊಳ್ಳುತ್ತೇನೆ.

**–ಡಾ. ಜಿ.ಬಿ. ಹರೀಶ**

## ‘ಯೋಜನೆಯನ್ನು ಕುರಿತು’
## ಎಂ.ವಿ.ಸೀ. ಜನ್ಮಶತಮಾನೋತ್ಸವ–ಹಸ್ತಪ್ರತಿ ಅಧ್ಯಯನವರ್ಷ

ಪ್ರೊ. ಎಂ.ವಿ. ಸೀತಾರಾಮಯ್ಯನವರು ಕನ್ನಡ ಸಾಹಿತ್ಯದಲ್ಲಿ ಮರೆಯಲಾಗದ ಸೇವೆಯನ್ನು ಸಲ್ಲಿಸಿ ‘ರಾಘವ’ ಕಾವ್ಯನಾಮದ ಕವಿ, ಕಲಾವಿದ, ವಿದ್ವಾಂಸರಾಗಿ ಹೆಸರು ಮಾಡಿದ್ದಾರೆ. ಕಥೆ, ಕಾದಂಬರಿ, ಕವನ, ಲಲಿತಪ್ರಬಂಧ, ನಾಟಕ, ಮಕ್ಕಳ ಸಾಹಿತ್ಯದಂತ ಸೃಜನಶೀಲ ಸಾಹಿತ್ಯ ಪ್ರಕಾರದಲ್ಲಿ ಪ್ರಮುಖರಾಗಿದ್ದಾರೆ. ಪಾಂಡಿತ್ಯ ಕ್ಷೇತ್ರದಲ್ಲೂ ಅಪಾರವಾದ ವಿದ್ವತ್ತನ್ನು ದಾಖಲಿಸಿರುವ ಶ್ರೇಷ್ಠದರ್ಜೆಯ ವಿದ್ವಾಂಸರಾಗಿದ್ದಾರೆ. ಕನ್ನಡದ ಮೊಟ್ಟಮೊದಲ ಕೃತಿ ‘ಕವಿರಾಜಮಾರ್ಗ’ವನ್ನು ಶ್ರೀವಿಜಯಕೃತವೆಂದು ನಿರ್ಣಯಿಸಿದ ಕೀರ್ತಿ ಇವರದ್ದು, ತಿಮ್ಮಪ್ಪದಾಸರ ಕೃತಿಗಳ ಮೂಲಕ ಅದ್ವೈತ ಕೀರ್ತನ ಸಾಹಿತ್ಯವನ್ನು ಪರಿಚಯಿಸಿದ್ದಾರೆ. ಪ್ರಾಚೀನ ಕನ್ನಡ ವ್ಯಾಕರಣ, ಕನ್ನಡ ಕಾವ್ಯಮೀಮಾಂಸೆಯಂತಹ ‘ಶಾಸ್ತ್ರಸಾಹಿತ್ಯ’ವನ್ನು ತಲಸ್ಪರ್ಶಿ ಶೋಧಿಸಿದ್ದಾರೆ.

ನಾಡು–ನುಡಿ, ಹೋರಾಟ–ಸಂಘಟನಾ ಕ್ಷೇತ್ರದಲ್ಲೂ ಎಂ.ವಿ.ಸೀ.ಯವರು ಸಾಧಕರಾಗಿದ್ದಾರೆ. ಇಳಿವಯಸ್ಸಿನಲ್ಲೂ ಅನಾರೋಗ್ಯದ ನಡುವೆಯೂ ಕನ್ನಡಪರ ಹೋರಾಟಗಳಲ್ಲಿ ಮುಂಚೂಣಿಯಲ್ಲಿರುತ್ತ ಕಾರ್ಯಕರ್ತರನ್ನು ಪ್ರೋತ್ಸಾಹಿಸುತ್ತಿದ್ದರು. ಆಚಾರ್ಯ ಬಿ.ಎಂ.ಶ್ರೀ ಅವರ ಹೆಸರಿನಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸ್ಥಾಪಿಸಿ ನಾಡಿನ ಹೆಮ್ಮೆಯ ಸಂಶೋಧನ ಸಂಸ್ಥೆಯಾಗಿ ಕಟ್ಟಿದರು.

ಇಂತಹ ಹಲವು ಸಾಧನೆಗಳ ನೇತಾರರಾದ ಎಂ.ವಿ. ಸೀತಾರಾಮಯ್ಯನವರು ಪ್ರತಿಷ್ಠಾನದ ಮೂಲಕ ‘ಹಸ್ತಪ್ರತಿಶಾಸ್ತ್ರ’ ಎಂಬ ನೂತನ ಸಂಶೋಧನ ಕ್ಷೇತ್ರವನ್ನೇ ತೆರೆದು, ಅಳಿಸಿಹೋಗುತ್ತಿದ್ದ ಪ್ರಾಚೀನ ಓಲೆಗರಿ–ಕಾಗದದ ಹಸ್ತಪ್ರತಿಗಳ ಸಂಗ್ರಹ–ಸಂರಕ್ಷಣೆಯತ್ತ ನಾಡಿನ ಗಮನ ಸೆಳೆದು ಹೊಸಪಡೆ ನಿರ್ಮಾಣವಾಗಲು ಪ್ರೇರಕರಾದರು. ಇದೀಗ ಈ ಕ್ಷೇತ್ರ ಸುಪುಷ್ಟವಾಗಿ ಬೆಳೆದು ‘ಹಸ್ತಪ್ರತಿ ಅಧ್ಯಯನ’ ಎಂಬ ಇನ್ನೊಂದು ಸಂಶೋಧನ ಕ್ಷೇತ್ರವನ್ನು ರೂಪಿಸುತ್ತಿದೆ. ಇದನ್ನು ಇನ್ನಷ್ಟು ವ್ಯಾಪಕವಾಗಿಸುವ ಉದ್ದೇಶದಿಂದ ಎಂ.ವಿ.ಸೀ. ಅವರ ಶತಮಾನೋತ್ಸವ ವರ್ಷವನ್ನು ‘ಹಸ್ತಪ್ರತಿ ಅಧ್ಯಯನ ವರ್ಷ’ ಎಂದು ಘೋಷಿಸಿ ನಾಡಿನಾದ್ಯಂತ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಎಂ.ವಿ.ಸೀ. ಸಮಗ್ರ ಸಾಹಿತ್ಯ, ಸಂಸ್ಮರಣ ಸಂಪುಟ ಮತ್ತು ಇನ್ನೂ ಕೆಲವು ಕೃತಿಗಳ ಪ್ರಕಟಣೆ, ರಾಜ್ಯಾದ್ಯಂತ ವಿಚಾರಗೋಷ್ಠಿ, ನಾಡು–ನುಡಿ ಜಾಗೃತಿ ಕಾರ್ಯಕ್ರಮಗಳನ್ನು, ಕಮ್ಮಟಗಳನ್ನು ನಡೆಸುವುದು ಇತ್ಯಾದಿ ಹಲವು ಯೋಜನೆಗಳನ್ನು ಹಮ್ಮಿಕೊಳ್ಳಲಾಗಿತ್ತು.

ಈ ಯೋಜನೆಗಳಲ್ಲಿ ಬಹಳ ಮುಖ್ಯವಾದದ್ದು ಸಮಗ್ರ ಸಾಹಿತ್ಯ ಸಂಪುಟ ಪ್ರಕಟಣೆ. ಇದನ್ನು ಕನ್ನಡ ಸಂಸ್ಕೃತಿ ಇಲಾಖೆ ಪೂರ್ತಿಯಾಗಿ ವಹಿಸಿಕೊಂಡು ನಮ್ಮ ಬಹುದೊಡ್ಡಭಾರವನ್ನು ಇಳಿಸಿರುವುದಕ್ಕಾಗಿ ಪ್ರತಿಷ್ಠಾನ ಇಲಾಖೆಯ ಕಾರ್ಯದರ್ಶಿಗಳಿಗೂ, ನಿರ್ದೇಶಕರಿಗೂ ಕರ್ನಾಟಕ ಸರ್ಕಾರಕ್ಕೂ ಆಭಾರಿಯಾಗಿದೆ.

ಇದರ ಫಲವಾಗಿ ಇದೀಗ ನಿಮ್ಮ ಮುಂದೆ ಈ ಸಂಪುಟಗಳಿವೆ.

ಈ ಸಂಪುಟಗಳ ಸಿದ್ಧತೆಗೆ ಉತ್ಸವ ಸಮಿತಿ ಒಂದೊಂದು ಸಂಪುಟಕ್ಕೆ ಒಬ್ಬೊಬ್ಬ ಸಂಪಾದಕರನ್ನು ನಿಯೋಜಿಸಲು ತೀರ್ಮಾನಿಸಿ ಇಲಾಖೆಗೆ ಸೂಚಿಸಿತು. ಇಲಾಖೆ ನಮ್ಮ ಸೂಚನೆಯನ್ನು ಅಂಗೀಕರಿಸಿ ಅವರುಗಳಿಗೇ ಆಯಾ ಸಂಪುಟಗಳ ಸಂಪಾದನೆಯ ಹೊಣೆಯನ್ನು ವಹಿಸಿದೆ. ಆಯಾ ಸಂಪಾದಕರು ತಮ್ಮ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅವರುಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಎಂ.ವಿ.ಸೀತಾರಾಮಯ್ಯನವರು ೧೦೦ ಗ್ರಂಥಗಳನ್ನೂ, ನೂರಾರು ಲೇಖನಗಳನ್ನೂ ಬರೆದಿದ್ದು, ಅವುಗಳನ್ನೆಲ್ಲ ೧೨ ಸಂಪುಟಗಳಲ್ಲಿ ಅಡಕಗೊಳಿಸಿ ಯಾವ ಯಾವ ಸಂಪುಟಗಳಲ್ಲಿ ಯಾವ ಯಾವ ಕೃತಿ–ಲೇಖನಗಳಿರಬೇಕೆಂಬ ಸಂಯೋಜನೆಯ ಜವಾಬ್ದಾರಿಯನ್ನು ಕಾರ್ಯದರ್ಶಿಗಳಾದ ಡಾ. ನಾ. ಗೀತಾಚಾರ್ಯ ಅವರು ನಿರ್ವಹಿಸಿದ್ದಾರೆ ಅವರೊಂದಿಗೆ ಇನ್ನೊಬ್ಬ ಕಾರ್ಯದರ್ಶಿಗಳಾದ ಎಸ್.ವಿ. ಶ್ರೀನಿವಾಸರಾವ್ ಸಹಕರಿಸಿದ್ದಾರೆ. ಅವರಿಗೆ ಸಮಿತಿ ಕೃತಜ್ಞವಾಗಿದೆ. ಅದರಂತೆಯೇ ಈ ಸಂಪುಟಗಳು ಸಿದ್ಧವಾಗಿದ್ದು, ಈ ರೀತಿ ವಿಂಗಡಿಸಲಾಗಿದೆ.

೧) ಎಂ.ವಿ.ಸೀ. ಕಾವ್ಯ ಸಂಪುಟ
೨) ಎಂ.ವಿ.ಸೀ. ಸಣ್ಣಕಥೆಗಳ ಸಂಪುಟ
೩) ಎಂ.ವಿ.ಸೀ. ಪ್ರಬಂಧಗಳು, ವ್ಯಕ್ತಿಚಿತ್ರಗಳ ಸಂಪುಟ
೪) ಎಂ.ವಿ.ಸೀ. ಕಾವ್ಯಮೀಮಾಂಸೆ – ಸಾಹಿತ್ಯ ವಿಮರ್ಶೆ
೫) ಎಂ.ವಿ.ಸೀ. ಅವರ ಮಕ್ಕಳ ಸಾಹಿತ್ಯ ಮತ್ತು ನಾಟಕ ಸಂಪುಟ
೬) ಎಂ.ವಿ.ಸೀ. ಅವರ ವ್ಯಾಕರಣ, ಛಂದಸ್ಸಂಪುಟ
೭) ಎಂ.ವಿ.ಸೀ. ಅವರ ಮುನ್ನುಡಿ – ಲೇಖನ – ಭಾಷಣ ಸಂಪುಟ
೮) ಎಂ.ವಿ.ಸೀ. ಜೀವನ ಚರಿತ್ರೆ – ಅನುವಾದ ಸಂಪುಟ
೯) ಎಂ.ವಿ.ಸೀ. ಅವರ ಗ್ರಂಥಸಂಪಾದನೆ – ಹಸ್ತಪ್ರತಿಶಾಸ್ತ್ರ ಸಂಪುಟ
೧೦) ಎಂ.ವಿ.ಸೀ. ಅವರ ವಿಚಾರ ಸಾಹಿತ್ಯ ಸಂಪುಟ
೧೧) ಎಂ.ವಿ.ಸೀ. ಅವರ ಇಂಗ್ಲಿಷ್ ಲೇಖನ ಸಂಪುಟ
೧೨) ಎಂ.ವಿ.ಸೀ. ಅವರ ಕಾದಂಬರಿ ಸಂಪುಟ

ತಮ್ಮ ಕೃತಿಗಳ ಹಕ್ಕನ್ನು ಎಂ.ವಿ.ಸೀ. ಅವರೇ ಉಯಿಲಿನ ಮೂಲಕ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಅದನ್ನು ಅವರ ಮಕ್ಕಳಾದ ಎಂ.ಎಸ್. ಭಾಸ್ಕರ್, ಎಂ.ಎಸ್. ರಾಮಪ್ರಸಾದ್, ಎಸ್.ಟಿ. ರಾಧಾಕೃಷ್ಣ, ಎಂ.ಎಸ್. ಶೇಷಾದ್ರಿನಾಥ್ ಮತ್ತು ಶಾರದಾನಾಗರಾಜ್ ಅವರುಗಳು ಸಮ್ಮತಿಸಿ ಸಂತೋಷವಾಗಿ ಪ್ರತಿಷ್ಠಾನದೊಂದಿಗೆ, ಕನ್ನಡ ಸಂಸ್ಕೃತಿ ಇಲಾಖೆಗೆ ಕೈಜೋಡಿಸುವ ಮೂಲಕ ಕನ್ನಡದ ಧೀಮಂತಸಾಹಿತಿ – ವಿದ್ವಾಂಸ – ಸಂಘಟಕ ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಈ ಶತಮಾನೋತ್ಸವ ಸಂದರ್ಭದಲ್ಲಿ ಕನ್ನಡಿಗರಿಗೆ ದೊರಕುವಂತಾಗಿರುವುದಕ್ಕೆ ನಮಗೆ ಸಂತಸವಾಗಿದೆ.

**ನಾಡೋಜ ಜಿ. ನಾರಾಯಣ**
ಅಧ್ಯಕ್ಷರು

**ನಾಡೋಜ ಜಿ. ವೆಂಕಟಸುಬ್ಬಯ್ಯ**
ಗೌರವಾಧ್ಯಕ್ಷರು

# ಪರಿವಿಡಿ

## ಆ ಚಿತ್ರಗಳು ಮತ್ತು ಕಥನ ಕವನಗಳು (೧೯೪೬)



## ರಾಗ (೧೯೪೬)

## ಬೀಸಿ ಬಂದ ಗಾಳಿ (೧೯೮೦)

ನನ್ನ
ಕನ್ನಡ ವಿದ್ಯಾಗುರುಗಳು
ಕಾವ್ಯ ಗುರುಗಳು
ಶ್ರೀ
ಅವರ ಅಡಿದಾವರೆಗಳಲ್ಲಿ
ಭಕ್ತಿಯ ಕಾಣಿಕೆ

# ಬಿನ್ನಹ

ಇದು ನನ್ನ ಮೊದಲ ಕವನ ಸಂಗ್ರಹ. ೧೯೨೯ರಿಂದ ಮೊದಲುಗೊಂಡು ಇಂದಿನವರೆಗೆ ಆಗೊಮ್ಮೆ ಈಗೊಮ್ಮೆ ನುಡಿಗೊಂಡು ಗೀತವಾಗಿ ಹೊಮ್ಮಿದ ನನ್ನ ಎದೆವಕ್ಕಿಯ ಉಲಿಗಳಲ್ಲಿ ಹಲವನ್ನು ಇಲ್ಲಿ ಕಾಣಬಹುದು. ಅವುಗಳನ್ನು ಕುರಿತು ಸಹೃದಯರಲ್ಲಿ ಅರಿಕೆ ಮಾಡಿಕೊಳ್ಳಬೇಕಾದ ಮಹತ್ವದ ವಿಷಯ ಏನೂ ಇಲ್ಲ: ಹಕ್ಕಿ ಹಾಡಿಗೆ ವ್ಯಾಖ್ಯಾನವೇಕೆ, ವಿವರಣೆಯೇಕೆ? ಹೃದಯದಿಂದ ಹೊರಟ ಉಲಿ–ಇಂಚರವೊ ಅಪಸ್ವರವೋ, ಆತ್ಮಪಕ್ಷಿಯ ಜೀವವಾಣಿಯಾದ್ದರಿಂದ–ಹೃದಯವನ್ನು ಮುಟ್ಟೀತೆಂಬ ಭರವಸೆಯ ಬೆಳಕಿನ ಕಿರಣದ ಹೊಳಹು ಒಂದೆ ಈ ಪ್ರಕಟನೆಯ ಸಾಹಸಕಾರ್ಯಕ್ಕೆ ಪ್ರಚೋದನೆ

ಇನ್ನು ಹಾಡ ಕಲಿಸಿದ ಪ್ರೇರಕ ಶಕ್ತಿಗಳಿಗೆ ಮಣಿದು ಮುಂದುವರಿಯುವುದು ನನ್ನ ಕರ್ತವ್ಯ: ಕವಿತಾರಚನೆಗೆ ಪ್ರೇರಣೆ, 'ಶ್ರೀ' ಯವರ ಇಂಗ್ಲಿಷ್ ಗೀತಗಳಿಂದ; ಸಂತತ ಪ್ರೋತ್ಸಾಹ, ಮಾರ್ಗದರ್ಶನ ಶ್ರೀ ತೀ.ನಂ.ಶ್ರೀಯವರಿಂದ; ಇವರುಗಳು ನನ್ನ ಕಾವ್ಯಗುರುಗಳು ಮಾತ್ರವಲ್ಲದೆ ವಿದ್ಯಾಗುರುಗಳೂ ಆಗಿದ್ದಾರೆ. ಈ ನನ್ನ ಅಲ್ಪ ಕೃತಿ ಕಾಣಿಕೆಯನ್ನು ಸ್ವೀಕರಿಸಲೊಪ್ಪಿದುದು 'ಶ್ರೀ' ಯವರ ಔದಾರ್ಯ, ಶಿಷ್ಯವಾತ್ಸಲ್ಯ; ಕವನಗಳನ್ನು ಆಯ್ಕೆಮಾಡುವುದರಿಂದ ಹಿಡಿದು ಕರಡಚ್ಚು ತಿದ್ದುವರೆಗೆ ನೆರವಾಗಿ ಬೆಂಬಲವಾಗಿರುವುದು ತೀ.ನಂ.ಶ್ರೀಯವರ ಅಭಿಮಾನ, ಭ್ರಾತೃವಾತ್ಸಲ್ಯ. ನನ್ನನ್ನು ಹರಸಿರುವ ಈ ಇಬ್ಬರು ಮಹನೀಯರಿಗೂ ನನ್ನ ತುಂಬು ಕೃತಜ್ಞತೆಯನ್ನು ಯಾವ ರೀತಿ ತಿಳಿಸಬೇಕೊ ನಾನರಿಯೆ: ಅದು ಮಾತಿಗೆ ಮೀರಿದ್ದೆಂದು ಮಾತ್ರ ಸೂಚಿಸಬಲ್ಲೆ.

ಸಂಕಲನದ ವಿಚಾರ ಒಂದೆರಡು ಮಾತು: ಇಲ್ಲಿ ಆಯ್ದುಕೊಟ್ಟಿರುವ ಭಾವಗೀತೆಗಳು ಕಳೆದ ಹತ್ತು ಹದಿನೈದು ವರ್ಷಗಳ ಬೆಳಸು. ಇಷ್ಟು ದೀರ್ಘಾವಧಿಯಲ್ಲಿ ಬರೆದ ಕನವಗಳ ಸಂಖ್ಯೆ ಕಡಮೆಯೆ; ಅವುಗಳಲ್ಲಿ ಕೂಡ ಕೇವಲ ಆರಂಭದಶೆಯಲ್ಲಿ ಬರೆದ ಇಲ್ಲವೆ ಒಪ್ಪಿತವಾಗದ ಹಲಕೆಲವನ್ನು ಇಲ್ಲಿ ಸೇರಿಸಿಲ್ಲ. ಕೆಲವು ಪ್ರಣಯ ಗೀತಗಳನ್ನೂ ಕಥನ ಕವನಗಳನ್ನೂ ಬೇರೆ ಎರಡು ಸಂಕಲನಗಳಿಗಾಗಿ ಮೀಸಲುಳಿಸಿದ್ದೇನೆ, ಅವುಗಳ ಪ್ರಕಟನೆಯ ನಿರೀಕ್ಷೆಯಲ್ಲಿದ್ದೇನೆ. ಇಲ್ಲಿ ಆಯ್ದುಕೊಟ್ಟಿರುವವುಗಳಲ್ಲಿ ಕೂಡ ಎಲ್ಲವೂ ಒಂದೇ ಮಟ್ಟದವೆಂದು ನಾನು ಭಾವಿಸಿಲ್ಲ; ಹಾಗೆ ಇರುವುದು ಸಾಧ್ಯವೂ ಇಲ್ಲ. ಕವನಗಳನ್ನು ಅವುಗಳ ವಿಷಯ, ಭಾವ ಮತ್ತು ವಸ್ತುಗಳ ಅನುಗುಣ್ಯದ ದೃಷ್ಟಿಯಿಂದ ಜೋಡಿಸಲಾಗಿದೆ. ಬೇರೆ ಬೇರೆ ಕವಿಗಳ ಕವನ ಸಂಗ್ರಹಗಳು ಹಲವಾರು ಈಗಾಗಲೇ ಪ್ರಕಟಗೊಂಡ ಮೇಲೆ ಅವುಗಳ ಅನುಕೃತಿಗಳು ಹುಟ್ಟಿಕೊಂಡದ್ದು ನನ್ನ ಗಮನಕ್ಕೆ

ಬಂದಿರುವುದರಿಂದಲೂ ಅಲ್ಲಿನ ಕವನಗಳಿಗೂ ಇಲ್ಲಿನವಕ್ಕೂ ಎಲ್ಲಿಯಾದರೂ ಕ್ವಚಿತ್ತಾಗಿ ಭಾವಸಾಮ್ಯವಿರಬಹುದಾದ್ದು ಅಸಂಭವವೇನಲ್ಲವಾದುದರಿಂದಲೂ, ನನ್ನ ಕವನಗಳು ಒಂದೆರಡು ಪತ್ರಿಕೆಗಳಲ್ಲಿ ಪ್ರಕಟಗೊಂಡ ಮೇಲೆ ಅವುಗಳ ಅನುಕೃತಿಗಳು ಹುಟ್ಟಿಕೊಂಡದ್ದು ನನ್ನ ಗಮನಕ್ಕೆ ಬಂದಿರುವುದರಿಂದಲೂ ಕವನಗಳ ರಚನಾ ಕಾಲವನ್ನು ಕೊಡುವುದು ಅವಶ್ಯಕವೆನಿಸಿ ಹಾಗೆಯೇ ಮಾಡಿದ್ದೇನೆ. ಅನುದ್ದಿಷ್ಟವಾದ ಭಾವಸಾಮ್ಯಕ್ಕಾಗಿ ಯಾರೂ ವಿಷಾದಪಡಲಾರರು; ಕೃತಿಚೌರ್ಯ ಮಾತ್ರ ಅಕ್ಷಮ್ಯ ಅಪರಾಧ. ಈ ಸಂಕಲನದಲ್ಲಿ 'ಗೋಳು' ಎಂಬ ಕನವ Denis Mecarhy ಎಂಬವರ 'Lament' ಎಂಬ ಇಂಗ್ಲಿಷ್ ಕವನದ, 'ಅಪವಾದ' ಎಂಬುದು ಅನಾಮಕ ಕವಿಯೊಬ್ಬನ (Anonymous) 'Slander' ಎಂಬ ಇಂಗ್ಲಿಷ್ ಕವನದ ಭಾವಾನುವಾದಗಳು ಎಂಬ ಅಂಶವನ್ನು ಈ ಸಂದರ್ಭದಲ್ಲಿ ಸೂಚಿಸುವುದು ನನ್ನ ಕರ್ತವ್ಯ. 'ನನ್ನಮನೆ', 'ಬಾ ಬಾ ಚಂದಿರ', 'ತಿರುಕಿಯ ಮೊರೆ' ಎಂಬೀ ಕೃತಿಗಳು ನಾನು ಬರೆದ ನಾಟಕವೊಂದರಲ್ಲಿ ಬರುವ ಹಾಡುಗಳು; ಅಥವಾ ಹಾಗೆಂದು ಬರೆದವು. ಈ ಒಟ್ಟು ಸಂಕಲನದ ಅಣಿಪಾಡಿನಲ್ಲಿ ತೀ.ನಂ. ಶ್ರೀಯವರು ನನಗೆ ನೆರವಾಗಿರುವವರಾದರೂ ಅದರಲ್ಲಿನ ಅನೌಚಿತ್ಯ ಲೋಪ ದೋಷಗಳಿಗೆ ನಾನೊಬ್ಬ ಮಾತ್ರ ಹೊಣೆ.

ಗಮಕಿಗಳೂ ಕಾವ್ಯವಾಚನ ಮಾಡುವವರೂ ಹೊಸ ಕನ್ನಡ ಭಾವಗೀತಗಳನ್ನು ಸುಶ್ರಾವ್ಯವಾಗಿ ವಾಚನಮಾಡಿ ಹೊಸ ಕನ್ನಡ ಕಾವ್ಯಕ್ಕೆ ದೊಡ್ಡ ಉಪಕಾರ ಮಾಡುತ್ತಿದ್ದಾರೆ. ಆದರೆ, ಈ ಹೊಸ ಧಾಟಿಯ ಕವನಗಳನ್ನು ರಾಗ ಲಯ ಬದ್ಧವಾಗಿ ಹಾಡಲಾಗುವುದಿಲ್ಲವೆಂದು ಕೆಲವರ ಮತ. ಎಲ್ಲವನ್ನೂ ಹಾಗೆ ಹಾಡಲಾಗದಿರಬಹುದು; ಆದರೆ ಹಾಡಿಕೆಗೆ ಒದಗಿ ಬರುವಂಥವನ್ನು ಸಂಗೀತಜ್ಞರು ಸಭೆಗಳಲ್ಲಿ ಹಾಡಿದ್ದೇ ಆದರೆ ಕನ್ನಡಕ್ಕೆ ದೊಡ್ಡ ಉಪಕಾರವಾಗುವುದು. ಹಾಡಲಿಷ್ಟಪಡುವವರಿಗೆ ಅನುಕೂಲಿಸುವಂತೆ ಕವನಗಳಿಗೆ ಸ್ವರ ಜೋಡಣೆ ಮಾಡಿಸಿ ಪ್ರಕಟಿಸುವುದು ಅವಶ್ಯಕವೆಂದು ತೋರುತ್ತದೆ. ಈ ಭಾಗದಲ್ಲಿ ಸಾಕಷ್ಟು ಪ್ರಯೋಗ ನಡೆದಿರುವಂತೆ ಕಂಡುಬರುವುದಿಲ್ಲ. ಪ್ರಯೋಗಾರ್ಥವಾಗಿ ಕೆಲವು ಕವನಗಳನ್ನು ಸ್ವರಪ್ರಸ್ತಾರ ಸಹಿತ ಪ್ರಕಟಿಸಬೇಕೆಂಬ ನನ್ನ ಅಭೀಷ್ಟವನ್ನು ತಿಳಿಸಿದ ಕೂಡಲೆ ನನ್ನ ಮಿತ್ರರಾದ ವೈಣಿಕ ವಿದ್ವಾನ್ ಶ್ರೀ ಮೈಸೂರು ಎಲ್. ರಾಜಾರಾಯರು ಉತ್ಸಾಹದಿಂದ ಮುಂದೆ ಬಂದು, ಹಾಡಿಕೆಗೆ ಒದಗಿಬರುವಂಥ ಕೃತಿಗಳಲ್ಲಿ ಕೆಲವನ್ನು ಆಯ್ದು, ಅವಕ್ಕೆ ಸ್ವರಪ್ರಸ್ತಾರ ಹಾಕಿಕೊಟ್ಟು ನಾನು ಮರೆಯಲಾಗದಂಥ ಉಪಕಾರ ಮಾಡಿದ್ದಾರೆ. ಅವರಿಗೆ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು.

ಇಲ್ಲಿ ಪ್ರಕಟವಾಗಿರುವ ಕವನಗಳಲ್ಲಿ ಹಲವು, 'ಪ್ರಬುದ್ಧ ಕರ್ಣಾಟಕ', 'ಜಯಕರ್ನಾಟಕ', 'ಜೀವನ', 'ಕಥಾಂಜಲಿ', 'ಪ್ರಜಾಮತ', 'ಪ್ರಬೋಧಕ', 'ಬೆಳಕು', 'ವಿಚಾರವಾಹಿನಿ', 'ವಿಶ್ವವಾಣಿ', 'ವಿಶ್ವಭಾರತಿ', ಮೈಸೂರು 'ಯೂನಿಯನ್' ಪತ್ರಿಕೆ, 'ಕನ್ನಡ ನುಡಿ', 'ರಂಗಭೂಮಿ'–ಈ ಪತ್ರಿಕೆಗಳಲ್ಲಿ ಈ ಮೊದಲೇ ಪ್ರಕಟವಾಗಿವೆ. ಈ ಪತ್ರಿಕೆಗಳ ಉಪಕಾರ ದೊಡ್ಡದು.

ಪುಸ್ತಕದ ಪ್ರಕಟನ ಕಾರ್ಯದಲ್ಲಿ ಸತ್ಯಶೋಧನ ಪ್ರಕಟನ ಮಂದಿರದ ಒಡೆಯರು ನೆರವಾಗಿದ್ದಾರೆ; ಅವರಿಗೆ ನನ್ನ ವಂದನೆಗಳು. ಎಂದಿನಂತೆ ಪುಸ್ತಕವನ್ನು ಅಂದವಾಗಿ ಅಚ್ಚುಮಾಡಿಕೊಟ್ಟಿರುವ ಪರಿಷತ್ತಿನ ಅಚ್ಚುಕೂಟಕ್ಕೂ ನಾನು ಕೃತಜ್ಞ.

ತಾರಣ ಸಂ॥ ವೈಶಾಖ ಶು॥ ೩
(೨೫-೪-೧೯೪೪) ರಾಘವ
ಬೆಂಗಳೂರು

*The poet is a Nightingale who sits in the dark and sings to cheer its own solitude.*

***- Shelley***

# ನಾನೊಂದು ಕಿರುಸೊಡರು

ಎಲೆ ದೇವ, ನಾನೊಂದು ಕಿರುಸೊಡರು ಮಾತ್ರ ;
ಕುಡಿದೀಪವೊಂದೊಳಗೆ ಉರಿಯುತಿಹುದು ;
ಮೆಲು ಮೆಲನೆ ಉರಿಯುತಿದೆ, ತೇಜವಿಲ್ಲವೊ ಏನೊ,
ಮಿಣುಕಾಡುತಿದೆ, ನಂದಿಹೋಗಬಹುದು.

ನಾನೊಂದು ಬಡ ಸೊಡರು, ನನ್ನ ಜೀವವೆ ತೈಲ,
ನನ್ನ ನುಡಿಯದು ಬತ್ತಿ; – ಆದರೇನು ?
ತಾನುರಿವುದೇ ಸೊಡರು ತೈಲ ಬತ್ತಿಗಳಿದ್ದು
ನಿನ್ನ ಜ್ಯೋತಿಯ ಕಿಡಿಯು ಸೋಂಕದಿರಲು ?

ದೇವ, ಜ್ಯೋತಿರ್ಮಯನೆ, ನಿರುತ ಹೃದಯದೆ ನೆಲಸಿ
ಬೆಳಗಿಸೆನ್ನಾತ್ಮವನು ಕೃಪೆಯ ತೋರಿ;
ಪೂರ್ಣಪ್ರಕಾಶದಿಂದಂದು ಸೊಡರದು ಉರಿದು
ನಿನ್ನನೇ ಸೇವಿಪುದು ಬೆಳಕ ಬೀರಿ.

ಜೂನ್ ೧೯೩೧]

## ವೀಣಾ ವಾಣಿ

ದೇವಿ, ವೀಣಾ ವಾಣಿ, ನಾದ ಸ್ವರೂಪಿಣಿ,
ಸ್ವರರಾಜ್ಯ ಸಮ್ರಾಜ್ಞಿ, ಸಂಗೀತಭಾಷಿಣಿ,
ರಾಗ ಲಯ ಭಾವ ಪ್ರಪಂಚ ಪ್ರಕಾಶಿನಿ,
ನಿತ್ಯನೂತನ ಕರ್ಣಪೀಯೂಷ ವರ್ಷಿಣಿ,
ಸಕಲಜನ ಮಾನಸೋಲ್ಲಾಸ ಪ್ರದಾಯಿನಿ,
ಶ್ರೋತೃಹೃದಯಾರವಿಂದಾಕರ ವಿಕಾಸಿನಿ,
ರಸಿಕಜನ ಹೃದಯವನ ಕೇಳೀ ವಿನೋದಿನಿ,
ಭಾವುಕಾಂತಃಕರಣ ಶರಧಿ ಸಂವರ್ಧಿನಿ,–
ಓ ವಿಶ್ವಮೋಹಿನಿ ! ಓ ಮಂಜುಘೋಷಿಣಿ !
ಓ ವಾಣಿ ಕರಕಮಲ ಭೃಂಗ ಝುಂಕೃತಿ ವಾಣಿ !
ಮೊರೆಯುತಿರಲಾವಗಂ ನಿನ್ನ ಝೇಂಕಾರಂ,
ಕರ್ನಾಟ ಸಂಸ್ಕೃತಿಗೆ ನೀನಲಂಕಾರಂ;
ನಿನ್ನ ನಾದೋಪಾಸನಾಲಭ್ಯ ಸಂಸ್ಕಾರಂ
ಆತ್ಮಾನುಭವ ಸಿದ್ಧಿಗದುವೆ ಓಂಕಾರಂ !

ಜುಲೈ ೧೯೪೩]

## ಶಾರದಾ ನಿಲಯ

ಶ್ರೀ ಕೃಷ್ಣನೃಪನ ಸಂಕಲ್ಪಮಂ ತಾನಾಂತು
ಮಂತ್ರಿ ವಿಶ್ವೇಶ್ವರಂ ನಿರ್ಮಿಸಿದ ನಿಲಯಂ
ಬೆಳೆದು ಬೆಳೆಯುತಲಿಹುದು, ಹೊಗಳೆ ಭೂವಲಯಂ,
ಜನಕೆ ತಿಳಿವನು ಕೊಡುವ ಹಿರಿಯ ನೋಹಿಯ ನೋಂತು.
ಇದರ ಬಿತ್ತರ ಮೈಮೆ ಗೈಮೆಗಳ ನಾನೆಂತು
ಬಣ್ಣಿಸಲಿ ! – ಜ್ಞಾನ ವಿಜ್ಞಾನಗಳಿಗಾಗರಂ,
ಪಾಶ್ಚಾತ್ಯ ಪೌರಸ್ತ್ಯ ಸಾಹಿತ್ಯ ಸಾಗರಂ ;

ಹರಸುತಿಹಳೆಲ್ಲರನು ಶಾರದೆಯೆ ನೆಲೆನಿಂತು.
ಇಲ್ಲಿ ಕೃಷ್ಣನು ನಟ್ಟ ಕನ್ನಡವು ಮರವಾಗಿ
ಹುಸುರುಟ್ಟು ಹೂ ಬಿಡಲು, ತೀಡೆ ಕನ್ನಡ ಗಾಳಿ,
'ಶ್ರೀ'ಕಂಠದಿಂದುಲಿಯೆ ಕಲಕಂಠ ತಾನೊಂದು,
ಸುಗ್ಗಿ ಸಾರಿತು ಎಂದು ನೆರೆದುದು ಪಿಕಾಳಿ !
ಜಯಚಾಮನಾಶ್ರಯದಿ ಕನ್ನಡಕೆ ಜಯವೆಂದು
ಹಾಡುತಿವೆ ಕೋಗಿಲೆಗಳೆಲ್ಲ ಒಕ್ಕೊರಲಾಗಿ.

ಜುಲೈ ೧೯೪೧]

## ತಳಿರು

ರವಿ ಮುಳುಗುತಿಹನಲ್ಲಿ ಪಡುಗಡಲಿನಲ್ಲಿ ;
ಸವಿಯ ಸಂಜೆಯ ರಾಗ ಕೇಳುತಿದೆ ಇಲ್ಲಿ ;
ಎತ್ತ ನೋಡಿದರತ್ತ
ಬಿತ್ತರದ ಹೊಂಬೆಳಗು
ಹೊಮ್ಮಿ ಹಿರಿಹೊನಲಾಗಿ ಹರಿವ ಹೊಂಬೆಳಗು.

ಅರಳಿಮರದೆಳದಳಿರ ನೋಡದೋ ನೋಡು !
ಜರೆಯುತಿಹ, ಮೆರೆಯುತಿಹ, ಕಿರುನಗೆಯ ಬೀಡು !
ಎಳದಳಿರು, ಚೆಂದಳಿರು,
ನಳನಳಿಪ ನಲ್ದಳಿರು;–
ಹೊಂಬಿಸಿಲೊಳೆಲ್ಲವೂ ಹೊಗರ ಹೊಂದಳಿರು.

ಫಳಫಳನೆ ಹೊಳೆಹೊಳೆದು ಅಂದದಲಿ ಮೆರೆದು
ಎಳಗಾಳಿಗುದುರುತಿಹ ಹಣ್ಣೆಲೆಯ ಜರೆದು
ತೆರತೆರದಿ ನಲಿಯುತಿವೆ,
ಹುರಿದುಂಬಿ ಹಿಗ್ಗುತಿವೆ–
'ಇನ್ನೆಮ್ಮ ರಾಜ್ಯ'ವೆಂದೆನುತ ಹಿಗ್ಗುತಿವೆ.

'ವಿಶ್ವನಿಯಮಕೆ ಸಾವು ತಲೆಬಾಗಬೇಕು ;
ನಶ್ವರವು ಜೀವನವು, ಆದರದೆ ಸಾಕು;
ಕಿರುಬಾಳ ಸವಿಯನ್ನು
ತ್ವರಿತದಲಿ ಹೀರೋಣ,
ಹೀರುತೆಮ್ಮಲ್ಲಿರುವ ಬಲ್ಮೆ ತೋರೋಣ'

ಎಂದೊರೆವ ತಳಿರಿಲ್ಲಿ ಹೆಮ್ಮೆಯನು ಬೀರಿ,
ಅಂದವಾದೆಳತನದ ಸುಗ್ಗಿಯನು ಸಾರಿ,
ಹೊಂಬಿಸಿಲಿನಲಿ ಹೊಳೆದು,
ತಂಬೆಲರಿನಲಿ ತೂಗಿ,
'ತಳಿರ ರಾಜ್ಯ'ವಿದೆಂದು ಕುಣಿಯುತಿವೆ ಬೀಗಿ !

ಏಪ್ರಿಲ್ ೧೯೩೦]

## ಪಟವಾಡುತ್ತಿದೆ ನೋಡಲ್ಲಿ !

ನೀಲಿಯ ಬಣ್ಣದ ಗಾಳಿವಟ್ಟೆಯಲಿ
ರೆಕ್ಕೆಯಿಲ್ಲದಿಹ ಹಕ್ಕಿಯ ತೆರದಲಿ
ಒಕ್ಕಡೆ ಅಲುಗದೆ ನಿಂತ ನಿಲುವಿನಲಿ
ಪಟವಾಡುತ್ತಿದೆ ನೋಡಲ್ಲಿ !

ಪಟವಲ್ಲವದು, ಅದು ಪಟವಲ್ಲ–
ಬಾಲರ ಕನಸೊಳು ಸುಳಿಸುಳಿದಾಡುತ
ಮೇಲಕೆ ಚಿಮ್ಮಿದ ಬಯಕೆಯ ಬಿಂಬ !
ಪಟವಾಡುತ್ತಿದೆ ನೋಡಲ್ಲಿ !

ಎಳತನದಲಿ ನಾ ಪಟವಾಡಿಸಿದೆ–
ಸುಳಿದಾಡುತ್ತಿದೆ ಬಗೆಬಾನಿನಲಿ,

ಬೆಳೆಯುವ ಬಾಳಿನ ಬಯಕೆಯ ಬಿಂಬ !
ಪಟದ ಆಟವನು ಕಂಡಿಹೆಯಾ ?

ಗಾಳಿಯ ವೇಗವು ಮಿತಿಮೀರಿತು ಬಲು;
ಬೀಳುತಲಿದೆ ಪಟ ಬಾಂದಳದಲ್ಲಿ ;
ಏಳುತ ಬೀಳುತ ತೂಗಾಡುತ್ತಿದೆ;-
ಪಟವೇನಾಗುವುದರಿತಿಹೆಯಾ ?

ವಿಧಿಯಾಟವು ಬೀಸುವ ಬಿರುಗಾಳಿ;
ಅದರೊಳು ಬಯಕೆಯ ಪಟ ಸಿಲುಕಿಹುದು;-
ಅದು ಮೇಲೇರದೆ ? ಬೀಳದಿರುವುದೇ ?
ಪಟದಾಟವ ನೀ ಕಂಡಿಹೆಯಾ ?

ದಾರಕೆ ಸಡಿಲವ ಬಿಟ್ಟರು, ನೋಡು !
ಭಾರವ ಹಾಕುತ ಗಾಳಿಯ ಮೇಲೆ ;
ಏರುತ ಮೇಲಕೆ ಹಕ್ಕಿಯ ಮೀರಿ
ಹಾರುತಲಿದೆ ಪಟ ನೋಡಲ್ಲಿ !

ಜುಲೈ ೧೯೩೦]

## ಸ್ವರ್ಣದೀಪ

ಅಲ್ಲಿ ಅದೋ ಸ್ವರ್ಣದ್ವೀಪ !
ನುಗ್ಗಿ ಹೋಗು ಮುಂದಕೆ !
ದಾರಿಯಲ್ಲಿ ಬಿಸಿಲ ತಾಪ-
ವೆಂದು ನೀನು ಹಿಂದಕೆ

ಸರಿಯಬೇಡ; ಕಲ್ಲು ಮುಳ್ಳು
ಎಂದು ಹೇಡಿ ಬೆದರಿಸೆ
ಏಕೆ ನಿಲುವೆ ? ಬಿಸುಡು ಪೊಳ್ಳು
ಬೆದರಿಕೆಗಳನಾ ಕಡೆ.

ದಾರಿ ಸಮೆಯದೆಂದಿಗೂ
ಎಂಬ ಚಿಂತೆಯೇತಕೆ ?
ಹಾರಿಹೋಗಬೇಕು ಎಂಬ
ತವಕ ತಾಽನೇತಕೆ?
ನಡೆದು ನಡೆದು ನಡೆಯುತಿರಲು
ಕೊನೆಗೆ ಸಿಕ್ಕದೇ ಗುರಿ?
ನಿಂತ ತಾಣದಲ್ಲೆ ನಿಂತು
ಗೋಣಗೆ ಹೇಡಿಯೇ ಸರಿ.

ದ್ವೀಪವನ್ನು ಬಳಸಿಕೊಂಡು
ಕಡಲು ಮೊರೆಯುತಿರುವುದು:
ದಾರಿ ನಡೆದು ಸಾಗಲೇನು ?
ಕಡಲಿನಡ್ಡಿಯಿರುವುದು–
ಎಂದು ಬಂದ ದಾರಿಯಲ್ಲಿ
ಮರಳಿ ಹೋಗಲೇತಕೆ ?
ಒಂದೆ ಮನದೆ ಧುಽಮ್ಮಿಕ್ಕು:
ಕಡಲದೊಂದು ಕಾಲುವೆ.

ಗೆಲವಿನಲ್ಲಿ ಮನವನಿಟ್ಟು
ಸಾಗಿಹೋಗು ಮುಂದಕೆ;
ಛಲದ ಬಲವೆ ಹೊಡೆವ ಹುಟ್ಟು,
ಶ್ರದ್ಧೆಯಚಲ ನೌಽಕೆ.
ವಿಧಿಯ ಗಾಳಿಯೊದಗಿಬರಲು

ಒಳ್ಳಿತಾಯ್ತು ಪಯಣಕೆ;
ಕಡಲು ಸೆಣಸುತಡ್ಡ ಬರಲು
ಸಿದ್ಧನಾಗು ಯುದ್ಧಕೆ.

ಬಾಯಿ ತೆರೆದುಕೊಂಡು ಇಲ್ಲಿ
ಕಡಲು ಮೊರೆಯುತಿರುವುದು;
ಸ್ವರ್ಣದೀಪವದೋ ಅಲ್ಲಿ
ನಿನ್ನ ಕರೆಯುತಿರುವುದು!
ದೇವನನ್ನು ಮನದೆ ನೆನೆದು
ಧುಮುಕು ಕಡಲಿನಾಳಕೆ !
ದೇವನೊಲಿಯೆ ಸಾಕು, ಚಣದಿ
ತೇಲಿಬರುವೆ ಮೇಲಕೆ !

೧೯೩೫]

## ಬಾಳು ಕುಲುಮೆ

ಹಿರಿಬಾಳೊ ಕಿರಿಬಾಳೊ ಸೊಗಬಾಳೊ ತೆಗೆಬಾಳೊ,
ತನ್ನ ಬಾಳನು ತಾನು ಬದುಕುವದೆ ಗೆಲುಮೆ;
ಕೊರಗು ಕುಗ್ಗಿಸೆ ಮನವ ಬಾಳ ಜರಿಯಲದೇಕೆ ?
ಅರಿತು ಬದುಕುವ ಆಳ್ಗೆ ಬಾಳೊಂದು ಕುಲುಮೆ.

ಆಶೆ ತಿದಿಯೊತ್ತು; ಅದರಿಂ ನಿರಾಶೆಯ ಗಾಳಿ;
ಹೃದಯ ಕಿಡಿಗೊಳ್ಳಿ ಹೊರಡುವ ಕೊರಗು ಸುಯ್ಲು;
ತನು ಕಾದು ಕೆಂಪೇರೆ, ಬಾಳ ಸಂಕಷ್ಟಗಳು
ಅದ ತಿದ್ದೆ ಕಮ್ಮಾರ ವಿಧಿ ಹೊಡೆವ ಹೊಯ್ಲು.

ಬಾಳ ಕುಲುಮೆಗೆ ಬಿದ್ದು, ಅದರಿಂದ ಮತ್ತೆದ್ದು
ನಿಂತವನೆ ಹಿರಿಯಾಳು – ವಿಧಿಯವನ ತೊತ್ತು.
ಬಾಳ ಕಾವಿಗೆ ಬೆದರಿ ಬೆನ್ನಿತ್ತರೇನು ? ವಿಧಿ
ಬಿಡದು : ಬೀಳ್ವನು ವಿಧಿಯ ಬಾಯ್ಗವನು ತುತ್ತು.

ಜನವರಿ ೧೯೩೭]

## ಚಿಟ್ಟೆ

ತೋಟದಲ್ಲಿದ್ದುವು ಬಗೆಬಗೆ ಹೂಗಳು
ತೋಟದ ಚೆಲುವಿನ ಕಣಿಯಾಗು ;
ಆಟದ ಬೀಡನು ಒದವಿಸಿ ಚಿಟ್ಟೆಗೆ
ನೋಟಕೆ ಮೆರೆಯುತ ಚೆಲುವಾಗಿ.
ಹೂಗೊಯ್ಯಲು ನಾ ತೊಡಗಿರಲು
ಆಗೈದಿದುವು ಚಿಟ್ಟೆಗಳು.
ಅಲ್ಲಿಹ ಸುಮಗಳ ಮೇಲಡರುತ್ತ
ಉಲ್ಲಸದಿಂದಲಿ ಹಾರಾಡುತ್ತ
ಹಾರುತ ಹಾರುತ ತೋಟದಲೆಲ್ಲ
ಹೀರುತ ಮಧುವನು ಹೂಗಳಲೆಲ್ಲ
ಮರೆದುವು, ನಲಿದುವು,
ತೊರೆಯುತ ಸುಮಗಳ
ಚಿಮ್ಮುತ ಹಾರಿದುವಲ್ಲಲ್ಲಿ
ಹೊಮ್ಮುವ ಹೊಂಬಿಸಿಲೆಡೆಯಲ್ಲಿ;

ಹೂಗೊಯ್ಯುವುದನು ನಾ ಬಿಟ್ಟೆ–
ಬಿಡಿಸಿತು ಅದು ಒಂದೇ ಚಿಟ್ಟೆ!–
ಕಪ್ಪಲಿ ಬೆರೆಯುತ
ಒಪ್ಪಿದ ನೀಲಿ;
ಇರುಳಲಿ ಹೊಳೆಯುವ ತಾರೆಗಳಂದದಿ

ಬಿಳುಪಿನ ಚುಕ್ಕಿಗಳು ;
ತಾರಾನಿಕರದ ಮಧ್ಯದಿ ಮೆರೆವ
ಚಂದ್ರನ ಚೆಂದದಲಿ
ತೊಳಗುವ ಹಳದಿಯ ಸೊನ್ನೆಗಳು,
ಹೊನ್ನಿನ ಸೊನ್ನೆಗಳು–
ಹಾರುತ ಹಾರುತ ಬಂದಿತು ಮುಂದೆ
ಸೆಳೆಯುತಲೆನ್ನಯ ಮನವನ್ನೊಂದೆ.
ಕೆಂಪಿನ ಕುಸುಮವ ಕಂಡದು ಎರಗೆ
ಕುಸುಮವು ಬಾಗಿತು ಭಾರದಿ ತಿರೆಗೆ.
ಒಡನೆಯೆ ಹಾರಿತು ನಿಲ್ಲದೆಯೆ,
ಕುಸುಮದ ಕಪ್ಪವ ಕೊಳ್ಳದೆಯೆ.
ಎನ್ನಯ ನೋಟವು ಅದ ಬಿಗಿದಿರಲು
ಕುಣಿಕುಣಿದಾಡಿತು ಎಲ್ಲೆಲ್ಲು.

–ಏನೆಲೆ ಚಿತ್ರದ ಚಿಟ್ಟೆಯೆ, ನೀನು
ಹಾರುತ ಹಾರುತ ಕುಣಿಕುಣಿದು,
ಕುಣಿಸುವೆ ಎನ್ನಯ ಹೃದಯವನು !
ಹೂವಿನ ಹಸರವೆ ನಿನ್ನಯ ಲೋಕವೆ ?
ಅವುಗಳ ನೇಹವೆ ನಿನಗದು ನಾಕವೆ ?
ಕುಸುಮದ ಜೊತೆಯಲೆ ನಿನ್ನನ್ನು
ಸೃಜಿಸಿದನೇನೋ ವಿಧಿ ತಾನು !
ಹೂವಿಗೆ ಎರಗುತ ರಸವನು ಹೀರಿ,
ಅಲುಗದೆ, ಚಿತ್ರಿಸಿದಂತಿರೆ ತೋರಿ,
ಸುಮಗಳ ಜೊತೆಯಲಿ ಸುಮವಾಗಿ
ಮೆರೆಯುವೆ ಚೆಲುವಿನ ಬೀಡಾಗಿ.
ಕಾಣುವೆ ಹಾರುವ ಸುಮದಂತೆ
ಹಾರಲು ತೊಡಗಲು ಮೊದಲಂತೆ.
ನಿನ್ನಯ ಬಾಳೋ ಬಲು ಕಿರಿದು,
ನಿನ್ನಯ ಸೊಗಮಾದರೆ ಹಿರಿದು.

ಹೂವಿನ ಬಾಳನು ಹೊಂದಿರುವೆ,
ನೀನದರಲಿ ಬಲು ತಣಿದಿರುವೆ.

ಎನ್ನೀ ಬಾಳನು ತೆಗೆದುಕೊ; ನಿನ್ನ
ಕಿರಿಬಾಳನು ಕೊಡು, ಎನಗದು ಚಿನ್ನ !
ಎನ್ನಯ ಮಾತನು ಕೇಳುವೆಯ ?
ಹೊನ್ನಿನ ಬಾಳನು ನೀಗುವೆಯ ?
ಏನೆಲೆ ಚಿಟ್ಟೆ,
ಎನ್ನನು ಬಿಟ್ಟೆ !–
ನಲಿಯುತ ನಲಿಯುತ ತೋಟದಲಿ
ಸುಮವಾದೆಯೊ, ನೀ ಮಾಯದಲಿ ?

ಜನವರಿ ೧೯೩೦]

## ದಾಳಿಂಬೆ ಹೂ

ತಂಗಿಯು ದಾಳಿಂಬದ ಹೂ ಕೇಳಲು
ಮರದಡಿ ಸೇರಿದೆನದಕಾಗಿ ;
ಆದರು ಮನವೇ ಬಾರದು ಕೀಳಲು,
ನಿಂತೆನು ಹೂವಿಗೆ ಮನವೋಗಿ;
ನೋಡಲು ಗಿಡವೆಲ್ಲಾ ಕಡುಗೆಂಪು !
ಹಾಡುವ ಹಕ್ಕಿಯ ಬೀಡಿನ ಪೆಂಪು !

ಪಡುವಲ ದಿಕ್ಕಲಿ ಸಂಜೆಯ ರಾಗ,
ದೆಸೆದೆಸೆಯಲಿ ತುಸ ನಸುಗೆಂಪು ;
ದಾಳಿಂಬದ ಹೂ ನೋಡಿರಿ ಆಗ–
ಸೇರಿ ಕೆಂಪಿನಲಿ ಬಲು ಸೊಂಪು !
ನೋಡುತ ನಿಂತಿರೆ ಕಣ್ಣಿಗೆ ಹಬ್ಬ !
ಮೂಡುವುದೆದೆಯಲಿ ಆಗಲೆ ಕಬ್ಬ !

ರಮಣಿಯ ತುಟಿಯನು ಹವಳಕೆ ಹೋಲಿಸಿ
ಕವಿಗಳು ಮರೆತರು ಈ ಸುಮವ;
ದಾಳಿಂಬದ ಹೂವಿನ ಹೊಸ ಅರಳಲಿ
ಕಾಣರೆ ಕವಿಗಳು ಕಿರುನಗೆಯ ?
ಅದರಿಂ ಕುಂದೇನಾಯಿತು ಸುಮಕೆ ?
ಅದರ ಚೆಲುವು ಕಾಣದೆ ಜಗಕೆ ?

ನೋಡುತ ನೋಡುತ ಹೂವಿನ ಚೆಲುವನು
ತಂಗಿಯು ಕೇಳಿದುದನೆ ಮರೆತೆ;
ಓಡುತ ಬಂದಳು, ಹಿಡಿದಳು ಕೈಯನು,
ಮೇಲೆ ನೋಡಿದಳು–ಅದನರಿತೆ.
ಹೂವನು ಕೀಳಲು ಮನವೇ ಬಾರದು–
ಅರಿಯದ ಹುಡುಗಿಯ ಬಯಕೆಯು ತೀರದು.

ಸುಮ್ಮನಿಬ್ಬರೂ ನಿಂತಿರೆ ನುಡಿಯದೆ
ಉದುರಿತು ಕೆಳಗಡೆ ಹೂವೊಂದು;
ಇಬ್ಬರ ಮೊಗವೂ ಅರಳಲು – ನುಡಿಯದೆ
ಸಂತಸಗೊಂಡೆವು ನಾವಂದು !
ಎನ್ನಯ ತಂಗಿಯ ಆ ನಗೆಮುಗುಳು
ದಾಳಿಂಬದ ಹೂವಿನ ಹೊಸ ಅರಳು !

ಛಂಗನೆ ತಂಗಿಯು ಹಾರಿದಳೋಡುತ ;
ಸುಮ್ಮನೆ ನಿಂತೆನು ಮೌನದಲಿ.
ಹುಡುಗಿಯು ಬಯಸಲು ಹೂವನು ಮೆಚ್ಚುತ,
ತಾನೇ ಉದುರಿತು ಹರುಷದಲಿ !
ಎಳ ಹೃದಯದ ಮೆಚ್ಚೇ ಮೆಚ್ಚು !
ನಮ್ಮಯ ಕವಿತೆಗಳೆಲ್ಲಾ ಪೆಚ್ಚು !

ಅಕ್ಟೋಬರ್ ೧೯೩೦]

# ತುಂಬಿ

ಉಲ್ಲಸದಿಂದಿಹೆ ಎಲೆ ಮರಿದುಂಬಿ
ಮಧುಪಾನದೆ ನೀ ಹುರಿದುಂಬಿ !
ಪಾನಭೋಗದೊಳು ನೀ ಮೈಮರೆತೆ;
ನ್ಯಾಯವೆ: ನಿನಗೇತರ ಕೊರತೆ ?

ನಿನಗೆಂದೆಂದಿಗು ಹೂವಿನ ನೇಹ:
ಹೂವಿನೆಸಳ ಹೊಡೆ ನಿನ್ನಯ ಗೇಹ,
ಹೂವೇ ಹಾಸಿಗೆ, ಹೂವೇ ಒಸಗೆ,
ಹೂವಿಗು ನಿನಗೂ ನಲ್‌ಬೆಸುಗೆ.
ಹೂವಿನ ಸಾರವ ಹೀರಿದರೇನು ?
ಹಂಚುವೆ ಲೋಕಕೆ ಸವಿಜೇನು.
ಮಧುಪನಾಗಿ ಮಧುಪಾನವ ಮಾಡಿ
ಮಧುಕರನೆನಿಸಿಹೆ ಮಧುವನು ನೀಡಿ.
ತ್ಯಾಗ ಭೋಗಗಳ ಸಮರಸ ಜೀವನ
ನಿನ್ನ ಕೂಡಿ, ತೊರೆಯಿತು ಮಾನವನ
ಮಧುರ, ಮಧುರ, ಬಾಳುವೆ ನಿನ್ನ!
ಅದು ದೊರೆಯಲು, ಏತಕೆ ಬನ್ನ?

ಉಲ್ಲಸದಿಂದಿಹೆ ಎಲೆ ಮರಿದುಂಬಿ
ಮಧುಪಾನದೆ ನೀ ಹುರಿದುಂಬಿ !
ನಿನ್ನಯ ಬಾಳುವೆ ತುಳುಕಿತು ತುಂಬಿ
ಜೇನೆನ್ನಿಸಿ : ಧನ್ಯನೊ, ತುಂಬಿ !

೧೯೨೯]

## ಹೆಸರರಿಯದೊಂದು ಹಕ್ಕಿಗೆ

ದಾಳಿಂಬೆ ಮರವನೇರಿ
ಕಪ್ಪು-ಬಿಳುಪು ಮೈಯ ತೋರಿ
ಹಿತ್ತಿಲಲ್ಲಿ ಇಂಪು ಬೀರಿ
 ಹಾಡುತಿರುವ ಹಕ್ಕಿಯೆ,
ನಿನ್ನ ಹೆಸರನರಿಯೆ ನಾನು;-
ಆದರಾದ ಕೊರತೆಯೇನು?
ಚಿರಪರಿಚಿತನೆನಗೆ ನೀನು-
 ಇನ್ನು ಹೆಸರದೇತಕೆ?

ಶಾಲೆ ಮುಗಿಯೆ ಮನೆಗೆ ಬಂದು
ಮರದ ಅಡಿಯಲಲ್ಲಿ ನಿಂದು
ಹೊತ್ತು ಕಳೆಯುತಿರಲು ಅಂದು
 ಬಗೆಯ ಬಯಲೊಳಲೆಯುತ,
ಇಲ್ಲಿಗೆಂದೊ ಒಮ್ಮೆ ಸುಳಿದು
ಎನ್ನ ಗಮನವನ್ನು ಸೆಳೆದು
ಎನ್ನ ಬೇಸರನ್ನು ಕಳೆದು
 ಮತ್ತೆ ಮಾಯವಾಗುವೆ.

ನಿನಗೆ ನವಿಲ ಬೆಡಗದಿಲ್ಲ,
ಗಿಣಿಯ ಅಂದಚೆಂದವಿಲ್ಲ,
ಕೋಗಿಲೆಯಾ ಕಂಠವಿಲ್ಲ
 ಕವಿಗಣವನು ಸೆಳೆಯಲು ;
ನೀನು ಕರಿಯ ಕಿರಿಯ ಹಕ್ಕಿ,
ಹೆಸರನರಿಯದಿರುವ ಹಕ್ಕಿ;
ಆದರೆಂತು ಗಾನವುಕ್ಕಿ,
 ಎನ್ನ ಮನವ ಸೆಳೆದಿಹೆ !

ಅತ್ತ ರವಿಯು ಮುಳುಗುತಿಹಳು,
ಇತ್ತ ಶಶಿಯು ತೊಳಗುತಿಹನು;
ಎತ್ತಲುಂ ಮೊಳಗುತಿಹುದು
ಗಾನ ಸಂಮೇಳನ.
ಅದರ ಬೆಡಗನೆಲ್ಲ ಮರೆಸಿ
ಹರ್ಷಲಹರಿಯನ್ನು ಹರಿಸಿ
ಎಂತು ಹೃದಯಕೊಪ್ಪುತಿಹುದು
ನಿನ್ನ ಕಿರಿಯ ಗಾಯನ !

ನಿನ್ನನಾರು ಮೆಚ್ಚರೆಂದು
ನಿನ್ನ ಹಾಡ ಕೇಳರೆಂದು
ಖಿನ್ನನಾಗಬೇಡವಿಂದು–
ಕೇಳಿದೆನ್ನ ಕೋರಿಕೆ:
ನೀನು ಎನ್ನ ಮುದ್ದುಹಕ್ಕಿ,
ಎನ್ನ ಬಯಕೆ ಬಾನ ಚುಕ್ಕಿ !
ನಿನ್ನ ನೆನಪಿಗಾಗಿದೆನ್ನ
ಕಿರಿಯ ಕವನ ಕಾಣಿಕೆ.

ನವೆಂಬರ್ ೧೯೩೧]

## ನೆರೆಯ ಮನೆಯಂಗಳದ ಮಲ್ಲಿಕಾ ಕುಸುಮ

ನೆರೆಯ ಮನೆಯಂಗಳದ ಮಲ್ಲಿಕಾ ಕುಸುಮವದು;
ಅದ ಕೊಯ್ದು ಪಿಡಿಯಲೇಕೆಳಸುತಿರುವೆ ?
ಇದೊ, ವಸಂತದ ಗಾಳಿ ಅದರ ಕಂಪನು ಕೊಂಡು
ತಂದೀಯುತಿದೆ; ಏಕೆ ಹೂವ ಬಯಕೆ ?

ಏಪ್ರಿಲ್ ೧೯೪೦]

## ಸಂಧ್ಯಾಸಮಯ ಸಮೀರಣ

ಸಂಧ್ಯಾಸಮಯ ಸಮೀರಣ
ಗಂಧಾನ್ವಿತ ಮೃದುಚರಣ
ಹುಡುಕುವೆ ಯಾರನ್?
ಅಲ್ಲಲ್ಲಿಯೆ ನಿಲ್ಲುತ, ಬಲು
ಮೆಲ್ಲನೆ ನಡೆಯುತ, ಸುತ್ತಲು
ಹುಡುಕವೆ ಯಾರನ್ ?

ಸುಂದರ ಸುಮಗಳ ಚುಂಬಿಪೆ,
ಲತೆಗಳ ಕಚಗುಳಿಯಿಡುವೆ–
ಏನಿದು ಆಟಂ !
ನಲ್ಲಳ ನೀನ್ ಮರೆತೆಯೊ ಏನ್ ?
ಎಲ್ಲರ ಬಳಿ ಸುಳಿಯುವೆ ನೀನ್–
ಏನಿದು ಬೇಟಂ !

ಡಿಸೆಂಬರ್ ೧೯೩೬]

## ಜಗಳ

ಗುಲಾಬಿಯೆಂದಿತು: 'ಏನೆಲೆ ಸಂಪಗೆ
ನೀನತಿ ಬೀಗಿಹೆ ನಿನ್ನಯ ಕಂಪಿಗೆ ?
ನಿನ್ನಯ ಕಂಪನು ನಾ ನೆರೆ ಬಲ್ಲೆ;
ನಿನ್ನತಿ ಕಂಪನು ಎಂದಿಗು ಒಲ್ಲೆ;

ಕೆಂಡ ಸಂಪಗೆಯು ಅದು ಮೊದಲೆ–
ಕೆಂಡ ಕೋಪವೆನ್ನಲು ಮಿಗಿಲೆ !
ಗರಿಗಳ ಕೆದರುತ, ಕಂಪನು ಬೀರುತ,

ಇಂತೆಂದಿತು ಅದು ಕೋಪವ ಕಾರುತ :
'ಏನು, ಗುಲಾಬಿ ! ಮುಳ್ಳಿನ ನಡುವೆ
ಏತಕೆ ಕೊರಗುತ ಸುಮ್ಮನೆ ಕೆಡುವೆ ?
ಯಾರೋ ಒಬ್ಬರು ನಿನ್ನನು ಮುಡಿದರೆ
ನಿನ್ನನೆಲ್ಲರೂ ಭೂಷಿಪರೆ ?
ದಂಡೆಗೆ ಸೇರದೆ ಮಲ್ಲಿಗೆಯೊಡನೆ
ಏತಕೆ ಜಂಭಪ್ರೊ ನಿನಗೆನ್ನೊಡನೆ ?
ಗುಲಾಬಿ ಹೇಳು,
ಯಾರತಿ ಕೀಳು ?'

ಕೇಳುತ ಮಲ್ಲಿಗೆಯೀ ಮಾತನ್ನು
ನುಡಿಯಿತು ವಹಿಸುತ ಸಂಪಗೆಯನ್ನು;
'ಕೇಳು, ಗುಲಾಬಿ : ಇಬ್ಬರ ಮುಂದೆ
ವಾದ ಹೂಡುವೆಯ ನೀನೊಂದೆ ?
ಯಾರನ್ನಾದರು ನೆರವಿಗೆ ಕರೆದು
ಬಳಿಕ ಬಲ್ಮೆಯನು ತೋರಿಸು ಮೆರೆದು.'

ಗುಲಾಬಿ ಯೋಚಿಸಿ ಯೋಚಿಸಿ ಕೊನೆಗೆ
ಕಮಲವ ಕರೆಯಿತು ವಾದದ ನೆರವಿಗೆ.
ಬೆಡಗನು ತೋರುತ
ನುಡಿಯಿತು ನೀರಜ :
'ನೀರನು ಬಿಟ್ಟಿರಲಾರೆನು ನಾನು ;
ಆದರು ಮಾತಾಡಲು ಏನು ?
ರಮಣಿಯ ಕೆನ್ನೆ ಗುಲಾಬಿಯ ಬಣ್ಣ;
ಅವಳ ವದನವೋ ಹೋಲುವುದೆನ್ನ.
ಇಂತತಿ ಚೆಲುವಾಗಿಹ ಎಮ್ಮಿಬ್ಬರ
ಚೆಲುವೇ ಕಬ್ಬವು ಕಬ್ಬಿಗರ !'

ನಕ್ಕುನಕ್ಕು ಸಾಕಾಯಿತು ಸಂಪಗೆ;
ನಗುವನು ತಡೆಯದೆ ಉದುರಿತು ಮಲ್ಲಿಗೆ.
ಇದೇ ಸಮಯವೆಂ–
ದೆಂದಿತು ಗುಲಾಬಿ:
‘ಇನ್ನಾದರು ನೀ ನೋಡೆಲೆ ಸಂಪಗೆ,
ಮಲ್ಲಿಗೆಯುದುರಿತು ಬಾಡುತ ಭೂಮಿಗೆ.
ನಿನ್ನೀ ಗೆಳತಿಯ ಬಲವನು ನೋಡು,
ನನ್ನಾ ಗೆಳತಿಯ ಬಲವನು ನೋಡು !’

ಸಂಪಗೆಯಿನಿತೂ ಕುಗ್ಗಲೆ ಇಲ್ಲ;
ಮಿತಿಮೀರಿಸಿತು ತನ್ನಾ ಸೊಲ್ಲ:
‘ನನಗೇನ್ ಗೆಳತಿಯರಿಲ್ಲದ ಕೊರತೆ ?
ಜಾಜಿಯ ಹೆಸರನು ಮುನ್ನವೆ ಮರೆತೆ’

ಇಂತಾ ಜಗಳವು ಸಾಗುತಿರೆ
ಕಮಲ ಗುಲಾಬಿಗಳ ಸೋಲುತಿರೆ

ಮಧುಪಗಳೈದುತಲೊಟ್ಟಿಗೆ ಅಂದು
ಕಮಲವ ಹೊಕ್ಕವು ಬಂಡುಣಲೆಂದು;
ಬಂದಳು ಆಮೇಲೊಬ್ಬಳು ತರುಣಿ,
ಕೊಯ್ದಳು ಗುಲಾಬಿಯನು, ನಿಷ್ಕರುಣಿ !

ಏನಾದರು ಆಗಲಿ, ಇಂತು
ತೀರಿತು ಜಗಳ ಕೊನೆಗಂತೂ !

ಜನವರಿ ೧೯೩೦]

## ಕಂಠ – ಚೆಲುವು

ಕೋಗಿಲೆಗಳೆಲ್ಲ ಬಲು ಇಂಪಾಗಿ ಹಾಡುವುವು–
ಹಾಡದಿಹ ಕೋಗಿಲೆಯು ಇಲ್ಲದಿರಬಹುದೆ ?
ತರುಣಿಯರು ಹಲವರಿಂಪಾಗಿ ಹಾಡುವರು, ದಿಟ–
ಹಲಮಂದಿ ಹಾಡಲಾರದವರುಂಟು !

ಗಿಣಿಗಳೆಲ್ಲವು ನೋಟಕಂದವಾಗಿಹವು–
ಅಂದವಿಲ್ಲದ ಗಿಣಿಯು ಒಂದು ಇಹುದೆ?
ತರುಣಿಯರು ಹಲಮಂದಿ ಚೆಲುವೆಯರು, ದಿಟವೆ–
ಅಂದವಿಲ್ಲದ ಸುಂದರಿಯರೆ ಹೆಚ್ಚು !

ಕೋಗಿಲೆಯು ಹಾಡುವುದು; ಆದರದು ಕಪ್ಪಂತೆ–
(ಇದ ನಾನು ಸರಿಯಾಗಿ ಕಂಡರಿಯೆನು).
ಸೋಗೆ ನವಿಲಿನ ಕುಣಿತದಾ ನೋಟ ಬಲು ಚೆಂದ;
ಅದರದು ಹಾಡುವುದೆ ? – ನಾನರಿಯೆನು.

ಚೆಲುವಿರುವ ತರುಣಿಯರಿಗಿಂಪುದನಿಯಿಲ್ಲ;
ಕಂಠವಿಹ ಕೋಮಲೆಗೆ ಅಂದವಿಲ್ಲ !
ಕಂಠ ಚಲುವುಗಳೆರಡು ಬೇಕೆಂದರಿಲ್ಲ !
ಒಂದೆ ಎಡೆಯಲ್ಲಿಹವು– ಇಂದ್ರಭವನದಲಿ !

೧೯೩೦]

## ಕಾಣದ ಕೋಗಿಲೆಗೆ

ಎಲ್ಲೋ ಮರದಲಿ ಕುಳಿತಿರುವೆ,
ಉಲ್ಲಾಸದಿಂದಲಿ ಉಲಿಯುತಿಹೆ !

ಎಲ್ಲರ ಕಣ್‌ಮರೆಯಾಗಿರುವೆ,
ಎಲ್ಲರ ಮನವನು ಸೆಳೆಯುತಿಹೆ !

ಹುಡುಗರು ಶಾಲೆಗೆ ಹೋಗುವ ಮುನ್ನ
ಹುಡುಕುವರೆಲ್ಲರು ನೋಡಲು ನಿನ್ನ.
ಕವಿಗಳು ನಿನ್ನನು ನೋಡಲು ಬಯಸಿ
ಕರೆವರು ನಲ್‌ಗವಿತೆಯ ಬೀಸಿ !

ಎಲ್ಲರ ಹೃದಯದೊಳಾಸೆಯ ಬಿತ್ತುವೆ,
ಕಲ್ಲೆದೆಯನು ಸಹ ಕರಗಿಸುವೆ !
ಲೋಕದ ಚೆಲುವನು ಹಾಡಲು ನಿನಗೆ
ನಾಕದ ವಾಣಿಯ ವಿಧಿಯಿತ್ತಿಹನು !

ನನಗೂ ನಿನ್ನನು ನೋಡುವ ಬಯಕೆ ;
ಮಾನವನ ಹುಡುಕಿದೆನದಕಾಗಿ.
ಯಾರಿಗು ಕಾಣದೆ ಕೂಗುವೆ ಅವಿತು ;
ತೋರೆಯ ಮೊಗವನು ನನಗಾಗಿ ?

ಇಂತಿರೆ ನಿನ್ನಯ ಗಾನವೆ ಸಾಲದೆ
ಸಂತಸ ಸುಗ್ಗಿಯ ಸಾರಲ್ಕೆ ?
ಇನಿದನಿ ಇಂಪನು ಬೀರುತಲಿರಲು
ನನಗಿನ್ನೂ ನೋಡುವ ಬಯಕೆ !

ಬಯಕೆಯು ತೀರಿದ ಹರುಷಕಿಂತಲೂ
ಬಯಕೆಯಿರುವ ಹರುಷವೆ ಹೆಚ್ಚು ;
ಸಂತಸ ನಿನ್ನಯ ಸವಿದನಿಯೊಂದಿರೆ
ನಿನ್ನ ಕಾಣುವಾಸೆಯು ಹುಚ್ಚು !

ಜೂನ್ ೧೯೩೦]

# ಮಡಿದ ಚಿಟ್ಟೆಯೊಂದನ್ನು ಕುರಿತು

ಬಿಸಿಲಿನಲಿ ಬೆಂದೆಯೋ, ಯಾರಿಂದ ನೊಂದೆಯೋ,
ಮಡಿದು ಬಿದ್ದುರುಳಿರುವೆ ನೆಲದ ಮೇಲೆ;
ಕುಸುಮಗಳ ಮೃದತಲ್ಪದಲಿ ಮಲಗುತಿಹ ನಿನಗೆ
ಹುಡಿಮಣ್ಣು ಹಾಸುಗೆಯೆ, ಈ ಗತಿಯೆ, ಕೊನೆಗೆ ?

ಸಂಪಗೆಯ ತಿಳಿಹಳದಿ; ಕೆಂಬವಳದೆಳಗಂಪು;
ಮೃದುವಾದ ಮಲ್ಲಿಗೆಯ ಹಾಲುಬಿಳುಪು;
ಇವುಗಳಿಂದೆಸೆಯುತಿಹ ಚಲಿಸದೀ ರೆಕ್ಕೆಗಳು
ನಿನ್ನ ಬದುಕಿನಲಂದು ಎನಿತು ಸೊಗಸೊ !

ಅಂದು ನಿನ್ನಯ ಬೀಡು ಅಲರು ತರುಲತೆಗಳಲಿ,
ಇಂದು ನಿನ್ನಯ ಬೀಡು ವಿಶ್ವದಲಿ !
ಅಂದು ನಿನ್ನಯ ನೆಲೆಯದೆಲ್ಲೊ ಕಾಣದ ಮೂಲೆ,
ನಿನ್ನ ನೆಲೆಯಿಂದೆನ್ನ ಹೃದಯದಲ್ಲಿ !

ಅಂದು ನೀ ಹಾರುತಿರೆ ಮುಳುಗೇಳುತಲ್ಲಲ್ಲಿ
ಸೌಂದರ್ಯಸಾಗರದ ತೆರೆ ಸುಳಿಯಿತು;
ನೀನಳಿದೆ – ಹಿಂದೆಯೇ ಬಹುದು ತೆರೆಗಳ ಮಾಲೆ;
ಆದರಾ ಒಂದು ತೆರೆ ಸುಳಿದಳಿಯಿತು.

ನಿತ್ಯ ಸೌಂದರ್ಯ ಸಾಗರದೊಳಲೆಗಳ ಮಾಲೆ
ನಿತ್ಯವೂ ಸುಳಿದಳಿವುದಿದೆ ಸೃಷ್ಟಿ–ಲಯ ಲೀಲೆ !
ಆ ಮಹಾಸಾಗರದೊಳಲೆಗಳಿಗೆ ಹುಟ್ಟು,
ಅವುಗಳೈಕ್ಯವು ಕೊನೆಯಲಲ್ಲಿ–ಇದೆ ಗುಟ್ಟು !

# ಕೂಗು ಕೂಗು ಕೋಗಿಲೆ

ಕೋಗಿಲೆ ! ಕೋಗಿಲೆ !
ಕೂಗು ಕೂಗು ಕೂಗೆಲೆ !
ಚೈತ್ರವಧುವ ದೂತನೇನು ?
ಅವಳ ಹೃದಯವೇ ನೀನು !
ಅವಳ ಹರುಷದಲ್ಲಿ ಹಿಗ್ಗಿ
ಅವಳ ಕೊರಗಿನಲ್ಲಿ ಕುಗ್ಗಿ
ಅವಳ ಜೀವವಾಣಿಯಾಗಿ
ಬಾಳುತಿರುವೆ, ಗಾನಯೋಗಿ !

ಹೊಸತು ವರುಷದಾದಿಯಿಂದು :
ಕಾಲಚಕ್ರದುರುಳಿದೊಂದು. –
ಕಾಲದೊಡನೆ ಚರಿಸುತಿದೆ ಅ–
ನಂತವಾಗಿ ನಿನ್ನ ವಾಣಿ !
ಮಾಗಿಯೊಮ್ಮೆ ಬರುವುದು,
ನಿನಗೆ ಮೌನ ತರುವುದು.
ಆದರಿಂದು ಸುಗ್ಗಿವೆಣ್ಣು
ಸಾರುತಿಹಳು, ಎನಿತು ಚೆನ್ನು !
ಹರುಕು ಚಿಂದಿಯನ್ನು ಬಿಟ್ಟು
ಹೊಸತು ಹಸುರು ಸೀರೆಯುಟ್ಟು
ಹೂವು ಮುಡಿದು
ನೆಗೆದು ಕುಣಿದು
ಜಗಕೆ ಸೊಗವ ಬೀರಲೆಂದು
ಸುಳಿಯುತಿರುವಳು,
ಖಗಕೆ ರಾಗ ಕಲಿಸು ಎಂದು
ನಿನ್ನ ಕರೆವಳು.
ಕೂಗು ಕೂಗು, ಕೋಗಿಲೆ !
ಎನಗು ರಾಗ ಕಲಿಸೆಲೆ !

ನೀನು ಅವಳ ಪ್ರೇಮ ಪುತ್ರ:
ಇಲ್ಲದೆ ನೀನೆಲ್ಲಿ ಚೈತ್ರ !
ಎಲ್ಲ ಜನರ ಪ್ರೇಮಪಾತ್ರ !
ಕವಿಗಳಿಗೋ ಪರಮಮಿತ್ರ !
ನೀನು ಕೂಗುತಿರಲು, ಒಡನೆ
ನಾನು ಕುಣಿಯುವೆ !
ಹೇ ! ವಿಶ್ವಹೃದಯ ವಾಣಿ,
ನಿನಗೆ ಮಣಿಯುವೆ !

ನಿನ್ನ ಕೂಗು ಕೇಳಿ ತಣಿಯೆ,
ನಿನ್ನ ಹಾಡ ಹಾಡಿ ದನಿಯೆ !
ಕೂಗು, ಕೂಗು, ಎನ್ನ ಕೂಗು :
ಕೂಗು ಕೂಗು ಸಂತತಂ !
ಎನ್ನ ಹರುಷದಲ್ಲಿ ಕೂಗಿ
ಹರುಷ ಹೆಚ್ಚಿಸು ;
ಎನ್ನ ಕೊರಗಿನಲ್ಲಿ ಕೂಗಿ
ಕೊರಗು ಮುಚ್ಚಿಸು;
ನೆಚ್ಚು ನಟ್ಟು, ಕೆಚ್ಚು ಕೊಟ್ಟು,
ಜಡತೆ ತೊಲಗಿಸು;
ಎನ್ನ ಬಾಳು ಮುಡಿಯೆ, ಕೊನೆಗೆ
ಹಾಡಿ ಮಲಗಿಸು.

೧೯೩೬]

## ಮಳೆ ಮುಗಿದಿದೆ !

ಮಳೆ ಮುಗಿದಿದೆ, ಕೊಳೆ ತೆಗೆದಿದೆ,
ಆಗಸವನು ನೋಡು !
ಕಳೆಯೇರಿದೆ ಜಗಮೊಗದಲಿ–
ನೆರೆ ಹರುಷದ ಬೀಡು !

ಅಳಲನು ಬಿಡು, ಗೆಲವನು ತೊಡು,
ನೀ ನಲಿನಲಿದಾಡು !
–ಇಂತೊರೆಯುತ್ತಿದೆ, ಆಲಿಸು,
ಅದೊ ಕೋಗಿಲೆ ಹಾಡು !
ಸಂತಸ ಸಂದೇಶವದು,
ಆ ಕೋಗಿಲೆ ಹಾಡು :
ಅಂತೊರೆಯಲು ತೊಡಗಿರುವುದು
ಎನ್ನೀ ಬಡ ಹಾಡು

ಮಳೆ ಮುಗಿದಿದೆ, ಕೊಳೆ ತೆಗೆದಿದೆ
ಆಗಸವನು ನೋಡು !
ಕಳೆಯೇರಿದೆ ಜಗಮೊಗದಲಿ–
ನೆರೆ ಹರುಷದ ಬೀಡು !

ಹೊಸ ಪರಿಯಲಿ ಹಸುರುಡುಗೆಯ
ತಳೆದಿಹಳಿಳೆ ರಮಣಿ;
ಕುಸುಮಗಳವು ನಸುನಗುತಿವೆ–
ನೆರೆ ಸೌಂದರದ ಕಣಿ !

ಹೊಂಬಿಸಿಲಿನ ಹೊನಲಿಳೆಯನು
ಮುಳುಗಿಸಿ ಹರಿಯುತಿದೆ;
ತುಂಬಿದ ಹೃದಯದ ಹರುಷವು
ಅದರೊಳು ಬೆರೆಯುತಿದೆ.

ಹೊಂಬಿಸಿಲೊಳು ನಲಿದಾಡುತ
ಹಾರುತಲಿ ಚಿಟ್ಟೆ;
ಅಂತೆಯೆ ನಾ ಹಾರುವೆನೆ?–
ಗರಿಯಿಲ್ಲದೆ ಕೆಟ್ಟೆ !

ಎಳತನದಲಿ ಸುಳಿದಾಡುವ
  ಹೊಸ ಬಯಕೆಗಳಂತೆ ;
ಬಗೆಬಾನಲಿ ಒಗೆಯುವ ಸೊಗ
  ಸವಿಗನಸುಗಳಂತೆ ;

ತಿಳಿಗೊಳದಲಿ ಅಲೆದಾಡುವ
  ಬಿಳಿ ಹಂಸೆಗಳಂತೆ ;
ಕವಿ ಹೃದಯದಿ ಮೊಳೆತೇಳುವ
  ನಲ್‌ಭಾವಗಳಂತೆ ;

ನೀಲಿಯ ನಭದಲಿ ಮೆರೆಯುತ
  ಬಿಳಿಮುಗಿಲಿನ ಮಾಲೆ
ತೇಲಾಡುತ ಕಾಲಿಡುತಿವೆ–
  ಏನವುಗಳ ಲೀಲೆ !

ಇಂತೊರೆಯುತ ಮುಗಿಲುಗಳವು
  ಮರೆಯಾಗುವುವೀಗ :
'ಸಂತಸಗಡಲಿಂಗುವ ಮೊದ
  ಲದ ಕುಡಿಯಿರಿ ಬೇಗ !'

ಮಳೆ ಮುಗಿದಿದೆ, ಕೊಳೆ ತೆಗೆದಿದೆ,
  ಆಗಸವನು ನೋಡು !
ಕಳೆಯೇರಿದೆ ಜಗಮೊಗದಲಿ–
  ನೀ ನಲಿನಲಿದಾಡು !

ಜುಲೈ ೧೯೩೧]

## ಹೂ ಬಿಸಿಲು

ಇಳೆ ನಿದ್ದೆಯ ಮುಸುಕನು ತಾನ್
ನಸು ನಸು ತೆರೆದಿತ್ತು;
ಮೂಡಲ ದೆಸೆಯಲಿ ತಿಳಿಬಾನ್
ಹೂವನು ತಳೆದತ್ತು –
ಮೂಡಿತು ಹೊತ್ತು.

ಹೊನ್ನಿನ ಹೂವರಳಲು ತೊರೆ–
ಹರಿಯಿತು ಹೂ ಬಿಸಿಲು;
ಹೊನ್ನಾದುದು ಬಾನಿನ ಕರೆ,
ಬುವಿಯಾಚೆಯ ಹೊಸಿಲು–
ಮಾಯೆಯಿನೆನುವವೊಲು.

ಜಗವೆಲ್ಲವ ಸೋಂಕಲು ಹೂ–
ಬಿಸಿಲಿನ ಹೂಮುತ್ತು,
ತಿರೆ ಹಿಗ್ಗಿತು ಬನ ಬಯಲಿನ
ಹೊಸ ಹೊಸ ಹೂ ಹೊತ್ತು–
ಹರುಷವೆ ಹೂವಾಯ್ತು !

ಜನವರಿ ೧೯೩೭]

## ಸೊಗಸಿನ ಸಂಜೆ

ಗವಿಪುರದ ಗುಡ್ಡನೆತ್ತಿಯ ಮೇಲೆ ಸರಸದಲಿ
ಗೆಳೆಯ ಮೂರ್ತಿಯ ಕೂಡಿ ಕುಳಿತಿರಲು ನಾ ಕಂಡೆ
ಬುವಿ ಬಾನು ಮುತ್ತಿಟ್ಟು ಜಗುಳ್ದ ರಾಗದ ಉಂಡೆ
ಎನೆ ಮನಕೆ ಹೊಳೆದ ಮುಳುಗುವ ಹೊತ್ತ; ಹರುಷದಲಿ
ಹೃದಯವುಬ್ಬಿತು; ಪ್ರಶ್ನೆ ಮೂಡಿ ಕಾಡಿದುದೆನ್ನ:
'ಈ ಎಡೆಯಲಿಂತೆನಿತು ಸಂಜೆಗಳ ನೋಡಿಲ್ಲ?

ಆದರೀ ಹರುಷವೇಕೊಮ್ಮೆಯೂ ಮೂಡಿಲ್ಲ ?
ಸುತ್ತಮುತ್ತಣ ನೋಟವೆಲ್ಲವಿದುವೇ, ಮುನ್ನ.'
ಉತ್ತರವನರಸುತ್ತ ಕತ್ತಲಾಗುತ ಬಂತು ;
ಮೂಡಿದಾ ಪ್ರಶ್ನೆಗುಸಿರಿತ್ತು ಗೆಳೆಯನಿಗಿತ್ತೆ :
'ನಿಜದಿಂದ ನಾವ್ ಗೆಳೆಯರಾದುದೀ ಹೊತ್ತೆ;
ಅದರಿಂದ ಸಂಜೆಗೆಂದಿಲ್ಲದಾ ಸೊಗಸಿಂತು !
ಅಲ್ಲವೇ ?' ಎಂದೆನ್ನ ಗೆಳೆಯನೆನೆ, ಅಹುದೆಂದೆ.
ಅಹುದೆಂದ ಮೂಡಿ ಬಿದಿಗೆಯ ಚಂದ್ರ ಮುಂದೆ.*

ಫೆಬ್ರವರಿ ೧೯೪೦]

## ಬಾ ಬಾ ಚಂದಿರ

ಬಾ ಬಾ ಚಂದಿರ
ಮಧುರ ಮಧುರ ಮನಮೋಹನ ಸುಂದರ

ಮುಗಿಲಿನೆಡರುಗಳ ಮೆಟ್ಟುತ ಬಾ ಬಾ
ಪ್ರೇಮಚಂದ್ರಿಕೆಯ ಬೀರುತ ಬಾ ಬಾ
ಎನ್ನ ಮನೋಜಲನಿಧಿ ಉಕ್ಕಿಸುತ
ಹೃದಯಕುಮುದವನ್ನರಳಿಸುತ

೧೯೩೮]

## ಬಿದಿಗೆ ಚಂದ್ರ – ಬದಿಗೆ ತಾರೆ

ಅಲ್ಲಿ ಅದೋ ನೋಡು, ಜೋಡಿ :
ಬಿದಿಗೆ ಚಂದ್ರ, ಬದಿಗೆ ತಾರೆ–
ಬೈಗುಗೆಂಪ ಕರೆಯ ಮೇಲೆ
ಸಂಜೆ ಚೆಲುವ ಹೊಸತು ಗಾಡಿ !

* ಈ ಕವನವು 'ಹಂಸಪಥ' ಕವನ ಸಂಕಲನದಲ್ಲಿಯೂ ಸೇರಿದೆ–ಸಂ.

ಸಂಜೆವೆಣ್ಣ ತುಟಿಯ ಮೇಲೆ
ವಜ್ರದೊಂದು ಬುಲಾಕು ;
ತೋರ ಮುತ್ತನೊಂದನಿಟ್ಟು
ಸಮೆದ ಮೂಗುಬೊಟ್ಟು–
ಎನಲು ನೋಡದೋ ಜೋಡಿ !*

೧೯೪೨]

## ಚೌತಿಯ ಚಂದ್ರ

‘ಅಳಬೇಡ ಕಂದಯ್ಯ ಅಳಬೇಡ ಬಾ ಕಿಟ್ಟು,
ಹೊಳೆಯುವ ಚಂದ್ರನ ನೋಡು.
ನಗುತ ನಗುತ ನೀನು ರಗಳೆಯೆಲ್ಲವ ಬಿಟ್ಟು
ನಲಿಯುತ ಅವನೊಡನಾಡು.’

‘ನಿನ್ನ ಮಾತದು ಸುಳ್ಳು, ಅದು ಚಂದಿರನೆ ಅಲ್ಲ,
ಆಟದ ಕಾಗದದ ದೋಣಿ.
ನನ್ನ ಈ ಕೈಗಳಿಗದು ನಿಲುಕುವುದಿಲ್ಲ.
ನೀನದನು ತಂದುಕೊಡಮ್ಮ’

‘ಮರೆತಿದ್ದೆ ಕಿಟ್ಟಣ್ಣ : ಇತ್ತ ಬರುತಿದೆ ತೇಲಿ
ನಿನ್ನ ಕಾಗದದ ದೋಣಿ;
ಅಳದೆ ಆಡುವವರ ಕೂರಿಸಿಕೊಂಡೊಯ್ವ
ಬೆಳಗುವ ಬೆಳ್ಳಿಯ ದೋಣಿ.’

ಸೆಪ್ಟೆಂಬರ್ ೧೯೩೧]

---

* ಈ ಕವನವು ‘ಹಂಸಪಥ’ ಕವನ ಸಂಕಲನದಲ್ಲಿಯೂ ಸೇರಿದೆ–ಸಂ.

## ಸುಧೆ ಸುರಿಯುವ ತಿಂಗಳ ಕಳೆ

ಸುಧೆ ಸುರಿಯುವ ತಿಂಗಳ ಕಳೆ
ನೀಲಿಯ ತಿಳಿ ಬಾನು ;
ಕೆಳಗಿದೊ ನೆರೆ ಮಲಗಿಹ ಇಳೆ–
ಒಬ್ಬನೆ, ಸುಖಿ ನಾನು !

ತೀಡುತಲಿದೆ ತಂಗಾಳಿ,
ಮೌನವು ಹಬ್ಬುತಿದೆ;
ಹಾಡುತ ಬಲು ಮುದ ತಾಳಿ
ಎನ್ನೆದೆಯುಬ್ಬುತಿದೆ !

ಎನಗಮೃತವು ತಿಳಿ ಜೊನ್ನ,
ನಾನದ ಕುಡಿಯುವೆನು :
ಅಮರತ್ವವನಿದೊ ಮುನ್ನ
ನಾನಿಲ್ಲಿಯೆ ಪಡೆಯುವೆನು !

ಜನವರಿ ೧೯೩೨]

## ಕಾರ್ತಿಕೋತ್ಸವ

ಕಾರ್ಗಾಲ ಮುಗಿದು ಮೊದಲಾಯ್ತು ಕಾರ್ತಿಕಮಾಸ;
ಮಳೆ ತೊಳೆದ ನೆಲ ಬಾನು ಹಚ್ಚಹಸುರುಟ್ಟು
ಅಚ್ಚನೀಲಿಯನಾಂತು, ಎತ್ತ ನೋಡಿದೊಡತ್ತ
ಸೊಂಪು, ಕಣ್ಣಿಗೆ ತಂಪು : ಏನು ಹಸುರಿನ ಪರವು,
ನೀಲಿಮೆಯ ಆಳ ! ಕಾರ್ಗಾಲದಾರ್ಭಟವು
ಮುಗಿದು, ಮೋಡದ ದಾಳಿ ತೆಗೆದು, ಮುಂದೈತರುವ
ಶಾಂತಿಯನು ಸಾರುವಾ ಬಿಳಿಯ ಬಾವುಟವದೋ,
ಬಿಳಿ ಮುಗಿಲ ಸಾಲು, ಮೆಲುಮೆಲನೆ ಬರುತಿಹದು.

ಊರ ಗೊಂದಲವುಳಿದು ಗಡಿಯ ಬಯಲನು ಸೇರಿ
ನಿಲ್ಲಲಾ ಶಾಂತಿ ಮೈತಳೆದಂತೆ ಕಾಣುವುದು :
ಬಿಸಿನೀರ ಸ್ನಾನವೆನೆ ಹಿತವಾದ ಬಿಸಿಲಿನಲಿ
ಮೈಯೊಡ್ಡಿ ಮಲಗಿಹದು ಮೆಲುಕಿಡುತ ಹಸು ಮುಂದೆ;
ಹಾಡುತ್ತ ಮಲಗಿಹನು ತುರುಗಾಹಿ ಹೈದ
ಹೊಂಗೆಮರದಡಿಯಲ್ಲಿ, ಬಂಡೆಯೊಂದಕೆ ಒರಗಿ.
ತುಸ ಮುಂದೆ, ಸುತ್ತಲೂ, ನೆಲನೆ ಹೂತುದೆನೆ
ಹೊಲತುಂಬ ಹುಚ್ಚೆಳ್ಳ ಹೂ ಹಸರ–ಏನ್ ನೋಟ !
ಸಂಜೆ ಬರಲೇನೆಂಬೆ ವರ್ಣದುತ್ಸವವ,
ಕಡುಗೆಂಪು ಕೆನ್ನೀಲಿ ಹೊಂಬಣ್ಣ ಹಳದಿಗಳ
ಸಂಮಿಶ್ರಣದಿನಾದ ಸಂಧ್ಯಾವಿಲಾಸವ !
ಇರಲಿರಲು, ಇರುಳಾಗಲೊಡನೆ ಬಾನ್‌ಚಾವಣಿಯ
ತೂಗು ಸೊಡರೆಲ್ಲವೂ ತಟ್ಟನೆಯೆ ಹೊತ್ತಿತೆನೆ
ತೆಕ್ಕನೆಯೆ ತೀವಿ ತಿಮಿರದ ಪಟವ, ಮಿನುಗುವುದು
ಕೃತ್ತಿಕಾಪುಂಜಲಕ್ಷಿತಲಕ್ಷಲಕ್ಷೋಪ–
ಲಕ್ಷನಕ್ಷತ್ರ, ಈ ವ್ಯೋಮ ದೀಪೋತ್ಸವ
ನನುಕರಿಸಿ ಬುವಿಯ ಜನ – ಬಲ್ಲಿದರು, ಬಡವರು–
ಎಲ್ಲರೂ ಬೆಳಗುವರು ಮನೆಯ ಸೊಡರುಗಳಿಂದ
‘ಇದುವೆ ದೀಪಾವಳಿ ! ಇದೆ ಕಾರ್ತಿಕೋತ್ಸವ !’
ಎಂದು ಮೂಡುವನು ಶಶಿ ಕೃತ್ತಿಕೆಯ ಕೆಳೆಗೋವಿ,
ಎಳೆಗೊದವಿಸುತ ಚಾರು ಚಂದ್ರಿಕೋತ್ಸವವ.*

ಡಿಸೆಂಬರ್ ೧೯೪೩]

---

* ‘ಹಂಸಪಥ’ ಕವನ ಸಂಕಲನದಿಂದ ಪುನಾರವರ್ತನೆಯ ಕಾರಣದಿಂದ ಈ ಕವನವನ್ನು ಅಲ್ಲಿ ಕೈಬಿಡಲಾಗಿದೆ–ಸಂ.

# ಕಾಮನ ಬಿಲ್ಲು

ಮುಸುಕಿದ ಮಬ್ಬದು ಜಾರುತಿದೆ,
ಹೊಸ ಕಳೆ ಇಳೆಯಲಿ ತೋರುತಿದೆ !
ಕಾಮನ ಬಿಲ್ಲದೊ ಮೂಡುತಿದೆ,
ಸೊಗದಂಬನು ತಾ ಹೂಡುತಿದೆ !

ಬಗೆಬಗೆ ಸುಮಗಳ ಬಣ್ಣವ ಸಮನಿಸಿ
ಬಾನ್‌ಬಟ್ಟೆಯಲದ ಬರೆದಂತೆ
ಬಗೆಗೊಪ್ಪುವ ಮಳೆಬಿಲ್ಲನು ನೋಡು–
ಬ್ರಹ್ಮನ ಸೃಷ್ಟಿವಿಲಾಸದ ಹಾಡು !

ಜಗದಾನಂದವನಳೆಯುವ ತೆರದಲಿ
ಬಾಂದಳವನ್ನದು ಅಪ್ಪುತಿದೆ;
ಸೊಗಸಿನ ಕಣಿ ನಾನೆನ್ನುವ ಪರಿಯಲಿ
ಹೃದಯ ಮನಂಗಳಿಗೊಪ್ಪುತಿದೆ !

ಬಾಗಿದ ಬಣ್ಣದ ಬಿಲ್ಲಿನ ಕೊನೆಗಳ–
ನೆನ್ನಯ ಹೃದಯವು ಬಿಗಿಯುತಿರೆ,
ಮೇಗಡೆ ಹಾರುತ ಒಡನೆಯೆ ಬಿಲ್ಲನು
ಪಿಡಿಯುವ ತೆರದಲಿ ನೆಗೆಯುತಿರೆ;

ಒಂದೇ ಕ್ಷಣದಲಿ ಚೆಲುವನು ಬೀರಿ
ಸೃಷ್ಟಿರಹಸ್ಯವ ಕಣ್ಣಿಗೆ ತೋರಿ
ಕಾಮನ ಬಿಲ್ಲದು ಕಣ್‌ಮರೆಯಾಯ್ತು,
ಬಾನ ಬಟ್ಟೆ ತಾ ಬರಿದಾಯ್ತು !

ಡಿಸೆಂಬರ್ ೧೯೩೧]

## ಚಣವೆ ಸಾಕು ಚೆಲುವಿನ ನೋಟ !

ಚಣದ ಹಿಂದೆ ಪಡುದೆಸೆಯಲ್ಲಿ
ಮುಂಗಾರಿನ ಪೆರ್ಮುಗಿಲುಗಳ
ಕರ್ದೆರೆ ಕವಿದಿತ್ತು,
ಮುಳುಗುನೇಸೆರನು ಮರಸಿತ್ತು,
ನೆಲದ ಮೇಲೆ ಕಪ್ಪೆರಚಿತ್ತು.

ಏನು ಅಚ್ಚರಿಯದೀ ನೋಟ !
ಬಾನು ಗುಲಾಬಿಯ ಹೂದೋಟ !
ಕರ್ದೆರೆ ಸರಿದಿಹುದು–
ಪಡುವಣ ರಂಗದಿ ಮೆರೆದಿಹುದು
ರಂಗುರಂಗಿನಾಟ.

ನೋಡೆ ನೋಡೆ–ಎಂತಹ ನೋಟ !
ಬಣ್ಣಬಣ್ಣಗಳ ಮೇಲಾಟ !
ಆದರೆ, ಇರುಳ ತೆರೆ
ಬೀಳಲು, ಎಲ್ಲ ಮರೆ–
ಚಣವೆ ಸಾಕು ಚೆಲುವಿನ ನೋಟ !*

ಮೇ ೧೯೪೧]

* 'ಹಂಸಪಥ' ಕವನ ಸಂಕಲನದಲ್ಲಿಯೂ ಬಂದಿರುವ ಇದೇ ಕವನವನ್ನು ಅಲ್ಲಿ ಕೈಬಿಡಲಾಗಿದೆ.

## ಕಿರುತಾರೆ

ಬಗೆಯನು ಬಾನಿಗೆ
  ಬಿಗಿಯವ ಕೊಂಡಿ ;
ಬಾನಿಂದಾಚೆಯ
  ಬೆಳಕಿನ ಕಂಡಿ.
ಬಾನಿನ ಆಳದ
  ಅರ್ಥದ ಸ್ಫೂರ್ತಿ
ಜ್ಯೋತಿರ್ಮಯನಾ
  ಮಂಗಳ ಕೀರ್ತಿ.
ನೆನಹಿಗೆ ನಿಲುಕದ
  ಅರ್ಥದ ವ್ಯಾಪ್ತಿ ;
ವಿಶ್ವಾತ್ಮನ ಪರಿ–
  ಚಾಯಕ ದೀಪ್ತಿ.
ಓ ಕಿರುತಾರೆಯೆ ! ಬಾನೊಳಗೆ
ಬೆಳಗುವಂತೆ ಬೆಳಗೆನ್ನೊಳಗೆ.

ಏಪ್ರಿಲ್ ೧೯೪೦]

## ಹಲಸೂರಿನ ಕೆರೆ

ನೋಡಿದೆ ಹಲಸೂರಿನ ಕೆರೆ
ಮನ್ನಿಸಿ ಕೆಳೆಯೊಲವಿನ ಕರೆ
ಸರಿದಿರೆ ಮಳೆಮುಗಿಲಿನ ತೆರೆ
ನಗುನಗುತಿರೆ ತುಂಬು ಪೆರೆ
    ನೋಡಿದೆ ಮನ ತಣಿಯೆ
    ಹೃದಯವು ಕುಣಿಕುಣಿಯೆ
ಹಿಂದಿನ ಸವಿ ನೆನಪೊಂದನು
    ತಟ್ಟನೆ ಮನ ನೆನೆಯೆ

ಅಂದಿನ ದಿನ ಸುಂದರ ಇನ
ತೊಳಗುತಲಿರೆ ತಿಳಿ ಬಾನಿನ
ಮೇಗಡೆ, ಹೊಸ ಹಸುರಿನ ವನ
ತಂಪೆರಚಿರೆ, ತಿಳಿನೀರಿನ
ಈ ಕೆರೆಯಲಿ ದೋಣಿಯಲಿ
ಸಾಕೆನಿಸದ ಕೇಣಿಯಲಿ
ಕೆಳೆಯರು ನಾವ್ ನಲಿದುದನು
ಮರೆಯುವುದೆಂತೆನ್ನ ಮನ ?

ಕೆಲದಲಿ ಕೆನ್‌ಸಿಂಗ್‌ಟನ್ ವನ :
ಸೆಳೆದಿದೆ ಕೆಲ ಗೆಳೆಯರ ಮನ.
ನನಗಾದರೂ ಈ ಉಪವನ
ಪರಕೀಯವು – ಕನ್ನಡತನ
ಕಾಣದು ವನದಲ್ಲಿ,
ಹೆರರೊಡೆತನದಲ್ಲಿ;
ಇದನುಪಭೋಗಿಪರೆಲ್ಲರು
ಆಂಗ್ಲರೆ ಮೊತ್ತದಲಿ.

ಈ ವನ ಕೆರೆಗಳ ಮೇಳನ
ನಮ್ಮಯ ಬದುಕಿನ ಲಕ್ಷಣ :
ಕೆರೆಯಂತೆಯೆ ಮರೆ, ಜೀವನ ;
ವನ, ಮುಸುಕಿಹ ಆಂಗ್ಲತನ.
ಜಾಡ್ಯವು ಮೈತಗೆಯೆ
ಮುಸುಕನು ಹರಿದೊಗೆಯೆ
ಹಲಸೂರ್ ಕೆರೆ– ಹೊಸ ಜೀವನ –
ಮೆರೆವುದು ತಾನಾಗಿ.

ನಮ್ಮಯ ನಡೆ ನುಡಿ ನಯ ಕಲೆ
ನಮ್ಮ ಜನದ ಬದುಕಿನ ಬೆಳೆ

ನಾವು ಕಂಡ ಆತ್ಮದ ನೆಲೆ
ಪರಕೀಯರಿನಾಯ್ತು ಕೊಲೆ :
ಅದಕೀಯೆಡೆ ಸಾಕ್ಷಿ,
ಈ ಕೆರೆಯೇ ಸಾಕ್ಷಿ,
ಕನ್ನಡ ಕಲಿ ಕಾವಲಿಟ್ಟ
ಗೋಪುರವೇ ಸಾಕ್ಷಿ.

ಹಲಸೂರಿನ ಕೆರೆ ಸುಂದರ,
ನಲವು ಚೆಲುವುಗಳ ಮಂದಿರ :
ಬಾನೊಪ್ಪಿರೆ ಮಣಿ ಹಂದರ
ಬೆಳಗುತಲಿರೆ ಮೇಲ್‌ಚಂದಿರ
ಬಿಳಿ ಮುಗಿಲಿನ ಹಾಳೆ
ಹಾಲಿನ ಕೆನೆ ಹೋಲೆ
ನೀರವ ನಿಶಿಯಲಿ ಬಂಧುರ
ಭಾವನೆಗಳು ತೇಲೆ.

೧೯೪೨]

## ಬೆಟ್ಟದ ಬಸವ

ಬೆಟ್ಟದ ಮೇಲಿಹ ಮೇವನು ಮೇದು ಮೆಲುಕನು ಹಾಕುತ ಮಲಗಿಹೆಯ?
ಹೊಟ್ಟೆಯು ತುಂಬಲು ಉಳಿದುದು ಏನೆನ್ನುತ ನೆರೆ ನಿದ್ದೆಯೊಳ್ ಮುಳುಗಿಹೆಯ?
ಹೇಳೆಲೆ ಬಸವನೆ ಇಂತಿಹೆಯೇಕೆ ?
ನಿನಗೇನಾದರು ಹೊಟ್ಟೆಗೆ ಬೇಕೆ ?
ಇಲ್ಲದೊಡಿರುವುದೆ ನಿನಗದು ಸಾಕೆ ?
ಏತಕೆ ಸುಮ್ಮನೆ ಕುಳಿತಿರುವೆ?
ಉತ್ತರವೀಯದೆ, ಗುಟರನು ಹಾಕದೆ, ಏತಕೆ ಸುಮ್ಮನೆ ಮಲಗಿರುವೆ?

ಬೆಟ್ಟವನಡರುವ ಭಕ್ತರೆಲ್ಲರೂ ಮೊದಲೇ ನಿನ್ನನು ನೋಡುವರು;
ಸಿಟ್ಟಿನ ಬಸವನು ನೀನಲ್ಲವು ಎಂದೆಲ್ಲರು ನಿನ್ನೊಡನಾಡುವರು:
ತಿನ್ನಲು ಬಾಳೆಯ ಹಣ್ಣನು ನಿನಗೆ
ಕೊಡುವರು ತೆಂಗಿನ ಕಾಯ್ಗಳ ಜೊತೆಗೆ;
ಪೂಜಿಸಿ ಎಸೆವರು ಹೂಗಳ ಬಳಿಗೆ–
ಎಲ್ಲಕು ಒಡೆಯನು ಪೂಜಾರಿ !
ಗಾಡಿಯ ಹೊಡೆವವನೂರಲಿ ಒಡೆಯ; ಕೈಲಾಸದಲಿ, ಕಾಮಾರಿ !

ರಾಮೇಶ್ವರಕೈದಿದರೂ ಶನಿ ಬಿಡದೆನ್ನುವ ನಾಣ್ನುಡಿ ನಿನಗಾಯ್ತು !
ತಾಮಸಗುಣವೇ ನಿನ್ನನು ಕೆಡಿಸಿತು, ಇಲ್ಲಿಯು ಸ್ವಾತಂತ್ರ್ಯವು ಹೋಯ್ತು.
ಆದರು ನಿನ್ನನು ನಂಬುವುದೆಂತು ?
ನೀ ಮುಳಿದರೆ ಮೈಸೂರಿಗೆ ಬಂತು
ಪ್ರಾಣಸಂಕಟವು ಕೊನೆಗಂತು–
ಅದಕೋಸುಗ ನೀ ಶಿಲೆಯಾದೆ !
ಆದರು ಅಂಜಿಕೆ ತೊಲಗುವುದೆಂತು?–ಭಕ್ತರ ಪೂಜೆಗೆ ನೆಲೆಯಾದೆ !

ಉದಯದ ರಾಗವ ನೋಡುವೆ ನೀನು, ಕೇಳುವೆ ಸಂಜೆಯ ಸವಿದನಿಯ;
ಹೃದಯಕೆ ತಂಪನು ನೀಡುವ ತಂಗಾಳಿಯಲೋಲಾಡುವೆ ಮನದಣಿಯ;
ನೀಲಿಯ ಆಗಸ ಮೇಲಿಹುದು;
ಮುಗಿಲಿನ ಮಾಲೆಯು ಮೆರೆದಿಹುದ;
ತರುಲತೆ ಗಡಣವು ಬಳಸಿಹುದ;–
ಅರಮನೆಯಲ್ಲವೆ ಇವು ನಿನಗೆ !
ಊರಿನ ಗೊಂದಲವುಳಿಯುತ ಬರುವೆನು, ನಿನ್ನರಮನೆಯನು ಕೊಡು ನನಗೆ.

ಬಿಸಿಲಲಿ ಮಳೆಯಲಿ ಕಾಯುವೆ ನೆನೆಯುವೆ, ಮಂಜಿನ ಪುಂಜದೊಳದ್ದಿರುವೆ;
ಬಿಸಿಲಿಗೆ ಬೆದರದೆ, ಮಳೆಯಲಿ ಮುಳುಗದೆ, ಮಂಜಿಗೆ ಅಂಜದೆ ನೀನಿರುವೆ.
ಸಂತತ ತಪವನು ಎಸಗುವೆಯ ?
ಶಾಂತಿಯ ಕಡಲಲಿ ಮುಳುಗಿಹೆಯ ?
ಸಾಧುತ್ವವ ನೀ ಸಾರುವೆಯ ?–

ಮೌನವ ಧರಿಸಿಹೆ ಮನದಲ್ಲು !
ನಿನ್ನೀ ಕಲ್ಮನವೊಡೆಯಲು ಅರಿದು, ನಿನ್ನಯ ಗುಟ್ಟದು ಕಗ್ಗಲ್ಲು !

ಫೆಬ್ರವರಿ ೧೯೩೦]

## ಅಂದಿನ ಪಾಠ

ಕೋಗಿಲೆ ಕೂಗಿತು : 'ಓ, ವಿದ್ಯಾರ್ಥೀ,
ಹೊತ್ತಗೆಗಳ ಕಂತೆಯ ಹೊತ್ತು
ಹೋಗುವೆ ಶಾಲೆಗೆ ನಿತ್ಯವು ನೀನು.
ಏನಿದು ಹುಚ್ಚು, ನೋಯದೆ ಕತ್ತು ?
ಬಾ, ಮಲಗೀ ಮರದಡಿಯಲಿ, ಹೊರಳು–
ನಿತ್ಯವೆ ಹಸುರಿನ ಹಾಸು, ನೆರಳು ?

'ಬಿಳಿಯ ಮುಗಿಲ್ಗಳ ಮಂದೆಯ ನೋಡು,
ಹರುಷದ ನೊರೆಹಾಲ್ಗರೆಯುತಿದೆ;
ಕೆಳಗಿಳಿಯುತ ಹೊಂಬಿಸಿಲಿನ ಬಾನ್ದೊರೆ
ತೆರೆಯನು ತೋಯಿಸಿ ಹರಿಯುತಿದೆ;
ಈ ಮರದೆಡೆಯನು ಬೇಗನೆ ಸಾರು
ಮುಗಿಯುವ ಮುನ್ನವೆ ಹರುಷವ ಹೀರು.

'ಶಾಲೆಗೆ ಹೋಗುವ ನಿನ್ನನು ನಿಲ್ಲಿಸೆ
ಹಾಡುವೆ ನಿತ್ಯವು ನಿನಗಾಗಿ ;
ಕೇಳದೆ ಎನ್ನಯ ನುಡಿಗಳ, ಕೊರಗುವೆ
ಹಾರಿಬರಲು ಕೊರೆಯುವ ಮಾಗಿ.
ಆಗಲೆ ಸಾರುತಲಿದೆ ಕಾರ್ಗಾಲ;
ಎನ್ನಯ ಕೆಳೆಗಿಂದೇ ಕೊನೆಗಾಲ.

'ಕಾವ್ಯದ ಸೌಂದರ್ಯದ ಕಣಿಯನ್ನೇ
ಕೈಗಾಣಿಸುವೆನು – ಇದೊ ನೋಡು;
ಕನ್ನಡಿಯಲ್ಲಿಹ ಬಿಂಬವನಪ್ಪಲು
ಏಕೀ ಸಾಹಸ, ಈ ಪಾಡು ?
ನೋಡಿ, ಕರೆದು, ನೆರೆಯುಲು ಇರೆ ಕಣ್ಣು
ಒಲಿದೈತರುವಳು ಚೆಲುವಿನ ಹೆಣ್ಣು.

'ಶಾಲೆಯ ಓದೊಂದೇ ಓದು,
ಪುಸ್ತಕ ಪಠನವೆ ಆನಂದ !–
ಕುರುಡರ ಗೋಳಿದು ಏತಕೆ, ಮರುಳೆ?
ಕಣ್ಣಿರೆ, ಪ್ರಕೃತಿಯೆ ನಿತ್ಯಾನಂದ.
ಪ್ರಕೃತಿಯೆ ಕವಿ ಕೋಗಿಲೆಗಳ ಕಾಡು;
ಸುಗ್ಗಿಯೊಂದೆ ಪ್ರಕೃತಿಯು ನಗೆ ಹಾಡು !

'ಕವಿಯನು ಕೊರೆಯುವ ಬೋಧಕ ವೃಂದವ
ಕತ್ತುಹಿಡಿದು ತುಸ ದೂಡತ್ತ ;
ಸವಿ ಸುಧೆಗರೆಯುವ ವಿಶ್ವಹೃದಯವನು
ಪ್ರಕೃತಿಯ ಸೊಬಗಲಿ ನೋಡತ್ತ:
ಅದುವೇ ನಾಕದ ಅಶ್ರುತ ಗಾನ,
ಪ್ರೇಮಿಗಳರಸುವ ತತ್ತ್ವಜ್ಞಾನ.'

–ಇಂತುಲಿಯುವ ಕೋಗಿಲೆಯನು ಮನ್ನಿಸಿ
ನಿಂತೆನು ಅಲ್ಲಿಯೆ ಬಲು ಹೊತ್ತು;
ಮರೆತೆನು ಶಾಲೆಗೆ ಹೋಗುವುದನ್ನೆ–
ಶಾಲೆಯ ಪಾಠವು ಮುಗಿದಿತ್ತು.
ಆದರೆ ಅಂದಿನ ಪಾಠವೆ ಹೆಚ್ಚು:
ಆದರು ಶಾಲೆಗೆ ಹೋಗುವ ಹುಚ್ಚು !*

ಏಪ್ರಿಲ್ ೧೯೩೨]

* 'ಹಂಸಪಥ' ಕವನ ಸಂಕಲನದಿಂದ ಈ ಕವನವನ್ನು ಕೈಬಿಡಲಾಗಿದೆ.–ಸಂ.

# ಹರಟೆಯ ಹೊಡೆಯಲು ಸ್ನೇಹಿತರಿಲ್ಲ

ಹರಟೆಯ ಹೊಡೆಯಲು ಸ್ನೇಹಿತರಿಲ್ಲ,
ಕೆಲಸವ ಮಾಡಲು ಮನಸಿಲ್ಲ;
ಹರುಷದ ಹೆಸರೇ ಮೊಗದಲ್ಲಿಲ್ಲ,
ಅಳಲಿಗೆ ಕಾರಣ ಸಿಗಲಿಲ್ಲ;
ಆದರು ಮನ ಬಲು ಕುಗ್ಗಿತ್ತು,
ಮುಖವದು ತಗ್ಗಿತ್ತು.

ಊರಿನ ಗಜಿಬಿಜಿ ಗೊಂದಲವುಳಿದು
ದೂರದೂರ ಬಲು ದೂರದಲಿ
ನೇರಿಳೆ ಮರದಡಿ ನೆಳಲನು ಕಂಡು
ಸೇರಿದೆ ನಾನಾ ಮರದಡಿಯ
ಆ ನೇರಿಳೆ ಮರದಡಿಯಲ್ಲಿ
ಮಲಗಿದೆ ಮೌನದಲಿ

ಹಸುರು ಗರಿಕೆ ಹೊಸ ಹಾಸಿನ ಮೇಲೆ
ಸುಳಿಯಿತು ಹೊಂಬಿಸಿಲಿನ ಲೀಲೆ !
ಸೂರ್ಯದೇವನನು ಪೂಜಿಸುವಂದದಿ
ಬಿಳಿ ಮುಗಿಲಿನ ಬಿಳಿ ಹೂಮಾಲೆ !
ಮರದ ಮೇಲೆ ಹಕ್ಕಿಯ ಗಾನ
ಮಳೆಗರೆದುದು ಸವಿ ಸುಮ್ಮಾನ !
ವಿಶ್ವಕೆ ವಿಶ್ವವೆ ಹಿಗ್ಗಿತ್ತು –
ಆದರೆನ್ನ ಮನ ಕುಗ್ಗಿತ್ತು !

ಪ್ರಕೃತಿ ಮಾತೆಯಾ ಮಡಿಲೊಳು ಮಲಗಿ
ಶಾಂತಿಯನರಸಲು ತೊಡಗಿದೆನು.
ಅದರ ಸುಳಿವ ನಾನೆಲ್ಲಿಯು ಕಾಣದೆ
ಒಳಗೊಳಗೇ ಬಲು ಕೊರಗಿದೆನು.

ಅಚ್ಚರಿ ! ಅಂದಿನ ಪ್ರಕೃತಿಯ ಆ ನಗೆ
ಎನಗಾಗಿತ್ತು ಹಗೆ !

ಅಂದಾ ಪ್ರಕೃತಿಯ ಪೂರ್ಣತೆಯಲ್ಲಿಯೆ
ಶೂನ್ಯತೆಯನು ನಾ ಬಗೆಯುತಿರೆ,
ಸೌಂದರ ಸುಧೆಯನು ಸೂಸುವ ನೋಟಕೆ
ಮಾನ್ಯತೆಯೀವುದ ಮರೆಯುತಿರೆ–
ಯಾರೋ ಹಾಡುವ ದನಿ ಕೇಳಿಸಿತು,
ಎನ್ನನು ಏಳಿಸಿತು.

ಮೇಯುವ ಗೋವೃಂದದ ನಡುವೆಯಲಿ
ನೇರಿಳೆ ಮರದಡಿ ನೆಳಲಿನಲಿ,
ಕಾಯುತ ದನಗಳನಲ್ಲಿಯೆ ಕುಳಿತು
ಸೇರುತ ತಂಗಿಯ ಜೊತೆಯಲ್ಲಿ
ಹಾಡುವ ಹುಡುಗನ ದೂರದಿ ಕಂಡೆ,
ಒಡನೆಯೆ ಮುದಗೊಂಡೆ !

ತಾಳ ಸ್ವರಗಳ ಗಡಿಬಿಡಿಯಿಲ್ಲ,
ಗಾನವಿಶಾರದನವನಲ್ಲ ;
ಕೇಳುವ ಜನಗಳ ಸೆರೆಮನೆಯಿಲ್ಲ,
ಹಕ್ಕಿಯ ಹಾಡದು ಬೇಕಿಲ್ಲ.
ಹಾಡುವ ಹಕ್ಕಿಯು ಎನಗಾ ಗೊಲ್ಲ–
ಬೆಲ್ಲದ ಸವಿಯನು ಬಲ್ಲವ ಬಲ್ಲ !
ಎನಗಂದಿನ ಗುರುವಾ ಗೊಲ್ಲ !

ಅಂತಾ ಹಾಡನು ಕೇಳುತಿರೆ
ಅದರಲಿ ನಾ ಮೈಮರೆಯುತಿರೆ,
ಮುಸುಕಿದ ಕೊರಗದು ಕುಗ್ಗುತಿರೆ,
ಹೃದಯವು ಹರುಷದಿ ಹಿಗ್ಗುತಿರೆ–

ಸೌಂದರ್ಯದ ಸಿರಿಯನು ಕೈಗೊಂಡೆ,
ಸತ್ಯದ ಬೆಳಕನು ನಾ ಕಂಡೆ,
ನಿತ್ಯತೆಯನ್ನೇ ಮನಗಂಡೆ !

* * *

ಕೋಪ ತಾಪಗಳು, ಆಸೆ ಕನಸುಗಳು,
ಬರಿ ಸಿರಿಗೆಳಸುವ ಬಯಕೆಗಳು
ಈ ಪರಿ ಹೃದಯದ ಕಣ್ಣನು ಮುಸುಕಿರೆ
ಸಿರಿ ಸೌಂದರ್ಯವು ಕಾಣುವುದೆ ?
ಕೊಳೆ ಕವಿದಿಹ ಹೃದಯದ ಕನ್ನಡಿಯು
ಪ್ರತಿಬಿಂಬವ ತಾ ತಳೆಯುವುದೆ ?
ಒಳಗಡೆ ಹರುಷದ ಅಂಕುರವಿಲ್ಲದೆ
ಹೊರಗದು ಹುಡುಕಲು ಬೆಳೆಯುವುದೆ ?*

ನವೆಂಬರ್ ೧೯೩೧]

## ಕಳೆದ ಬಾಲ್ಯ

ತಿಂಡಿಯ ಕೊಳ್ಳಲು ಸಂತೆಗೆ ಹೋದೆ;
ಪುರಿಯ ರಾಶಿ, ಕಡಲೆಯ ಕಾಯಿ ;
ಬಂಡಿ ಬಂಡಿಯಲಿ ಮಾವಿನ ಹಣ್ಣು ;
ಉಪ್ಪೆಚ್ಚಿದ ಸೀಳ್‌ಸೌತೆಯ ಕಾಯಿ ;
ತಂಡ ತಂಡದಲಿ ಹಲಸಿನ ಹಣ್ಣು ;
ಬಗೆಬಗೆ ಬಣ್ಣದ ಒಳ್ಳೆ ಮಿಠಾಯಿ ;
ಎಂದೂ ಕಾಣದ ಹೊಸ ಬಿಸ್ಕತ್ತು;
ಯಾವಯಾವುದೊ, ಯಾರಿಗೆ ಗೊತ್ತು !
ಅಂದೆನಗೆಲ್ಲವು ಬೇಕಿತ್ತು–
ಆದರೆ ಮೂರೇ ಕಾಸಿತ್ತು !

---

* ಇದೇ ಕವನವು 'ಹಂಸಪಥ' ಕವನ ಸಂಕಲನದಲ್ಲಿದ್ದು ಅಲ್ಲಿ ಕೈಬಿಡಲಾಗಿದೆ–ಸಂ.

ಹೀಗೆಯೆ ಸಂತೆಯು ಬರುತ್ತಿತ್ತು,
ನನ್ನಲ್ಲಿಯು ಕಾಸಿರುತಿತ್ತು:
ಆದರೆ ಮೂರೇ ಮೂರು ಕಾಸು,
ಅಮ್ಮ ಕೊಟ್ಟ ಕಾಸು.

ಈಗಿರುವುದು ನಾ ಮೈಸೂರು–
ಬೆಡಗಿನ ಸೊಗಸಿನ ಮೈಸೂರು:
ಸಾಲಾಗಿರುವುದು ದೊಡ್ಡ ಬಜಾರು
ಕೊಳ್ಳುವವರಿಗೆ ಕುಬೇರನೂರು !

ಪೇಟೆಗೆ ಹೋದರೆ ಬಗೆಬಗೆ ಬಟ್ಟೆಯ
ಉಡುಪನು ಹೊಲಿಸಲು ಎನಗಾಸೆ ;
ಹೋಟೆಲ್ ಹತ್ತಿರ ಸುಳಿಯುತ್ತಿದ್ದರೆ
ಕಾಡುವುದೆನ್ನನು ತುಪ್ಪದ ದೋಸೆ !
ಸಿಕ್ಕುವುದೆಂದೊ ಒಂದೆರಡಾಣೆ–
ಏತಕೆ ಸಿಕ್ಕುವುದೋ ನಾ ಕಾಣೆ !
ತಿಂಡಿಯ ತಿನ್ನಲೆ, ಬಟ್ಟೆಯ ಹೊಲಿಸಲೆ,
ಇಲ್ಲವೆ, ಎಲ್ಲವ ಕೂಡಿಡಲೆ ?
ಕಂಡು ತಿರುಕರನು ಮನ ಮರುಗುತ್ತಿರೆ
ಎಲ್ಲವನವರಿಗೆ ನಾ ಕೊಡಲೆ ?

ಹಾಗೂ ಹೀಗೂ ಮನ ತೂಗಾಡಿ
ಅಲ್ಲಿಗು ಇಲ್ಲಿಗು ತುಸ ಓಡಾಡಿ
ಏನನೊ ತಿಂದು, ಏನನೊ ಕೊಂಡು
ಇದ್ದುಬದ್ದುದನು ವೆಚ್ಚವ ಮಾಡೆ,
ಆಸೆ ಹಿಂಗದೆಯೆ ಎಂದಿನ ಪಾಡೆ !

ಜೋಯಿಸರೇನೋ ಜಾತಕ ನೋಡಿ
ಎನ್ನಯ ಗ್ರಹಗತಿಯನು ಕೊಂಡಾಡಿ

ಹೇಳಿದರಂತೆ: ಮುಂದೆಂದಾದರು
ಹೊನ್ನಿನ ಹೊಳೆಯನೆ ಹರಿಸುವೆನಂತೆ !
ಸ್ವರ್ಗಸುಖವನನುಭವಿಸುವೆನಂತೆ !
ಅಂತೆ! ಅಂತೆ ! ಸುಳ್ಳಿನ ಕಂತೆ !
ಏನೋ ಎಂತೋ ! ಬಂದರು ಬಂತೆ !

ಜೋಯಿಸರೆಂದುದು ನಿಜವಿರಬಹುದು,
ಹೊನ್ನ ಹೊಳೆಯೆ ಹರಿಯಲುಬಹುದು:
ಇನ್ನು ಮರಳುವುದೆ ಕಳೆದ ಬಾಲ್ಯವದು ?
ಯೌವನವೆಂದೆಂದಿಗು ಇಹುದೆ ?

ಆಗಸ್ಟ್ ೧೯೩೨]

## ಗೋಳು

ಚೆನ್ನದಾಸನ ವಜ್ರ:
ದಂಡಗಳ ಕೂಡಿ
ಮಣ್ಣಾದ ಯೌವನದ
ಅರಮನೆಯ ನೋಡಿ ;
ಉರುಳಿಹವು ಶಿಖರಗಳು
ಹಾಳಾಗಿ ಒಡೆದು,
ನುರಿತೆಲ್ಲ ಪುಡಿಪುಡಿಯು
ಅಳಲೊಂದನುಳಿದು !

ನನ್ನ ಹಿಂದಿನ ದಿನದ
ಆಸೆ ಕನಸುಗಳು
ಇನ್ನೆಲ್ಲಿ, ಯಾವೆಡೆಗೆ
ಓಡಿಹೋಗಿಹವು ?

ಕಟ್ಟಿಸಿದೆ ಶಿಖರಗಳ,
ಎಲ್ಲವೂ ಹಾಳು;
ಇಟ್ಟ ಹೊಂಗಲಶಗಳು–
ಅವು ಎಲ್ಲಿ, ಹೇಳು ?

ಹೊಂಬಿಸಿಲ ಹಗಲು ಮೇಣ್
ತಾರೆಯಿರುಳಿಂದ
ತುಂಬಿ ಈ ಇಳೆಯೊಮ್ಮೆ
ಮೆರೆಯಿತಂದು :
ಹರುಷದಲಿ ಹಿಗ್ಗುತ್ತ
ಬೆಟ್ಟ ನದಿಯೊತ್ತಿನಲಿ
ಪೊರೆವವನ ಹೊಗಳಿದೆನು
ಉಗುವ ಹರುಷದಲಿ.

ಯೌವನದ ಕನಸುಗಳು
ಒಂದಾಗುತೊಂದು
ರವಿಯೆದುರ ಮುಗಿಲುಗಳ
ತೆರದಿ ತಾವ್ ಬಂದು
ಮೆರೆಯುತಿರೆ ಉಷೆಯಲ್ಲಿ
ಅವು ಎನಿತು ಕೆಂಪು !
ಹರಿಯಲಾ ಬೆಳಕಂದು
ಎಲ್ಲಿ ಆ ಸೊಂಪು ?

ಚಳಿಗಾಲದಿರುಳಿನಲಿ
ಮಿನುಗು ಹುಳುವೆಲ್ಲ
ಸುಳಿಸುಳಿದು ಅಳಿವಂತೆ
ಇಳೆಯ ಬಾಳೆಲ್ಲ;
ಬಳುಬಳುಕಿ ಹೊಳೆದಳಿವ
ಬಳ್ಳಿವೆಳಗಂತೆ

ಬೆಳೆದಳಿವ ಯೌವನದ
ಕನಸುಗಳ ಕಂತೆ !

ದೇಶಗಳು, ಕೋಶಗಳು,
ಸಿರಿಯ ಬರಿಹೆಮ್ಮೆ–
ನಾಶವಾಗಲೆ ಬೇಕು
ಇಳೆಯಲೊಮ್ಮೆ ;
ಬಲವಂತ, ಧನವಂತ,
ತರುಣಿಯರ ನೋಟ,
ಬೆಳುದಿಂಗಳೊಳು ಅವರ
ಕೂಡಿ ಸೊಗವೇಟ–

ಎಲ್ಲ ಮರೆಯಾಗಿಹುವು.
ಏನು ಉಳಿದಿಹುದು ?
ಜೀವನದ ಹೊಸ ಅರಲು
ಉದುರಿ ಮಣ್ಗೂಡಿಹುದು;
ಅದರ ಎಳಬಿಸಿಲು ಮಳೆ
ಜೊಂಡಿಗಾಸರೆಯು–
ಬಿದಿರು ಗಾಳಿಯಲಳುವ
ಕಿರದಿ ಕರೆಕರೆಯು.

ಮೇ ೧೯೩೦]

## ಒಳದನಿ

ಜಾತಿ ಮತಗಳ ಹೊದಿಕೆಯನು ತೆಗೆದು ಹರಿದು
ಕುಲ ಗೋತ್ರವೆಂಬ ಹುಸಿ ಹೆಸರ ಕಿತ್ತೊಗೆದು
ಪ್ರೀತಿಗೆಲ್ಲರು ಒಂದೆ ಎಂಬುದನು ಅರಿದು
ಬಳಗ ಬಂಧುಗಳೆಂಬ ಭಾವನೆಯ ತೆಗೆದು

ಮಾತೆಯೊಬ್ಬಳ ಮುಂದೆ ಭೇದವನು ಮರೆದು
ಬಾಳು ಧರ್ಮದಲೆಂಬ ದನಿಯ ಕೇಳಿದೆನು :
ಹೃದಯದೊಳದನಿಯು ಅದು, ದಿವ್ಯದನಿಯು.
ಕೇಳಿದಂತೆಯೆ ನಡೆಯೆ, ಎಲ್ಲವನು ತೊರೆದು,
ಎದೆಯಿಲ್ಲ, ಎದೆಯಿಲ್ಲ, ಸುಮ್ಮನಿಹೆನು.
ಹಾಳಾದ ಈ ಹುಟ್ಟು – ಕಬ್ಬಿಣದ ಕಟ್ಟು :
ಅದ ಮುರಿದು ಬಿಸುಡುವೆನು, ಎಲ್ಲವನು ಸುಟ್ಟು :
ಪಾಲಿಸೆನ್ನನು ದೇವ ಶಕ್ತಿಯನು ಕೊಟ್ಟು.

ಜುಲೈ ೧೯೩೧]

## ಬೀದಿಯೊಳಗಲೆಯುತಿಹಳಾರಿವಳು ?

ಬೀದಿಯೊಳಗಲೆಯುತಿಹಳಾರಿವಳು? – ಚೆಲುವೆ,
ಮೈಯ ಮುಚ್ಚಲು ಒಳ್ಳೆ ಬಟ್ಟೆಯಿಲ್ಲ;
ಉಟ್ಟಿರುವ ಲಂಗವೂ ಹರಿದುಹೋಗಿಹುದು,
ತೊಟ್ಟಿರುವ ಕುಪ್ಪಸವು ಚಿಂದಿ ಚಿಂದಿ.

ನಿಡುಗುರುಳ ಜಡೆಯಾಗಿ ಹೆಣೆದುಕೊಂಡಿಲ್ಲ,
ಧೂಳಡರಿ ಅತ್ತಿತ್ತ ಸರಿಯುತಿಹುದು;
ತೆಳು ಮುಗಿಲು ಕವಿದಿರುವ ಚಂದ್ರಮಂಡಲದಂತೆ
ಇವಳ ಮುಖವೇಕೆ ಬಲು ಕಂದಿರುವುದು ?

ಅಡಗಿರುವ ಇವಳ ಸೌಂದರ್ಯವನು ಭಾವಿಸಲು
ಸಿರಿಯುಳ್ಳ ರಮಣಿಯರ ಜರೆಯುತಿಹುದು;
ಸಿಂಗರಿಸಿಕೊಳ್ಳುವುದಕೊಂದು ಕಾಸಿಲ್ಲ,
ತಿರಿದು ತಿನ್ನುವಳಿವಳು, ಈ ಚೆಲುವೆ ಹುಡುಗಿ.
ವನದಲ್ಲಿ ಮೆರೆಯುತಿಹ ಸುಮವಿದ್ದರೇನು?

ಅದನು ನೋಡುವರಿಲ್ಲ, ಮುಡಿವರಿಲ್ಲ–
ತುಂಬಿದೀ ಪಟ್ಟಣವು ಇವಳ ಪಾಲಿಗೆ ಕಾಡು :
ಇವಳ ಕೇಳುವರಿಲ್ಲ, ಆರಯ್ವರಿಲ್ಲ.

ಕಾಡುಹಕ್ಕಿಯ ಗಾನವನು ಕೇಳ್ವರಾರು ?
ಆದರೂ ಹಾಡುವುದು ವ್ಯರ್ಥವಾಗಿ–
ಇವಳು ಗಾಯಕಿಯಲ್ಲ, ಇಂಪಾಗಿ ಹಾಡುವಳು ;
ಇವಳ ಹಾಡನು ಮೆಚ್ಚಿ ಕೇಳ್ವರಿಲ್ಲ.

ಮನೆಮನೆಯ ಬಾಗಿಲಿಗೆ ಹೋಗಿ ಹಾಡುವಳು,
ಒಂದೆ ಹಿಡಿಯಕ್ಕಿಯನು ಬರಿದೆ ಬೇಡುವಳು;
ಭಿಕ್ಷೆಯನು ಹಾಕದಿರೆ ಮನದಲ್ಲಿ ನೊಂದು
ದೈನ್ಯದಲಿ ದೇವನಿಗೆ ಮೊರೆಯಿಡುವಳು.

ಇವಳ ರೂಪನು ನೋಡಿ ತಲೆಯ ತೂಗಿದೆನು–
ಇವಳುಡುಪ ನೋಡಿದರೆ ತುರುಕರವಳು.
ಬೇರೆ ಮತದವಳೆಂದು ಭಿಕ್ಷೆಯನು ಕೊಡರು–
ದೂರ ನಡೆ, ತೊಲಗೆಂದು ಗದರಿಸುವರು.

ಎಲ್ಲರೂ ಅಟ್ಟುತಿಹ ಇವಳನ್ನು ನೋಡಿ
ಮರುಗಿದೆನು ಮನದಲ್ಲಿ ಶೋಕದಿಂದ ;
ಯಾರಿಗೂ ಬೇಕಿಲ್ಲದಿವಳ ಗಾನಕ್ಕೆ
ನನ್ನ ಹೃದಯದೊಳಾಗ ಎಡೆಯನಿತ್ತೆ.

ಹೆಣ್ಣಾಗಿ ಹುಟ್ಟಿದಳು, ಕಷ್ಟಪಡುತಿಹಳು;
ಜನರೆಂತು ಇವಳನ್ನು ತೊರೆಯುತಿಹರು:
ತಮ್ಮಂತೆ ಜೀವಿಯೆಂದೆಣಿಸದಿಹರು !–
ದೇವನಿಗು ಇವಳಲ್ಲಿ ದಯೆಯಿಲ್ಲವೆ ?

೧೯೨೮

## ತಿರುಕಿಯ ಮೊರೆ

ಹುಟ್ಟು ತಿರುಕಿ ನಾನು – ತಿರುಪೆಯೆ
ಹೊಟ್ಟೆಪಾಡು ನನಗೆ

ಎತ್ತ ನೋಡಿದರು ಜನರು – ತಾವ್
ಮತ್ತರಾಗಿ ನಲಿಯುವರು;
ತುತ್ತು ಕೂಳು ದೊರೆಯದು ನನಗೆ ;
ಗೊತ್ತು ಗುರಿಯ ಕಾಣೆ.

ಕೇಳುವರಾರೆನ್ನಯ ಮೊರೆಯ;
ತಾಳುವರಾರೆನ್ನೊಳು ಕನಿಕರವ ?
ನಾಳಿನ ಪರಿಯಿನ್ನೇನಿಹುದೊ ?
ಬಾಳಿನಿಂದ ಬಿಡುಗಡೆಯೆಂದೊ ?

ಓ ಮರವೇ ! ಓ ತಾಯೇ !
ತಂಪನೀವ ತವರೇ !
ಹಕ್ಕಿಗಳೇ, ಒಡಹುಟ್ಟುಗಳೇ,
ಹಾಡ ಕಲಿಸಿದವರೇ !
ಹೊರಗು ಮಾಡಬೇಡಿ – ಮುಂದೆಯು
ನಿಮ್ಮವಳನು ಕಾಪಾಡಿ.

೧೯೩೮]

# ಅಪವಾದ

ಕಮಲೆಯೊಬ್ಬಳು ತರುಣಿ, ಬಹಳ ಚೆಲುವೆ ;
ಅಪವಾದ ಭೀತಿಯಿಂದೊಡಲುಳಿದ ವಿಧವೆ.

ಬೇಡದವರುಸಿರೊಂದು–
ಇವಳೆದೆಗೆ ಕಿಚ್ಚಿಟ್ಟು ಕಳೆಯ ಕುಗ್ಗಿಸಿತು,
ಭಯದ ಶೂಲವ ನಟ್ಟು ತಲೆಯ ತಗ್ಗಿಸಿತು;
ಬಾಳಿಗಿಂತಲು ಸಾವು ಸವಿಯೆನಿಸಿತು.

ನಂಜುಗುವ ಮೆಲ್ನುಡಿಯು–
ಇವಳ ಬಾಳಿನ ಬೇರ್ಗೆ ಬೆನ್ನೀರ ಹೊಯ್ದು,
ಅರಳದಿಹ ಸುಮವೊಂದ ಮೊಗ್ಗಿನಲೆ ಕೊಯ್ದು,
ಇಳೆಗೆಲ್ಲ ಕೇಳಿತಾವೊಂದು ನುಡಿಯು.

ಕೇಡಿಗರ ಪಿಸುಮಾತು–
ಇವಳ ನಡತೆಯ ಕುರಿತು ದೂರು ಹಬ್ಬಿಸಿತು,
ಸಂಶಯದ ಸರ್ಪವನು ಸೃಜಿಸಿ ಎಬ್ಬಿಸಿತು:
ಎಲ್ಲೆಲ್ಲಿಯೂ, ಅಯ್ಯೊ ! ಇವಳ ಮಾತು !

ಕಟುಕಿಯರ ಕೈಸನ್ನೆ–
ಕೂರ್ವಾಳಿನಂತೊಗೆದು ಚಿಗಿದು ಬರುತಿರಲು
ಅದರ ಹತಿಯನು ತಡೆಯದಾಯ್ತಿವಳ ಕೊರಲು :
ತಡೆಯಲಾರದೆ ತಲೆಯನೊಡ್ಡಿದಳು ಕನ್ನೆ.

ಚಿಂತಿಸುತ ಮನದೊಳಗೆ–
ಅಪವಾದವನು ಕೇಳಿ ಹೃದಯ ನಡುನಡುಗೆ,
ಅದನೆದುರಿಸಲು ಇದ್ದ ಶಕ್ತಿಯೆಲ್ಲವು ಉಡುಗೆ–
'ತಾಯಿ ಪೊರೆ'ಯೆಂದು ಹಾರಿದಳು ಹೊಳೆಗೆ !

ಡಿಸೆಂಬರ್ ೧೯೩೨]

## ಕವಳ ತಾಯಿ

"ಕವಳ ತಾಯಿ, ಕವಳ ತಾಯಿ,
ಕವಳ ತಾಯಿ, ಕವಳ ತಾಯಿ"–
ಬಂದನದೋ 'ಕವಳ ತಾಯಿ',
ಎಂಜಲುಣುವ ಇರುಳ ನಾಯಿ !

ನಾವು ಉಂಡು ತಿಂದು ತೇಗಿ
ಮಿಕ್ಕ ತಂಗುಳನ್ನಕಾಗಿ
ಒಂದೆ ಉಸಿರಿನಲ್ಲಿ ಕೂಗಿ
ಕಯ್ಯನೊಡ್ಡುತಿರುವನು.

ಹಗಲು ಬರುವ ತಿರುಕನಲ್ಲ–
ದೇವರ ಹೆಸರವನಿಗಿಲ್ಲ;
ಅವನ ಬಾಳ್ಗೆ ಹಗಲೆ ಇಲ್ಲ;
ಹೊಟ್ಟೆಯವನ ದೇವರು.

ಬಾಗಿಲನ್ನು ಬಡಿಚಿಕೊಂಡು
ಕೋಳಿನಿದ್ದೆ ಗೈವರೆಲ್ಲ:
ಕೇಳ್ವರೇನು ಇವನ ಸೊಲ್ಲ ?
ಹೊಟ್ಟೆ ಹಸಿವು ಅವರಿಗಿಲ್ಲ.

ಕೊಟ್ಟರುಂಟು ತುತ್ತು ಕೂಳು ;
ಇಲ್ಲದಿರುಲು, ಉಂಟು ಕಾಲು :
ಹಸಿದ ಹಸುಳೆಯಂತೆ ತಾಯ
ಹೆಸರು ಕೂಗುತಲೆವನು.

ಮನೆಯ ಹಸಿವ ಬಲ್ಲ ತಾಯಿ,
ಮಕ್ಕಳನ್ನು ಪೊರೆದ ತಾಯಿ,

ಇವನ ಹಸಿವ ಕೂಗು ಕೇಳಿ
ಮನಸು ಕರಗಬಾರದೆ ?

ಇರುಳೆ ಇವನ ತಾಯಿ, ಬಡವೆ;
ತಾರೆಗಣ್ಣ ಬಿಟ್ಟು ಬಿಟ್ಟು,
ಗಾಳಿಸುಯ್ಲು ಸುಯ್ದು ಸುಯ್ದು
ಮರುಗಿ ಕೊರಗಿ ಕುದಿವಳು.

ಮೇ ೧೯೪೦]

## ಎಚ್ಚರಿಕೆ

ಮೃಷ್ಟಾನ್ನ ಭೋಜನವ
ಹೊಟ್ಟೆತುಂಬಿಯು ಮೇಲೆ
ಕಟ್ಟರೆಯ ಬರುವಂತೆ
ಮೆದ್ದು ನಿಂತಿಹರು !
ಹೇಳುಳಿದುದಿನ್ನೇನು ?–
ಎಲೆಯಡಕೆಯಗಿಯುತ್ತ
ಹೊಟ್ಟೆ ಜುಟ್ಟನು ನೀವಿ
ಪವಡಿಸುವುದು !

ಅಯ್ಯೊ ! ಏನನ್ಯಾಯ !
ಕಣ್ಣು ಕಾಣದೆ ನಿಮಗೆ ?
ನೀವೇನ ಮಾಡುವಿರಿ :
ತಿಂದುತಿಂದಂಧತನ !

ನಿದ್ದೆಗಣ್ಣನು ತೆರೆದು
ಅತ್ತ ನೋಡಿರೊ, ಅಗೋ
ಸತ್ತು ಜೀವಿಪ ಮಂದಿ–

ಸಾಯದೆಯೆ ಬದುಕಿಹರು !
ಜೋಲುಮೊಗದೊಡನೆಂತು
ಸಾಲಾಗಿ ಕುಳಿತಿಹರು :
ಮಿತ್ತುವಿನ ನೆರಳುಗಳು,
ಮತ್ತರಾದೆಮ್ಮನ್ನು
ಬಿಡದೆ ಜೊತೆಗೆಳೆದುಯ್ವ
ಜವನಾಳ್ಗಳು !

ಹಸಿವು ಬೇನೆಗೆ ನೊಂದು
ಬಿಸಿಲು ಬೇಗೆಗೆ ಬೆಂದು,
ಎಂಜಲನು ಭುಂಜಿಸಲು,
ನಾವುಂಡು ಮಿಕ್ಕುದನು
ತಾವುಂಡು ಬದುಕಿರಲು,
ಎನಿತೆನಿತೊ ದೂರದಿಂ
ಬಂದು ಕಾಯ್ದಿಹರಿಲ್ಲಿ–
ಕಾಗೆಗಳ ಕೆಳೆಯರು,
ನಾಯ್ಗಳೊಡನಾಡಿಗಳು,
ನರ ನಾಯ್ಗಳು !

ಧರ್ಮಶಾಸ್ತ್ರದ ಕಟ್ಟು,
ವೇದಾಂತವೆಷ್ಟೆಷ್ಟು !
ಎಲ್ಲವನು ಸುಡಿರೊ !
ಹೊಟ್ಟೆತುಂಬಿದ ಜನಕೆ
ನಿಮ್ಮ ಸವಿಯೌತಣ,
ಹಸಿದು ನರಳುವ ಜನರು
ಮೃತ್ಯುವಿಗೆ ಔತಣ !
ಹಸಿದ ಹೊಟ್ಟೆಯ ಮುಂದೆ
ತಿಂದು ತೇಗುವುದೇನು,
ಸಾವು ನೋವಿನ ಮುಂದೆ

ಸಂಗೀತವೇನು !
ಇದುವೆ ನಿಮ್ಮಯ ದಾನ,
ಇದುವೆ ನಿಮ್ಮಯ ಜ್ಞಾನ !

ಎಚ್ಚರಿಕೆ, ಎಚ್ಚರಿಕೆ !
ನರ ನಾಯ್ಗಳಿವಕಿಂದು
ಹಿಡಿಗೂಳನಿಕ್ಕದಿರೆ,
ಹಸಿವ ಕಳೆಯದಿರೆ,
ಜವನ ನಾಯ್ಗಳೆ ಆಗಿ
ಅವನೆಡೆಗೆ ನಿಮ್ಮನ್ನು
ಒಯ್ದಾವು ತಿಂದಾವು,
ಯಮಧರ್ಮನೆದುರಿನಲಿ
ನ್ಯಾಯವನು ಪಡೆದಾವು–
        ಎಚ್ಚರಿಕೆ,
        ಎಚ್ಚರಿಕೆ !

ಫೆಬ್ರವರಿ ೧೯೩೧]

## ಬಡವನ ಕೊಡಲಿ

ಕಡಿದೂ ಕಡಿದೂ ಸೌದೆಯ ಕಡಿದು
ದುಡಿದೂ ದುಡಿದೂ ದಿನವೂ ದುಡಿದು
ಇಂದಿನವರೆಗೂ ಹೊಟ್ಟೆಯ ಹೊರೆದು
ಹೆಂಡತಿ ಮಕ್ಕಳನೆಲ್ಲರ ಪೊರೆದು
ಬಾಳುತಿರುವನೀ ನರಕದ ಬದುಕ–
ನೋಡದೊ, ಸೌದೆಯ ಕಡಿಯುವ ಮುದುಕ,

ಕಡಿದೂ ಕಡಿದೂ ಸೌದೆಯನು
ತೇಯುತಲಿಹನು ದೇಹವನು ;

ಹಾಳು ಬಾಳಿಗೆ, ಒಪ್ಪಿಡಿ ಕೂಳಿಗೆ,
ತೇದ ದೇಹವನು ಮಾರುವನು.
ಹಲವರು ನೆಳಲಲಿ ಸೊಗದಿಂದಿರಲು
ಬಿಸಿಲಲಿ ಸೌದೆಯ ಕಡಿಯುವನು;
ಹಲವರು ಬೆಚ್ಚಗೆ ಮನೆಯೊಳಗಿರಲು
ಮಳೆಯಲಿ ಸುಮ್ಮನೆ ದುಡಿಯುವನು.

ಹಿಂದವನೇನೋ ಗಟ್ಟಿಯ ಆಳು;
ಇಂದವನಿಗೆ ಗತಿಯೇನು, ಹೇಳು ?
ಬೇರೆಯ ಗತಿಯಿನ್ನೇನಿಹುದು?
–ಸಂಜೆಯವರೆಗೂ ದುಡಿಯುವುದು,
ಸೌದೆಯ ಕಡಿಯುವುದು,
ಕುಗ್ಗಿ ಮಡಿಯುವುದು !
ಏನನ್ಯಾಯ, ಏನನ್ಯಾಯ !
ಹಿಡಿ ಕೂಳಿಗೆ ದೇಹದ ಬೆಲೆಯೆ ?

ಅವನ ಶರೀರವ ಸ್ವಲ್ಪ ನೋಡು,
ರಸವೊಣಗಿದ ಬರಿ ಎಲುಬಿನ ಗೂಡು;
ಮೌನದ, ದುಃಖದ, ತೃಪ್ತಿಯ ಬೀಡು;
ಅವನ ಮೌನವೇ ಎಲ್ಲರನೆಬ್ಬಿಸಿ
ತಾಂಡವವಾಡುವ ಕೊನೆ ಹಾಡು.

ದಿನವೂ ದುಡಿದರೆ ನಾಲ್ಕಾರಾಣೆ ;
ಹೊಟ್ಟೆ ತುಂಬುವುದೆ ?–ನಾ ಕಾಣೆ.
ಎಷ್ಟು ದುಡಿದರೂ ಹೊರೆಯದು ಹೊಟ್ಟೆ,
ಕಷ್ಟಪಟ್ಟರೂ ಹರುಕಲು ಬಟ್ಟೆ.
ಮನೆ ಮನೆಗಲೆಯುತ ನಿತ್ಯವು ದುಡಿದರೆ

ತನ್ನಯ ಬಾಳನು ಬಲಿಗೊಟ್ಟು,
ಸಿರಿವಂತರ ಸಿರಿಗಡಲಿಂದವನಿಗೆ
ಸಿಕ್ಕುವುದೊಂದೇ ಒಂದು ತೊಟ್ಟು !

ಜಿಗಣೆಯ ತೆರದಿ ಕುಬೇರನ ಕುವರರು
ಬಡಬಗ್ಗರ ಎದೆರಕ್ತವ ಹೀರಿ
ಆಳಆಳದಲಿ ಬಲು ಬೇರೂರಿ
ಯುಗಯುಗವಾಯ್ತು, ಬೆಳೆಯುತಲಿಹರು
ದೊಡ್ಡ ಕಾಡಾಗಿ,
ಅಧರ್ಮದ ಬೀಡಾಗಿ.
ಸುಮ್ಮನೆ ಬಿಡುವುದೆ ಈ ಕಾಡನ್ನು
ಬಡವನ ಬಡ ಕೊಡಲಿಯ ಪೆಟ್ಟು ?
ಮಲಗಿಹ ಅವನೆದೆ ಕೋಪದ ಕಿಚ್ಚು
ನೆಲಸಮ ಮಾಡದೆ ಕೊನೆಗದ ಸುಟ್ಟು ?

ದಿನವೂ ದಿನವೂ ದುಡಿಯುವನು,
ಸೌದೆಯ ಕಡಿಯುವನು.
ಅವನಿಗೆ ಕೊಡಲಿಯೆ ಸರ್ವಶಕ್ತಿ :
ಅದರಿಂದಲೆ ಬಡವರ ಮುಕ್ತಿ !

೧೯೩೧]

## ತಾರೆಗಳ ಮರುಮಾತು

ತಾರೆಗಳೆ ! ಬಿತ್ತರದ ಬಾನಿನಲಿ ಮೆರೆವ ಕಣ್ಣುಗಳೆ !
ನೀವು ಕಂಡಿಹುದೇನು ನಿಮ್ಮ ಬದುಕಿನಲಿ ?
ಸಾರಿ ಮರಳಿಹವು ಶತಮಾನಗಳು ಎನಿತೆನಿತೊ ನಿಮ್ಮ ಕಣ್ಮುಂದೆ.

'ಕಂಡುದನು ಹೇಳುದೆವು, ಕಲ್ಪನೆಯ ಕಥೆಯಲ್ಲವೆಮ್ಮ ಕಥೆಯು:
ಮೇಲೆ ಸಾಗರದಂತೆ ಗಂಭೀರ ನೋಟ,
ಸೊಗದ ಸುಗ್ಗಿಯ ಬೆಳಸು; ಒಳಗೆ ಹೊಲಸು:
ಎಲ್ಲೆಲ್ಲು ಕಾದಾಟ, ಬರಿಯ ಕಾದಾಟ.
ಬಲು ಘೋರತರ ನೋಟ,
ನಿಮ್ಮ ಈ ಆಟ.
ಕಂಡಿಹೆವು ಇದನೆಲ್ಲ ನಮ್ಮ ಬದುಕಿನಲಿ.'

ದೂರ ಬಲು ದೂರದಲಿ ಶೂನ್ಯವಿಸ್ತಾರದಲಿ ನೆಲಸಿ ನೀವು
ಏನನಾಲೋಚಿಸುತ ಕಾಲ ಕಳೆಯುವಿರಿ ?
ನೀರವತೆಯಲಿ ಮುಳುಗಿ ಮಾತಾಡದೆಯೆ ನೀವು ಏನ ಮಾಡುವಿರಿ?

'ಹಿಂದೆ ನಡೆದುದನೆಲ್ಲ, ಇಂದು ನಡೆವುದನೆಲ್ಲ ಯೋಚಿಸುತ್ತಿಹೆವು:
ಸಾಲು ಮೋಡಗಳಂತೆ ಒಂದಾಗುತೊಂದು
ಚಕ್ರಾಧಿಪತ್ಯಗಳು ಕಂಡು ಕಾಣದಿವೆ–
ಜಗವನಾವರಿಸಿಹುದು ರಕ್ತಮಯ ಕ್ರಾಂತಿ !
ಕ್ರಾಂತಿ ರಾಕ್ಷಸಗಂಜಿ
ಇಲ್ಲಿಹಳು ಶಾಂತಿ,
ಚೆಲುವೆ ಶಾಂತಿ !
ನಿಮ್ಮ ಬಳಿಸಾರುವಳೆ? – ಎಂದು ಯೋಚಿಸುತಿಹೆವು.'

ಕ್ಷಣಕೊಮ್ಮೆ ಏಕಿಂತು ಮಿನುಗಿ ಕಣ್ಮರೆಯಾಗಿ ಮತ್ತೆ ಮಿನುಗಿ,
ಬಾವ ಕತ್ತಲೆಯಾಳದಲ್ಲಿ ಮುಳುಗುವಿರಿ ?
ಮನವನಾವರಿಸಿರುವ ಶಂಕೆಯಾವುದು ? ಬೆರಗುಗಣ್ ಬಿಡಲು
ಭಯವಾವುದು ?

'ನಮ್ಮ ಮುಂದಿನ ಬಾಳು ಎಂತೊ ಏನೋ ಎಂದು ನಡುಗುತಿಹೆವು.
ಈ ವಿಶ್ವದಾ ಹುಟ್ಟು, ಅದು ಹಿರಿಯ ಗುಟ್ಟು ;
ಅದರ ಬುಡವನು ಬೆದಕೆ ನೀವು ಹಟತೊಟ್ಟು

ಹೊಗುತಿರುವಿರಿ; ನಮ್ಮ ಬಳಿಸಾರಲೆಂದು
ಹಾಡುತಿರುವಿರಿ ನೀವು–
ನಿಮಗಿಲ್ಲ ಕಟ್ಟು,
ಗೆರೆಮೀರಿ ಬರುತಿಹಿರಿ;
ಸರಿಯಾದುದಲ್ಲವದು :
ನಿಮ್ಮ ಕುಣಿದಾಟಕ್ಕೆ ನಿಮ್ಮ ಹಾರಾಟಕ್ಕೆ
ನಿಮ್ಮ ನೆಗೆದಾಟಕ್ಕೆ ನಿಮ್ಮ ಹೋರಾಟಕ್ಕೆ
ಸೃಷ್ಟಿ ಮುನಿದುರಿಯುವುದು,
ಸೂತ್ರ ಹರಿಯುವುದು !
ನಿಮ್ಮ ಬುದ್ಧಿಯ ಮಾಟ,
ನಿಮ್ಮ ಕೊನೆಯಾಟ !
ಎಂದು ಬರೆವುದೊ ಏನೊ ನಮಗೆ ನಿಮ್ಮಯ ಸಂಗ,
ನಮ್ಮ ಶಾಂತಿಗೆ ಭಂಗ–
ಎಂಬ ಶಂಕೆಗೆ ಸಿಲುಕಿ ಬೆರಗುಗಣ್ ಬಿಡುತಿಹೆವು,
ಭಯದಿ ಮಿಡುಕುವೆವು !
ಸಾಕು ಮಾನವ ನಿನಗೆ ಸಾವಿರ ನಮಸ್ಕಾರ !'

೧೯೩೫]

## ತಣಿವು–ನಲಿವು–ಗೆಲವು

ಹಸಿವ ಹಿಂಗಿಸಿಕೊಳಲು ಉದರಕ್ಕೆ ತಣಿವು,
ಹಸಿದವರಿಗೊಲಿದು ಕೊಡೆ ಹೃಯದಕ್ಕೆ ನಲಿವು ;
ನಲ್ನುಡಿಯನಾಡುವುದು ನಾಲಗೆಗೆ ತಣಿವು,
ನುಡಿಯಂತೆ ನಡೆದುಕೊಳೆ ಜೀವನಕೆ ನಲಿವು ;
ತಪ್ಪು ಕಂಡೆಡೆ ಅದನು ತಿದ್ದಿದೊಡೆ ತಣಿವು,
ತನ್ನ ತಪ್ಪನು ತಿದ್ದಿಕೊಳುವುದದೆ ನಲಿವು;
ತನ್ನ ಉನ್ನತಿಗಾಗಿ ಹಿಗ್ಗದಿರೆ ತಣಿವು,
ಕೆಳೆಯರುನ್ನತಿ ಕಂಡು ಕರುಬದಿರೆ ನಲಿವು;

ಹಗೆತನವ ಮಾಡದಿರುವುದರಿಂದ ತಣಿವು,
ಹಗೆತನವ ಮಾಡಿದರೆ ಹರಸುವುದು ನಲಿವು;
ತನ್ನ ಅಳಲನು ತಾನು ಮರೆಯುವುದೆ ತಣಿವು,
ಇನ್ನೊಬ್ಬರಳಲ ಪರಿಹರಿಸುವುದೆ ನಲಿವು;
ತನ್ನ ಮೇಲ್ಮೆಗೆ ತಾನು ದುಡಿಯುವುದು ನಲಿವು;
ಜನದ ಮೇಲ್ಮೆಗೆ ದುಡಿವುದದುವೆ ಗೆಲವು.

ಮೇ ೧೯೪೦]

## ನಿನ್ನನರಿಯುವ ತೆರನ ತೋರು

ನಿನ್ನರಿಯುವ ತೆರನ ತೋರು, ದೇವ,
ಮುನ್ನ ನಾನೆಸಗಿದಪರಾಧಗಳ ಮನ್ನಿಸುತ.

ಧನವಾಸೆ ಸುಖದಾಸೆ ಹುಸಿ ಹೆಸರ ಹಿರಿಯಾಸೆ
ಮನೆಮಾಡಿಕೊಂಡಿಹವು ಮನದಲೆನ್ನ;
ಕಾಮ ತೃಷೆ ಮದ ಮೋಹ – ದಿನದಿನಕೆ ಬೆಳೆಯುತಿವೆ
ಬಲಿತು ಹೆಬ್ಬೆಳಸಾಗಿ ಹೃದಯದಲ್ಲಿ.

ನಿದ್ದೆಯಾಹಾರಗಳ ತ್ಯಜಿಸಿ, ಮನವನು ನಿನ್ನ
ಧ್ಯಾನದಲಿ ನಿಲಿಸಿ, ತಪವೆಸಗಲಾರೆ;
ಇದ್ದ ಕಡೆ – ನಿಂತಲ್ಲಿ ಕುಳಿತಲ್ಲಿ, ಅನವರತ
ನಿನ್ನ ನಾಮಸ್ಮರಣೆ ಮಾಡಲಾರೆ.

ನನ್ನ ಹೃದಯದ ಕೊಳೆಯನೆಲ್ಲವನು ನೀ ತೊಳೆದು
ಅರಿಯಮೆಯ ಕತ್ತಲೆಯನೆಲ್ಲ ಕಳೆದು
ಆರ್ತನೆನ್ನಯ ಮೊರೆಯ ಕೇಳುತೆನ್ನೊಳು ಒಲಿದು
ನಿನ್ನ ನೆನಹಿನ ಕಡೆಗೆ ತನ್ನ ಮನ ಸೆಳೆದು

ಅಕ್ಟೋಬರ್ ೧೯೩೫]

## ದೇವ, ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ

ದೇವ, ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ ;
ಅದಕಿಂತ ಹಿರಿಭಾಗ್ಯವಾವುದೆನಗೆ.

ನನ್ನ ಎಳತನದಿಂದ ಬೆಳೆದುಬಂದರಳುತಿಹ
ನನ್ನ ಹಂಬಲ ಹೂವು ಬಾಡುತಿರಲು,
ದೇವ, ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ–
ಮರಳಿ ಸುಮವರಳುವುದು ಅದರೆಲರೊಳು.

ಬಡತನವು ಕಷ್ಟವೆಂದೆನ್ನ ಮನದಲಿ ಬಗೆದು
ಸಿರಿತನದ ಸುಖಕೆಳಸಿ ಕೊರಗುತಿರಲು,
ದೇವ, ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ–
ಅದಕಿಂತ ಹಿರಿ ಭಾಗ್ಯವಾವುದೆನಗೆ !

ದುಃಖದಲೆಗಳು ಎದ್ದು ನನ್ನ ಹೃದಯವ ಕೊಚ್ಚಿ
ಅಳಲಿನಾಳದಲಿ ನಾ ಮುಳುಗುತಿರಲು,
ದೇವ, ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ–
ಅದ ಪಿಡಿದು ದಡಕೆ ನಾ ಬರುವೆ ಕೊನೆಗೆ.

ಹೃದಯಾಂಧಕಾರದಲಿ ಮುಳುಗಿ ನಾ ದೆಸೆಗೆಟ್ಟು
ದಾರಿಕಾಣದೆ ತೊಳಲಿ ಬಳಲುತಿರಲು,
ದೇವ, ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ–
ಅದರ ಬೆಳಕನು ನಂಬಿ ಮುಂದೆ ನಡೆವೆ.

ಆಗಸ್ಟ್ ೧೯೩೧]

# ಬೇಡಿಕೆ

ಒಂದು ವರವ ನಿನ್ನೊಳಿಂದು,
　　ದೇವ, ಬೇಡುವೆ :
ಬೇಡಿ ಬೇಡಿ ಮೊರೆಯನಿಡುವೆ,
　　ಕೊನೆಗೆ ಕಾಡುವೆ,

ಹೊನ್ನರಾಶಿ ಸುರಿಯಲೆಂಬ
　　ಕೀಳು ಬಯಕೆಯಲ್ಲ;
ಆಯುರಾರೋಗ್ಯ ಹೆಚ್ಚ
　　ಲೆಂಬ ಆಸೆಯಲ್ಲ;
ಜಸದ ಬಯಕೆ ಬೇಡವೆನಗೆ,
　　ಜಸವು ಗರ್ವದಾಗರ ;
ಮೋಕ್ಷವಲ್ಲ, ಮೋಕ್ಷವಲ್ಲ,
　　ಮೋಕ್ಷ ಶೂನ್ಯ ಸಾಗರ !

ಒಂದೆ ವರವ ನಿನ್ನೊಳಿಂದು,
　　ದೇವ, ಬೇಡುವೆ ;
ನನ್ನನೊಂದು ಹಕ್ಕಿ ಮಾಡು,
　　ಹಾಡಿ ಹಾಡಿ ಹಾಡುವೆ.
ನೀಲ ಗಗನದಾಳದಲ್ಲಿ
　　ಮುಳುಗಿ ಏಳುವೆ ;
ಸಾಲು ಮುಗಿಲ ತೆರೆಯ ಮೇಲೆ
　　ಹಾರಿ ತೇಲುವೆ;
ಗಗನ ಸಾಮ್ರಾಜ್ಯವನ್ನು
　　ಅಂದು ಆಳುವೆ

ಒಮ್ಮೆಯೇ ಇಳಿವೆನಿಳೆಗೆ
        ಆಟವಾಡಲು,
        ಕುಣಿಯುವಾಟವಾಡಲು.
ಹಸುರು ಗರಿಕೆ ಹಾಸ ಮೇಲೆ
        ಅಲ್ಲಿ ಇಲ್ಲಿ ನೆಗೆವೆನು;
ಬೇಸರಾಗಲೊಡನೆ ಮತ್ತೆ
        ನಭಕೆ ಚಿಮ್ಮಿತೊಗೆವೆನು ;
ಮುಗಿಲ ತಂಡದೊಡನೆ ಕೂಡಿ
        ಹಿಡಿಯುವಾಟವಾಡುತ,
ಗಾಳಿಯೊಡನೆ ಸಮತೆ ಹೂಡಿ
        ಓಟವನ್ನೋಡುತ,
ಗಿಡದ ಸೆಳೆಯನೇರುತದಲ್ಲಿ
        ಉಯ್ಯಲಾಟವಾಡುತ,
ಆಡುತಾಡುತೆಲ್ಲೆಲ್ಲೂ
        ಹಾಡುತಿರುವೆನು–ಬಿಡದೆ
        ಹಾಡುತಿರುವೆನು.
ನನ್ನ ಹಾಡಿನಲ್ಲಿ ಮತ್ತೆ
        ವರವ ಬೇಡೆನು ;
ಅವರು ಇವರು ಮೆಚ್ಚಲೆಂದು
        ಹಾಡ ಹಾಡೆನು ;
ನನ್ನ ಹಾಡಿನಲ್ಲಿ ಅಂದು
        ಗೋಳುಕರೆಯೆನು;
ಆದರಂದು, ಎಂದೆಂದು
        ನಿನ್ನ ಮರೆಯೆನು.

ಎಲ್ಲಿ ಕುಳಿತರಲ್ಲಿ ನಾನು
        ಹಾಡುತಿರುವೆನು ;
ಹಾಡಿಗಾಗಿ ಹಾಡನೊಂದ
        ಹಾಡುತಿರುವೆನು;

ಹಾಡುತಿರುವ ಜಗದ ಜೊತೆಗೆ
ಹಾಡುತಿರುವೆನು.
ಹಕ್ಕಿಯಾಗಿ ಹಾಡಿ ನಿನ್ನ
ವೀಣೆಯಾಗುವೆ;
ಹಾಡಿ ಮಡಿದು, ಕೊನೆಗೆ ನಿನ್ನ
ವಾಣಿಯಾಗುವೆ.

# ಅನುಬಂಧ

ಕೆಲವು ಗೀತೆಗಳು : ಸ್ವರಪ್ರಸ್ತಾರ ಸಹಿತ

## ಚಿಹ್ನೆಗಳ ವಿವರಣೆ

ಒಂದು ಸ್ವರದ ಅಡಿಯಲ್ಲಿ ಚುಕ್ಕೆ ಇದ್ದರೆ ಅದು ಮಂದ್ರ ಸ್ಥಾಯಿಯನ್ನೂ, ಅದರ ತಲೆಯ ಮೇಲೆ ಚುಕ್ಕೆಯಿದ್ದರೆ ಅದು ತಾರಸ್ಥಾಯಿಯನ್ನೂ ಸೂಚಿಸುತ್ತವೆ.

ಉದಾ : ಧ–ಮಂದ್ರಸ್ಥಾಯಿ
ರಿ–ತಾರಸ್ಥಾಯಿ

ಎರಡನೆಯ ಮತ್ತು ಮೂರನೆಯ ಕಾಲಗಳಲ್ಲಿ ನುಡಿಯಬೇಕಾದ ಸ್ವರಗಳಿಗೆ ಅವುಗಳ ಅಡಿಯಲ್ಲಿ ಕ್ರಮವಾಗಿ ಒಂದು ಮತ್ತು ಎರಡು ಅಡ್ಡಗೀಟುಗಳನ್ನು ಹಾಕಿರುತ್ತದೆ.

ಉದಾ : ಸ – ಮೊದಲನೆಯ ಕಾಲ ಎಂದರೆ ಒಂದು ಮಾತ್ರಾಕಾಲ
ಸರಿ– ಎರಡನೆಯ ಕಾಲ ಆದರೂ ಒಂದು ಮಾತ್ರಕಾಲ
ರಿಸರೀ– ಮೂರನೆಯ ಕಾಲ ಆದರೂ ಒಂದು ಮಾತ್ರಾಕಾಲ

ಒಂದು ಸಂಪೂರ್ಣ ತಾಳವನ್ನು ಎಂದರೆ ಒಂದು ಪೂರ್ಣ ಆವರ್ತವನ್ನು ತೋರಿಸಲು ಮೊದಲಲ್ಲಿ ಮತ್ತು ಕೊನೆಯಲ್ಲಿ '||' ಈ ರೀತಿಯ ಎರಡು ಉದ್ದ ಗೀಟುಗಳನ್ನು ಹಾಕಿರುತ್ತದೆ. ಆವರ್ತದಲ್ಲಿ ಒಂದು ಲಘು ಅಥವಾ ಒಂದು ದ್ರುತ ಆದಮೇಲೆ '|' ಈ ರೀತಿಯ ಒಂದು ಉದ್ದ ಗೀಟನ್ನು ಹಾಕಿರುತ್ತದೆ.

ಅನುಪಲ್ಲವಿ ಮತ್ತು ಚರಣಗಳನ್ನು ಹಾಡಿದ ಮೇಲೆ, ಪಲ್ಲವಿಯಲ್ಲಿರುವ ಸಂಗತಿಗಳಲ್ಲಿ '♣' ಗುರುತು ಹಾಕಿರುವ ಸಂಗತಿಯನ್ನು ಹಾಡಿಕೊಳ್ಳಬೇಕು.

'*' ಈ ಗುರುತು ಅದರ ಹಿಂದೆ ಇರುವಷ್ಟು ಮಾತ್ರಾಕಾಲವನ್ನು ಘಾತದಿಂದ ಬಿಟ್ಟು ಹಾಬೇಕೆಂಬುದನ್ನು ಸೂಚಿಸುವುದು.

'⌒' ಈ ಗುರುತು ಹಿಂದಿನ ಸ್ವರದಿಂದ ಮುಂದಿನ ಸ್ವರಕ್ಕೆ ಸಂಬಂಧವನ್ನು ಸೂಚಿಸುವುದು. ಕಾಲಪ್ರಮಾಣದ ಅಂಕಣದ (ಬಾರಿನ) ಒಳಗೆ '।' ಈ ಗುರುತು ಲಘುವನ್ನೂ 'o' ಈ ಗುರುತು ದ್ರುತವನ್ನೂ ತೋರಿಸುತ್ತವೆ.

ಸ – ಷಡ್ಜ
ರಿ$_1$–ಶುದ್ಧ ಋಷಭ
ರಿ$_2$–ಚತುಶ್ರುತಿ ಋಷಭ
ಗ$_2$–ಸಾಧಾರಣ ಗಾಂಧಾರ
ಗ$_3$–ಅಂತರ ಗಾಂಧಾರ
ಮ$_1$–ಶುದ್ಧಮಧ್ಯಮ
ಮ$_2$–ಪ್ರತಿಮಧ್ಯಮ
ಪ–ಪಂಚಮ
ಧ$_1$–ಶುದ್ಧ ಧೈವತ
ಧ$_2$–ಚತುಶ್ರುತಿ ಧೈವತ
ನಿ$_2$–ಕೈಶಿಕಿ ನಿಷಾದ
ನಿ$_3$–ಕಾಕಲಿ ನಿಷಾದ

**ಸೂಚನೆ :** ಪ್ರತಿ ಗೀತದಲ್ಲಿಯೂ ಸ್ವರಪ್ರಸ್ತಾರ ಹಾಕಿರುವ ಚರಣದಂತೆಯೇ ಉಳಿದ ಚರಣಗಳನ್ನೂ ಹಾಡಿಕೊಳ್ಳುವುದು.

## ಗೀತ ೧ (ನನ್ನ ಮನೆ)

ರಾಗ –ಕಲ್ಯಾಣಿ
ತಾಳ – ಆದಿ

ಆ–ಸರಿ೨ಗ೩ಮಪಧ೨ನಿ೩ಸ
ಅ–ಸನಿಧಪಮಗರಿಸ

| । | ೦ | ೦ |
|---|---|---|

೯ * ಸಾೀಸಸಾ ಸಸನಿಧ ನಿಪ | ೯ ಪ ಗ ಮ | ಪಾ ಮ ಪ ಧಾ
ಈ ಕ ರು ಸಾ . . ಡಿದು | . ನ ನ್ನ ಮ | ನೆ . . . .

ಧಾ * ಪಮಗಾ ಪಮ ಗರಿ ಗಮಧನಿ | ರಿನಿ ಧಪಮಗರೀ | ಸಾಮಪಧನಿ ‖
ನ . ನ್ನ ಮ . ನೆ. ಇ.ದು. | . . ನ. ನ್ನ. ಮ | ನೆ . . . . ‖

ಸರಿ * ‖ ಪ

೯ * ಪಮಪಾ ಪಧನೀ ಸನಿ ಧಪಪಾ | ೯ ಗ ಪ ಮ | ಪ ಧ ಪಾ ‖
ನೀ . ಲ ಗ . ಗ ನ . ದ . . | . ಹಂದ ರ | ಹೊ ದೆ ದ ‖

೯ * ಗ ಗ ಗ ಗ ನಿ ೯ ಧ ಪ ಮ ಗಾ | ರಿಸರೀ ಪಮ | ಗರಿರಿಸ ಸಾ ‖
ಬಾಂದಳ ದಂ . . . ಚ . ನು | ಬ.ಳ. ಸಿರು | ವ. . . . ‖

೯ * ಧನಿಸಾ ಸನಿಧಾ ಸನಿಧಪ | ಮಗ ಮಪಾಧನೀ | ಸನಿಗರಿಸಾ ‖
ಅ . ತ್ತ ಇ . . ತ್ತ . ಮು. | . . ನ್ನೀ. ರಂ. | ಗ.ಣ.ದ ‖

೯ * ರಿರಿರಿನಿರೀ ಪಮಗರಿಸಾ | ನಿಧಗರಿ ಸಾೀನಿ ಧನೀಪ ಮಪಧನಿ ‖
ಸುತ್ತಮು.. ತ್ತ . ಕು. ಡು | ಮ.ಲೆ. ಸಾ . . ಲ್ಗೋ.. ಡೆ. ಯ. ‖

ಸಂ * ‖ ♣
.. ‖ ಚ

## ಗೀತ ೨ (ಬಾ ಬಾ ಚಂದಿರ)

ರಾಗ – ಮೋಹನ ಆ–ಸರಿ$_2$ಗ$_3$ಪಧ$_2$ಸ

ತಾಳ – ಆದಿ ಅ–ಸಧಪಗರಿಸ

| । | ೦ | ೦ |
|---|---|---|
| ಗಾ ॰ ಪಾ ಧ ಪ ಧ | ಸಾ ॰ ॰ | ಸಾ ॰ ॰ |
| ಬಾ . . ಬಾ ಚಂ. ದಿ | ರ . . . | . . . . |
| ಧ ಪ ಧ ರಿ ಸ ಧ ಪ ಧ | ಸಾ ಧ ಪ ಧಾ | ಪಗಧಪ ಗರಿಸರಿ ‖ ಪ |
| ಮ ಧು ರ ಮಧು ರಮನ | ಮೋಹ. ನ | ಸುಂ... ದ.ರ. |
| ಗ ಗ ರಿ ಗ ರಿ ಸ ಧ ಧ | ರಿ ಸ ಸಾ ಧ ಪ | ಧಾ ಧಾ |
| ಮುಗಿಲಿ ನೆ ಡ ರು ಗ ಳ | ಮೆ . . ಟ್ಟು ತ | ಬಾ ಬಾ |
| ಸಾ ಸ ರಿ ಸ ಧ ಪ ಧ | ಗಾ ಧ ಪ | ಗ ರಿ ಸಾ |
| ಪ್ರೇಮ ಚಂ . ದ್ರಿ ಕೆಯ | ಬೀರು ತ | ಬಾ. ಬಾ |
| ಗಾ ಗ ಧ ಪ ಗ ಪ ಧ | ಸ ಸ ಸ ಧ | ರಿ ಸ ರೀ |
| ಎ ನ್ನ ಮನೋ. ಜ ಲ | ನಿ ಧಿ ಉ. | ಕ್ಕಿ ಸುತ. |
| ಸ ಧ ಧ ಗ ರಿ ಸ ಪ ಧ | ರಿ ಸ ಧ ಪ ಧಾ | ಪಗಧಪ ಗರಿಸರಿ |
| ಎದೆ ಯ ಕುಮುದವ . | ನ್ನ ರ ಳಿ. ಸು | ತ . . . . . ‖ ಚ |

## ಗೀತ ೩ (ಸುಧೆಸುರಿಯುವ ತಿಂಗಳ ಕಳೆ)

ರಾಗ –ಹಿಂದೋಳ ಆ–ಸಗ$_3$ಮ$_1$ಪಧ$_1$ನಿ$_3$ಸ
ತಾಳ – ರೂಪಕ ಅ–ಸನಿಧಪಮಗರಿಸ

| ೦ | । | ೦ | । |
|---|---|---|---|

‖ಸಸ | ನಿ ಧ ಸ ನಿ ಧ ಮ ‖ ಗ ಸ ‖ ಮ ಗ ಮ ಮ ‖ ‖
‖ಸು ಧೆ | ಸು . ರಿ. ಯು ವ ‖ ತಿಂ . ‖ ಗ ಳ ಕ ಳೆ ‖ ‖

‖ಗಮಧಧ ಮಗಮಾ ಮಗಸನಿ ಸಾಮಗ ಮಾಮಾ ‖
‖ನೀ. . . ಲಿ . ಯ ತಿ . ಳಿ ಬಾ . . ನು . . ‖ಪ

‖ನಿ ಧ ಮ ಧ ಗ ಮ ಸ ನಿ ಧ ಮ ಗಸಮಗ ಸನಿಸಾ ‖
‖ಕೆ ಳ ಗಿ ದೊ ನೆ ರೆ ಮ. ಲ .ಗಿ . ಹೆ . ಇ . ಳೆ ‖

‖ಮ ಗ ಧ ಮ ನಿ ಧ ಸ ನಿ ಗ ಗ ಸಾ ೯ ನಿ ಧ ಮ ಧ ನಿ‖
‖ಒ . ಬ್ಬ ನೆ ಸು ಖಿ ನಾ . . . ನು . . . . . . . ಅ‖

‖ಗ ಮ ನಿ ಧ ಮ ಗ ಸ ನಿ ಸ ಧ ನಿ ನಿ ಸಾ ‖
‖ತೀ . . . ಡು ತ ಲಿ ದೆ ತಂ . ಗಾ . ಳಿ ‖

‖ನಿ ಸ ಗ ಸ ನಿಧನೀ ಸನಿಗಸ ಮಗಧಧ ಮಾಮಾ ‖
‖ಮೌ . . . ನ . ವು ಹ . . ಬ್ಬು . ತಿ. ದೆ . . . ‖

‖ಗಮನೀ೯ ನಿಧನೀ ಸಾಮಗ ಸ ನಿ ಗ ಗ ಸಾ ನಿಧನೀ‖
‖ಹಾ . . ಡು . ತ ಬ ಲು. ಮು . ದ . ತಾ ಳಿ . . .‖

‖ಗಮಸನಿ ನಿಧಮಾ ಗಸಮಗ ಧಮನಿಧ ನಿಸಾನಿ ಧಮಚನಿ‖
‖ಎ . . . ನ್ನೆ . ದೆ ಯು . . ಬ್ಬು . ತಿ . ದೆ . . . . .‖

## ಗೀತ ೪ (ತಿರುಕಿಯ ಮೊರೆ)

ರಾಗ –ವಸಂತ ಆ–ಸಮ$_{೧}$ಗ$_{೩}$ಮ$_{೧}$ಧ$_{೨}$ನಿ$_{೩}$ಸ

ತಾಳ – ಆದಿ ಅ–ಸನಿಧಮಗರಿ$_{೧}$ಸ

| । | ೦ | ೦ | |
|---|---|---|---|
| ಸಾ ಸ ಮ ಗ ಮ ಧ ನಿ | ಸಾ ॰ ॰ | ಸ ನಿ ಸ ರಿ | |
| ಹುಟ್ಟು ತಿ ರು ಕಿ ನಾ . | ನು . . | ತಿ ರು ಪೆ ಯೆ | |
| ಸಾ ನಿ ಧಾ ಮ ಗ ಮ | ಗಾ ॰ ॰ | ಗ ರಿ ಸ ನಿ | ಪ |
| ಹೊಟ್ಟೆ ಪಾ ಡು ನ ನ | ಗೆ . . . | . . . . | |
| ಧಾ ಧ ನಿ ಧ ಮ ಗ ಮ | ಧ ನಿ ಸಾ | ಸ ನಿ ಸ ರಿ | |
| ಎ ತ್ತ ನೋ . ಡಿ ದ ರು | ಜ ನ ರು | . . ತಾ ವ್ | |
| ಸ ನಿ ಧ ಸಾ ನಿ ಧ ನಿ | ಸ ನಿ ಧ ಮ | ಧಾ ಧಾ | |
| ಮ . ತ್ತ ರಾ ಗಿ ನ ಲಿ | ಯುವರು . | . . . . | |
| ಮಾ ಮ ಧಾ ಧ ನಿ ನಿ | ಸ ರಿ ಸ ನಿ ಸ ಸ | ಮಾ ಮಾ | |
| ತು ತ್ತು ಕೂಳು ಧ ನಿ | ಯ . ದು. ನ ನ | ಗೆ . . . | |
| ಗ ರಿ ॰ ಸ ಸ ನಿ ಧ ನಿ | ಸ ನಿ ಧ ಮ | ಗ ರಿ ಸ ನಿ | |
| ಗೊತ್ತು ಗುರಿಯ ಕಾ . | ಣೆ . . . | . . . . | ಚ |

| । | ೦ | ೦ |
|---|---|---|
| ಮಾ ಗ ಗ ಮಾ ಮಾ | ಧ ಮ ಧ ನಿ | ಸಾ ಸಾ |
| ಓ ಮ ರ ವೇ . . | ಓ . ತಾ . | ಯೇ . . |
| ರಿ ॰ ಸ ನಿ ಧ ಮ ಗ ಮ | ಗಾ ॰ ॰ | ಗಾ ॰ ॰ |
| ತ ೦ ಪ ನೀ . ವ ತ ವ | ರೇ . . | . . . . |
| ಧಾ ಧ ನಿ ಧ ಮ ಗ ಮ | ಧ ನಿ ಸ ನಿ | ಸಾ ಸಾ |
| ಹ ಕ್ಕಿ ಗ ಳೇ . ಒ ಡ | ಹು . ಟ್ಟು ಗ | ಳೇ . . |
| ಸಾ ನಿ ಧ ಸ ನಿ ಧ ನಿ | ಧಾ ॰ ॰ | ಧಾ ॰ ॰ |
| ಹಾ ಡ ಕ ಲಿ ಸಿ ದ ವ | ರೇ . . | . . . . |
| ಮ ಗ ಮ ಧಾ ಧ ನಿ ನಿ | ಸಾ ॰ ॰ | ಮಾಮಮ |
| ಹೊ ರ ಗು ಮಾ ಡ ಬೇ. | ಡಿ . . . | ಮುಂದೆಯು |
| ಗ ರಿ ಸ ನಿ ಧ ಮ ಧ ನಿ | ಸ ನಿ ಧ ಮ | ಗ ರಿ ಸ ನಿ |
| ನಿ . ಮ್ಮ ವ ಳ ನು ಕಾ . | ಪಾ . . . | ಡಿ . . . ಚ |

## ಗೀತ ೫ (ದೇವ ನೀ ಬಳಿಯಲಿಹೆಯೆಂಬರಿವೆ ಸಾಕೆನಗೆ)

ರಾಗ – ಶ್ರೀರಂಜಿನಿ ಆ–ಸರಿ₃ಗ₂ಮ₁ಧ₂ನಿ₂ಸ

ತಾಳ – ತ್ರಿಶ್ರರೂಪಕ ಅ–ಸನಿಧಮಗರಿಸ

| | | | | | | | |
|---|---|---|---|---|---|---|---|
| ೦ | । | ೦ | । | ೦ | । | ೦ | । |

‖ ಧಾ | ಧನೀ | ಸನಿ | ರಿಸನಿಧಮಾ ‖ ಗಾ | ಮಧಮ ‖ ಗಾ | ಗರಿರೀ ಸ ‖
‖ ದೇ | ವನೀ | ಬಳಿ | ಯ.ಲಿ. ಹೆ ‖ ಯೆಂ | ಬರಿವೆ ‖ ಸಾ | ಕೆ . ನ ಗೆ ‖

‖ ೯ * ರಿ ಗ | ಮಧಧ ‖ ನಿ ನಿ | ಸಾಗರಿಸಾ ‖ ನಿ ನಿ | ಸಾರಿಸ ನಿಧಮಾ ‖
‖ ಅದ | ಕಿಂ. ತ ‖ ಹಿರಿ | ಭಾ .. ಗ್ಯ ‖ ವಾ . | ವು . . ದೆ . ನ ‖

‖ ಧ ಮ ಗರಿ | ಸಾರಿಗಮಾ ‖
‖ ಗೆ . . . . | . . . . ‖ ಪ

‖ ಮಾ | ಮ ಗ ರಿ | ಸ ರಿ | ಗಾಮ ‖ ರಿಗಮಗ | ಮಧಾ ‖ ನಿನಿ | ಸನಿಗರಿಸಾ ‖
‖ ನ | ನ್ನ ಎ ಳ | ತ ನ | ದಿಂದ ‖ ಬೆ. ಳೆ. | ದುಬಂ ‖ ದರ | ಳು.ತಿ.ಹ. ‖

‖ ನಿಧ | ನಿಸಾ | ರಿಗ | ಗರಿರೀಸಾ ‖ ರಿಸನಿಧ | ಮಾಮಧಗಾ ‖ ರಿಗ | ಗರಿರೀಸಾ ‖
‖ ನ . | ನ್ನಿಹಂ | ಬಲ | ಹೂ. .ವು ‖ ಬಾ. . . | ಡು ತಿ. ರ ‖ ಲು. | . . . . ‖

‖ ಧಾ | ಧನಿಧಧಮ ‖ ಧನಿ | ಸನಿರೀಸ ‖ ರಿಗ | ಮಮರಿ ‖ ಗರಿಸಾ | ಸನಿಗರಿಸಾ ‖
‖ ದೇ | ವನೀ . . . ‖ ಬಳಿ | ಯ .ಲಿಹೆ ‖ ಎಂ. | ಬರಿವೆ ‖ ಸಾ.. | ಕೆ. ನ. ಗೆ ‖

‖ ಮ ಗ ರಿ ಸ | ನಿ ಸ ನಿಧ ಮಾ ‖ ನಿಧಸನಿ | ರಿ ಸ ಗ ರಿ ಸಾ ‖
‖ ಮ . ರ . | ಳಿ . ಸು . ಮ ‖ ವ . ರ. | ಳು . ವು . ದು. ‖

‖ ಸಾ | ನಿ ಸ ನಿ ಧ ಮಾ ‖ ಗ ರಿ ಸ ನಿ | ಸಾ ರಿ ಗ ಮಾ ‖
‖ ಆ | ಸು . ಧೆ . ಯ ‖ ಸ . ವಿ . | . ದು . . ‖ ೧

# ಆ ಚಿತ್ರಗಳು
# ಮತ್ತು
# ಇತರ ಕಥನ ಕವನಗಳು

(೧೯೪೬)

# ಬಿನ್ನಹ

'ಹಕ್ಕಿ ಹಾಡು' ಎಂಬ ನನ್ನ ಭಾವಗೀತಗಳ ಸಂಕಲನವನ್ನು ಪ್ರಕಟಿಸುವಂದು, 'ಕೆಲವು ಪ್ರಣಯಗೀತಗಳನ್ನೂ ಕಥನ ಕವನಗಳನ್ನೂ ಬೇರೆ ಎರಡು ಸಂಕಲನಗಳಿಗಾಗಿ ಮೀಸಲುಳಿಸಿದ್ದೇನೆ' ಎಂದು ಬಿನ್ನವಿಸಿಕೊಂಡಿದ್ದೆ. ನನ್ನ ಸಂಕಲ್ಪ ಈಡೇರಲು ಮತ್ತೆ ಎರಡು ವರ್ಷ ಹಿಡಿಯಿತು. ಈಗ, ಈ ಕಥನ ಕವನಗಳ ಸಂಕಲನವನ್ನು ಸಹೃದಯರ ಮುಂದೆ ಇಡಲು ಸಂತೋಷಿಸುತ್ತಿದ್ದೇನೆ; 'ರಾಗ' ಎಂಬ ಪ್ರಣಯಗೀತಗಳ ಸಂಕಲನವೂ ಸದ್ಯದಲ್ಲಿಯೇ ಹೊರಬೀಳಲಿದೆ.

ನನ್ನ 'ಹಕ್ಕಿ ಹಾಡು' ಎಂಬ ಸಂಕಲನವನ್ನು ಸಹೃದಯರಾದ ಕನ್ನಡಿಗರು ತುಂಬ ಪ್ರೀತ್ಯಾದರಗಳಿಂದ ಬರಮಾಡಿಕೊಂಡರು; ನಾನು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಪ್ರೋತ್ಸಾಹ ನನಗೆ ದೊರೆಯಿತು; ಇದಕ್ಕಾಗಿ ಕನ್ನಡಿಗರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಸಂಕಲನವೂ ಸಹೃದಯರೆಲ್ಲರ ಪುರಸ್ಕಾರಕ್ಕೆ ಪಾತ್ರವಾದೀತೆಂದು ನಂಬಿದ್ದೇನೆ.

'ಆ ಚಿತ್ರಗಳು' ಎಂಬ ನನ್ನ ಕವನಕ್ಕೆ, ದಿವಂಗತ ಶ್ರೀಯವರು ಏರ್ಪಡಿಸಿದ, ಮೈಸೂರು ವಿಶ್ವವಿದ್ಯಾನಿಲಯದ 'ರಜತೋತ್ಸವ ಸ್ವರ್ಣಪದಕ'ವು (೧೯೩೩ರಲ್ಲಿ) ಲಭಿಸಿತು. 'ಶ್ರೀ'ಯವರ ಹರಕೆಯ ಫಲವಾದ ಈ ಸಂಕಲವನ್ನೂ ಅವರಿಗೆ ಸಮರ್ಪಿಸಬೇಕೆಂಬ ಬಯಕೆಯಿತ್ತು; ಆದರೆ ದೈವ ಬೇರೆ ಬಗೆಯಿತು; ಇದನ್ನು ಅವರ ನೆನಪಿಗೆ ಮುಡಿಪಾಗಿರಿಸಿ ಅಷ್ಟರಿಂದಲೇ ತೃಪ್ತಿಹೊಂದುತ್ತಿದ್ದೇನೆ.

ನನ್ನ ಗುರುಗಳಾದ ಶ್ರೀ.ತೀ.ನಂ. ಶ್ರೀಕಂಠಯ್ಯನವರು ಈ ಗ್ರಂಥದ ಪ್ರಕಾಶನ ಕಾರ್ಯದಲ್ಲಿ ತುಂಬ ನೆರವಾಗಿದ್ದಾರೆ; ಅದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಎಂದಿನಂತೆ ಗ್ರಂಥವನ್ನು ಅಂದವಾಗಿ ಅಚ್ಚುಮಾಡಿಕೊಟ್ಟಿರುವ ಪರಿಷತ್ತಿನ ಅಚ್ಚುಕೂಟದ ಅಧಿಕಾರಿಗಳಿಗೂ ಕೆಲಸಗಾರರಿಗೂ ನನ್ನ ವಂದನೆಗಳು.

೨೦-೭-೧೯೪೬ ರಾಘವ
ಬೆಂಗಳೂರು

# ಗಂಡನ ಪೂಜೆ

ಭೀಮನಮಾಸೆ ಹಬ್ಬ–
ಒಳ್ಳೆಯ ಗಂಡ ಲಭಿಸಲಿ
ಮುಗುದೆಯಲರೆಲ್ಲ ಮುದದಲಿ
ವ್ರತವ ಗೈಯುವರಂದದಿ.

ಪೂಜೆಯ ಮಾಳ್ಪಳೆನ್ನುತ
...ಳಿಗೆ ಬಲು ಸೊಗಸುವಂದದಿ
ವಲ್ಲಿಯ ಬರೆದು, ಹೊಸ ಹೊಸ
ಹಸೆಯುನಿಡುವಳು ಶಾರದೆ.

ತಂಗಿಯ ಪೂಜೆಗೋಸುಗ
ಹಣ್ಣು ಹಂಪಲು ಹೂವು ಮೊದಲಾ–
ನ್ನುಳಿದ ಸಾಮಗ್ರಿಯೆಲ್ಲವ
ಅಣಿಯ ಮಾಡುತಲಿರುವಳು.

ಜಡೆಯ ಹೆಣೆಯುತ, ಮುಡಿಸಿ ಹೂವನು,
ಮುಡಿದು ಗಲ್ಲವ ತನ್ನ ತಂಗಿಯ,
..ಡನೆ ಉಕ್ಕಿದ ಅಳಲ ನುಂಗುತ
ನುಡಿದಳೀ ಪರಿ ತಂಗಿಗೆ:

ನನ್ನ ಮುದ್ದಿನ ಗಿಣಿಯೆ, ಗೌರಿ,
ಚಿನ್ನದಂತಹ ಗಂಡನಾಗಲಿ !
ನನ್ನ ದುರ್ಗತಿಯನ್ನು ದೇವರು
ನಿನಗೆ ಕೊಡದಿರಲೆಂದಿಗೂ'–

ಎಂದು ಗೌರಿಯ ಕುರುಳ ತಿದ್ದುತ
ಬಂದ ಕಂಬನಿಯೆರಡ ಸೆರಗಿನ
ಒಂದು ಕೊನೆಯಿಂದೊರಸಿ, ಕೊರಗಿನ
ಕುರುಹ ತೋರಿಸದಿದ್ದಳು.

ತನ್ನ ಪಟ್ಟೆಯ ಸೀರೆಯುಡಿಸಿ,
ಹೊನ್ನಿನೊಡವೆಯನೆಲ್ಲ ತೊಡಿಸಿ,
ಖಿನ್ನಳಾಗಿ ನಗೆಯ ನಟಿಸುತ
ಮುತ್ತು ಕೊಟ್ಟಳು ತಂಗಿಗೆ,

ಏನನರಿಯದ ಬಾಲೆ ಗೌರಿ
ಏನು ಬಲ್ಲಳು ಇವಳ ದುಗುಡವ ?
ತಾನು ನಗುನಗುತಾಡುತಿದ್ದಳು–
ಪೂಜೆಗೈಯುವ ಸಡಗರ.

ಅಳಲ ನುಂಗಿದೊಡೇನು ಶಾರದೆ?
ಹಳೆಯ ಬಾಳಿನ ನೆನಪು ನುಸುಳುತ
ಒಳಗೆ ಹೃದಯವನಿರಿಯುತಾವಗ
ನೆಲಸಿ ನಿಂತಿದೆ ಮನದಲಿ.

* * *

ತಂದೆಮಾತನು ಮೀರಲಾರದೆ
ಬಂದುದೆನ್ನಯ ಭಾಗ್ಯವೆನ್ನುತ
ಒಂದೆ ಮನದಲಿ ಮದುವೆಯಾದಳು
ತನಗೆ ನೋಡಿದ ವರನನು.

ಮದುವೆಯೆನ್ನುವ ಮಾತು ಮುಗಿದುದು :
ಮದುವೆಯಲ್ಲಿಹ ಸೊಗವ ಸವಿಯುವ

ಬದುಕು ಬಾಲೆಯ ಪಾಲಿಗಿಲ್ಲದೆ
ಬರಿಯ ಬಯಕೆಯದಾಯಿತು.

ವರನಿಗಿದ್ದರು ಸಿರಿಯ ಸಂಪದ
ಕೊರತೆ ಸೌಂದರ್ಯದಲಿ, ಬಲದಲಿ :
ಎರಡನೆಯ ವರ : ಇವುಗಳೆಲ್ಲಿಯೊ
ಹಣದ ಸುಳಿವಿನ ಹೊಳಹಲಿ.

ತೀರಲಿಲ್ಲವು ವರುಷ; ಆಗಲೆ
ಶಾರದೆಯ ಪತಿ ಪರವನೈದಿದ :
ಕ್ರೂರ ವಿಧಿ ಶಾರದೆಯ ಬಾಳಿನ
ಸೊಗದ ಹನಿಯನು ಹೀರಿತು.

ಚೆಲುವೆ ಶಾರದೆ; ಬಾಲೆ ಇನ್ನೂ;
ಉಳಿಸಿಹನು ಪತಿಯತುಳ ಸಿರಿಯ;
ಅಳಲ ಹೊಳೆಯನು ಹರಿಸಲೇತಕೆ
ವ್ಯರ್ಥದಿಂದಲಿ ಶಾರದೆ ?

ಹಿರಿಯ ಸಿರಿಯನು ಕಳೆದುಕೊಂಡಳು:
ಮರಳಿ ಮದುವೆಯೆ ಮಾತು, ಕನಸು;
ಬರಿಯ ಸಿರಿಯೊಳು ಪರಮಪ್ರೇಮವ
ಪಡೆಯಬಲ್ಲಳೆ ಶಾರದೆ?

ತನ್ನ ತಂಗಿಯು ಮಾಡುವಂದದಿ
ಮುನ್ನ ವ್ರತವನು ಮಾಡಲಿಲ್ಲವೆ ?
ಕಣ್ಣು ಕಾಣದೆ ವಿಧಿಗೆ, ಬಾಲೆಯ
ಬಾಳ ಬೆಳಕನು ನಂದಿಸೆ ?

ಐದೆತನವದು ನಿತ್ಯವಾಗಲು
ಗೈದಳಂದಾ ದಿವ್ಯ ವ್ರತವನು;
ಒಯ್ದನೇತಕೆ ವಿಧಿಯು ಗಂಡನ,
ಇವಳ ಜೀವದ ಜೀವವ?

ಹಿಂದೆ ಬಾಲ್ಯದಿ, ಪೂಜೆ ಕಾಲದಿ,
ಮುಂದುಗಾಣದ ಮುಗುದೆ ಮನದಲಿ
ಸುಂದರಾಕಾರದಲಿ ಮೆರೆಯುವ
ಪುಟ್ಟ ಗಂಡನ ಕಂಡಳು.

ಎಲ್ಲಿ ಆ ಕನಸೆಲ್ಲಿ ಬಾಲೆಯ
ಹಲ್ಲು ಉದುರಿದ ಮುದಿಯ ಗಂಡ !
'ಸುಳ್ಳು ವ್ರತ' ಎಂದೆನದೆ ಅವನನೆ
ಮನದಿ ಪೂಜಿಸಿ ಒಲಿದಳು.

ಒಡನೆ ಗಂಡನು ತೀರಿಹೋದನು.–
ಪಡೆಯಬಲ್ಲಳೆ ಮರಳಿ ಗಂಡನ
ಬಿಡದೆ ವ್ರತಗಳನೆಲ್ಲ ಮಾಡುತ
ಭಕ್ತಿಯೆಲ್ಲವ ಬಸಿಯುತ ?

ಅಂಧರಲ್ಲವೆ ತಂದೆ ತಾಯ್ಗಳು ?
ಇಂದು ಮಗಳನು ಕ್ರೂರ ಬಂಧನ–
ದಿಂದ ಧೈರ್ಯದಿ ಬಿಡಿಸಲೊಲ್ಲದೆ
ಜನಕೆ ಹೆದರುತಲಿರುವರು.

ಅವಳ ಬಾಳಿನ ಬರಿಯ ಬಟ್ಟಲ–
ನವರು ವಧುವಿಂ ಮತ್ತೆ ತುಂಬದೆ
ಬುವಿಯ ಬೆದರಿಕೆಗಳಿಗೆ ತಮ್ಮ
ಬೆನ್ನುಕೊಟ್ಟಹರಚ್ಚರಿ !

ಏನಿದೊಂದನು ಅರಿಯಲಾರದೆ
ಏನನೊಂದನು ಬಾಲೆ ಬಯಸಳು:
ತಾನು ಜನ್ಮಾಂತರದಿ ಮಾಡಿದ
ಪಾಪಫಲವೆಂದೆನುವಳು !

'ಮುಂದೆ ಪರದಲಿ ಪತಿಯ ಸೇರುವೆ'–
ನೆಂದು ಕೈಕೊಂಡಿಹಳು ಮನದಲಿ
ಹಿಂದೆ ನಡಸಿದ ಹಿರಿಯ ವ್ರತವನು–
ಪತಿಯ ಪಡೆಯುವ ಪೂಜೆಯ !

೧೯೩೧]

## ಪೂಜಾರಿ

ಗುಡಿಯೊಳಗೆ ಗಡಿಬಿಡಿ: ಜನಗಳೆಲ್ಲರು ಶಿವನ
ಮಂಗಳಾರತಿಯೆಂದು ಹಣ್ಣು ಕಾಯ್ಗಳ ತಂದು
ದೇವದರ್ಶನಕಾಗಿ ಕಾದುಕೊಂಡಿಹರು.
ಒಳಗಿನಿಂದೈತಂದು ಪೂಜಾರಿ,–"ಹೊತ್ತಾಯ್ತು,
ಹಣ್ಣುಕಾಯ್ಗಳ ಕೊಡಿರಿ" ಎಂದೆಲ್ಲವನು ಕೊಂಡು,
ತೆಂಗಾಯ್ಗಳನ್ನೊಡೆದು, ಹಣ್ಣುಗಳ ತುದಿ ಮುರಿದು,
ಶಿವಲಿಂಗದೆದುರಿನಲಿ ನೈವೇದ್ಯ ಮಾಡಿದನು–
ಕಣ್ಣುಬಾಯಿಲ್ಲದಾ ಕಲ್ಲುರೂವಿನ ಶಿವನು
ಅದನೆಲ್ಲ ತಿನ್ನುವನೆ !–ಪೂಜಾರಿಗಿದು ಗೊತ್ತು !
ಒಡನೆಯೇ ಕರ್ಪೂರದಾರತಿಯ ಹಿಡಿದೆತ್ತಿ,
ತುಟಿಯು ಪಿಟಗುಟ್ಟುತಿರೆ, ಮೊಳಗಿ ಘಂಟಾಘೋಷ
ಮೆಲ್ಲನುಸಿರುತ್ತಿರ್ದ ಮಂತ್ರಘೋಷವ ಮರೆಸಿ
ಮೂಲೆಮೂಲೆಯ ತಾಗಿ ನೂರ್ಮಡಿಸಿ ಕೇಳುತ್ತ

ಎಲ್ಲೆಡೆಯ ತುಂಬುತಿರೆ–"ಹೊತ್ತಾಯ್ತು, ಹೊತ್ತಾಯ್ತು,
ಬೇಗ ದರ್ಶನಮಾಡಿ" ಎಂದು ಕಂಠನೆತ್ತಿ
ಕೂಗಿದನು ; ಜನರೆಲ್ಲ ಕಣ್ಮುಚ್ಚಿ ಕೈಮುಗಿಯೆ–
ಒಡನೆಯೇ ಘಂಟೆಯನು ಕೆಳಗಿರಿಸಿ, ಆರತಿಯ
ತಟ್ಟೆಯನು ಹಿಡಿದು ಹೊರಗಡೆ ಬಂದು ಎಲ್ಲರಿಗೆ
ತೋರಿದನು; ಕಾಸುಗಳ ಸುರಿಮಳೆಯೆ ಸುರಿದು
ಕರ್ಪೂರದಾರತಿಯು ಆರಿ ಕಾಸಿನ ರಾಸಿ
ಏರಿ, ಪೂಜಾರಿ ಬಲು ಹರುಷದಲಿ ಹಿಗ್ಗಿದನು.
ಕಾಸುಳ್ಳವರು ಮತ್ತೆ ಕಾಸಿತ್ತು, ಮೂರು ಸಲ
ತೀರ್ಥವನು ಕುಡಿಯೆ ಉಳಿದರಿಗಿಂತ ಮಿಗಿಲಾದ
ಪುಣ್ಯವನು ಪಡೆವೆವೆಂದರಿತು ಕುಡಿದರೊ ಏನೊ–
ತೀರ್ಥವೆಲ್ಲವು ಮುಗಿದು ಪಾತ್ರೆ ಬರಿದಾಯ್ತು.
ದೇವತೀರ್ಥವು ಸಿಗದೆ ಕೆಲರು ಗೊಣಗುಟ್ಟಿದರು.
ಹಂಚಾಯ್ತು ಕೆಲ ಭಕ್ತರಿಗೆ ಹಣ್ಣುಕಾಯ್ಗಳನು.
"ಗುಡಿಯ ಬಾಗಿಲ ಹಾಕಬೇಕು, ಹೊರಡಿರಿ ಬೇಗ"
ಎಂದು ಅರ್ಚಕ ಮತ್ತೆ ಒದರಿದನು.–ಅವನಾರು?
ಶಿವನ ಅರ್ಚಕನವನು, ಶಿವನಾಜ್ಞೆ ಅವನ ನುಡಿ !
ಭಕ್ತರೆಲ್ಲರು ಬೇಗ ಹೊರಗುಡಿಯ ಸಾರಿದರು.
ಅರ್ಚಕನು ತತ್‌ಕ್ಷಣವೆ ಒಳಗುಡಿಗೆ ಓಡಿದನು–
ಆರತಿಯ ದುಡ್ಡೆಣಿಸೆ !

ಅವನ ಮಾತನು ಮೀರಿ
ಒಳಗಡೆಯ ನಿಂತಿರುವನವನಾರು? ಮೌನದಲಿ
ನಿಂತಿಹನು ಒಂದು ಕಡೆ. ತಲೆಬಾಗಿ, ಕೈಗಳನು
ಕಟ್ಟಿಕೊಂಡಿಹನು. ಬರಿಯ ಮೈ, ಕೌಪೀನವೊಂದುಳಿದು;
ಭಸ್ಮಲೇಪಿತ ದೇಹ; ಕೊರಳ ರುದ್ರಾಕ್ಷಿ;
ಜಡೆಗಟ್ಟಿ ಜೋಲಾಡುತಿಹ ನರೆತ ತಲೆಗುರುಳು;–
ಪರಮಭಕ್ತಿಯೆ ಪಣ್ತು ರೂಪವೆತ್ತಂತಿಹುದು
ಈ ಹಣ್ಣುಹಣ್ಣು ಮುದುಕನ ರೂಪು ! "ಅರ್ಚಕರೆ,

ಶಿವನ ಮಂಡೆಯಮೇಲೆ ಮೆರೆವ ಬಿಲ್ವದ ದಳವ
ದಯೆಮಾಡಿ ನೀಡುವಿರ? ಧನ್ಯನಾಗುವೆ ನಾನು,
ಪರಮಪುಣ್ಯವು ನಿಮಗೆ?"

ಅಚ್ಚರಿಯಲರ್ಚಕನು
ಕತ್ತೆತ್ತಿ ನೋಡಿದನು–ಕಾಸಿನೆಣಿಕೆಯೆ ಹೋಯ್ತು!
ಕಿನಿಸಿ ಕಿಡಿಕಿಡಿವೋಗಿ ಮೇಲೆದ್ದು ಕೂಗಿದನು:
"ಯಾರೆಂದು ತಿಳಿದಿಂತು ಕೇಳುತಿರುವೆಯೊ ನೀನು?
ಜ್ಞಾನವಿಲ್ಲವೆ ನಿನಗೆ? ಮಂಗಳಾರತಿಯಾಯ್ತು.
ಆ ಹೊತ್ತಿನಿ ಬರದೆ ಬಂದೀಗ ಕೇಳುವೆಯ?
ಸಿಗದು, ಹೊರಹೊರಡು."
"ಹೌದಪ್ಪ, ತುಸು ತಡವಾಯ್ತು.
ನಾನು ಕೇಳುವುದೇನು? – ಒಂದು ಬಿಲ್ವದ ದಳ."
"ನಿನಗೆ ಬೇಕೊ ಬಿಲ್ವ?–ಹಣ್ಣು ಕಾಯ್ಗಳ ತಂದು
ದಕ್ಷಿಣೆಯ ಹಾಕಿಲ್ಲಿ, ಪೂಜೆ ಮಾಡಿಸುವಂತೆ;
ನೋಡು, ಬಿಲ್ವದ ಮಾಲೆಯನೆ ನಿನಗೆ ನಾನೀವೆ."
"ಹಣ್ಣು ಕಾಯ್ಗಳ ನಾನು ಎಲ್ಲಿಂದ ತರಬಲ್ಲೆ?
ಕಡುಬಡವ ನಾನು. ಈ ದಿವಸ ಏಕಾದಶಿ,
ತೀರ್ಥವೂ ಸಿಗಲಿಲ್ಲ, ಬಿಲ್ವವಾದರು ಕೊಡಿರಿ."
ಹೆಚ್ಚುತಿಹ ಕೋಪದಲಿ ಕಚ್ಚಿ ಕೆಳದುಟಿಯನ್ನು
ಅರ್ಚಕನು ಅಬ್ಬರಿಸಿದನು: "ನಿನಗೆ ಈ ಮೊದಲೆ
ಹೇಳಲಿಲ್ಲವೆ, ಅರ್ಥವಾಗಲಿಲ್ಲವೆ ನಿನಗೆ?
ಮಂಗಳಾರತಿಯಯ್ತು, ಏಕೆನ್ನ ಪೀಡಿಸುವೆ ?
ತೆರೆಹಾಕಬೇಕು, ಬಲು ಹೊತ್ತಾಯ್ತು, ಹೊರಡಾಚೆ"
ಎಂದುಸಿರಿ, ತೆರೆಯೆಳೆದು ಶಿವನ ಮರೆಮಾಡಿದನು.

ಮುದುಕ ಕದಲಿರಲಿಲ್ಲ; 'ಶಿವಶಿವಾ' ಎಂದೊಮ್ಮೆ
ಸುಯ್ಯಲದ ಕೇಳಿ ಅರ್ಚಕ ತಿರುಗಿ ನೋಡಿದನು.
ಮುದುಕ ಕೈಗಳ ನೀಡಿ ಮತ್ತೆ ಬೇಡಿದನು:

"ಲಿಂಗದೆಡೆಯಲಿ ಕೆಳಗೆ ಬಿದ್ದಿಹುದ ಕೊಡುವಿರಾ?"
"ಕಣ್ಣುಕಾಣದೆ ನಿನಗೆ? ನೋಡು, ತೆರೆ ಹಾಕಿದೆ"
ಎಂದು ಕೈತೋರುತ್ತ ತೆರೆಯ ಕಡೆ ತಿರುಗಿದನು–
ಪೂಜಾರಿ ಬೆದರಿದನು: ತೆರೆಯನಾರೆಳೆದವರು ?
ಲಿಂಗಮೂರ್ತಿಯ ಮುಂದೆ ನಿಂತಿರುವನವನಾರು?
ಶಿವನಲ್ಲ !....ಬಿಲ್ವವನು ಬೇಡಿದಾ ಬಡ ಮುದುಕ !
ಹೌದು, ಅವನೇ; ನಿಂತು ಗಹಗಹಿಸಿ ನಗುತಿಹನು.
ಬಿಗಿದ ಬೆರಗಿನ ಮೌನದಲಿ ಮರಳಿ ಪೂಜಾರಿ
ಮತ್ತಿತ್ತ ತಿರುಗಿದನು, ಮುದುಕನೆಲ್ಲಿಹನೆಂದು
ಪರಿಕಿಸಲು. ಮುದುಕನಲ್ಲಿರಲಿಲ್ಲ. ಆಶ್ಚರ್ಯ !
ಕಲ್ಲುಬೊಂಬೆಯ ತೆರದಿ ಕದಲದೆಯೆ ನಿಂತಲ್ಲಿ
ಮೆಲ್ಲನುಸಿರಿದನಿಂತು: "ನೀನು....ಆ.....ಮುದುಕ....
ಇಲ್ಲದಿರೆ ನೀನಾರು?"

ಲಿಂಗದೆಡೆಯಿಹ ಮುದುಕ
ಇಂತು ನುಡಿದನು ನಗುತ: "ನಾನಾರು?.....ನಾನಾರು!...
ನಾನು ಯಾರೆಂಬುದನು ಅರಿಯೆಯಾ ಪೂಜಾರಿ !
ನಿನ್ನ ವಾಸವೂ ಇಲ್ಲೆ: ಎನ್ನೊಡನೆಯೇ ಇರುವೆ !
ನಾನು ಯಾರೆಂಬುದನು ನೀನರಿಯೆಯೇನೈ ?
ಎನ್ನ ಮರೆತಿರಲಾರೆ–ಎನ್ನ ಕಂಡರಿಯೆಯಾ !
ಇದುವೆ ಆಶ್ಚರ್ಯ ! ನೀನೆನಗೆ ಮಜ್ಜನ ಗೈವೆ,
ಮಡಿಯುಡಿಸಿ ಪೂಜಿಸುವೆ–ಎನ್ನ ಕಾಣೆಯ ನೀನು?
ನಿನ್ನ ತಪ್ಪಲ್ಲ; ನಿನ್ನ ಪೂಜೆಯ ತಪ್ಪು !
ಶಿಲೆಯ ಶಿವನನು ನೀನು ಶಿಲೆಯೆಂದು ಪೂಜಿಸಿದೆ:
ಕೊಡಕೊಡಗಳಲ್ಲಿ ನೀರ ತಂದು ಮೇಗಡೆ ಸುರಿದೆ;
ಭಕ್ತಿಜಲವನ್ನೆರೆದು ಅಭಿಷೇಕ ಮಾಡಿದೆಯ?
ಹೂಮಾಲೆಗಳ ಹೊರೆಯ ತಂದೆನ್ನ ಮೇಲೆಸೆದೆ;
ಹೃದಯಕುಸುಮವನೊಮ್ಮೆ ತೆಗೆದು ತೋರಿದೆಯಾ?
ಅರ್ಥವರಿಯದೆ ಮಂತ್ರಪುಷ್ಪಗಳನರ್ಪಿಸಿದೆ;

ಬಂದ ಭಕ್ತರ ಮೃದೂಕ್ತಿಗಳಿಂದ ನುಡಿಸಿ,
ಮಂತ್ರರತ್ನಗಳಿಂದ ಪೂಜೆಮಾಡಿದೆಯಾ?
ಹಣ್ಣುಕಾಯ್ಗಳ ತಂದೆ, ಮುಂದೆ ಹಿಡಿದವ ತಿಂದೆ;
ನಿನ್ನ ಆತ್ಮವ ತೋರಿ ನೈವೇದ್ಯ ಮಾಡಿದೆಯ?
ಕರ್ಪೂರದಾರತಿಯ ಹೊತ್ತಿಸಿದೆ, ತೋರಿಸಿದೆ;
ಪ್ರೇಮದಾರತಿಯಿಂದ ಎನ್ನ ಬೆಳಗಿದೆಯಾ?
ಜೊತೆಗೆ, ಭಕ್ತರು ಕೊಡುವ ಹಣ ನಿನಗೆ ಸಾಲದು,
ನೀ ಲಂಚಕೋರ ! –ಇದೆ ನಿನ್ನ ಪೂಜೆಯ ಸಾರ !
ನಿನ್ನ ಮಜ್ಜನದಿಂದ ಬಹಳ ಚಳಿಯಾಯ್ತೆನಗೆ–
ನಿನ್ನ ಹೂಗಳ ಹೇರು ಬಲು ಭಾರವಾಯ್ತೆನಗೆ–
ನೀನಿತ್ತುದನು ಉಂಡು ಹೊಟ್ಟೆ ಬಿರಿದುದು ಎಂದೊ–
ನಿನ್ನ ಈ ನಿತ್ಯ ಪೂಜೆಯು ಎನಗೆ ಸಾಕಾಯ್ತು,
ಸಾಕಾಯ್ತು ಪೂಜಾರಿ: ಈ ಲಿಂಗವನ್ನುಳಿದು
ಎಷ್ಟೊ ವರ್ಷಗಳಾಯ್ತು. ನಿನ್ನ ಪರಿಕಿಸೆ ಬಂದು,
ಕೆಳಬೀಳುತಿಹ ನಿನ್ನ ಮೇಲಕೆತ್ತಲಿಕೆಂದು,
ಬಡ ಭಕ್ತನಾಗಿ ಬಿಲ್ವದ ದಳವ ಬೇಡಿದೆನು.
ಭಕ್ತರನು ಕಡೆಗಣಿಸೆ ದೂರ ಓಡುವ ದೇವ :
ಪರಮ ಭಕ್ತರ ಹೃದಯವೆನ್ನ ನಿರ್ಮಲ ನಿಲಯ,
ಭಕ್ತನಾಗಿಯೆ ನಾನು ಎಲ್ಲೆಲ್ಲು ಕಾಣುವೆನು.
ಭಕ್ತರನು ಉಪಚರಿಸು, ಭಕ್ತರನು ಸತ್ಕರಿಸು,
ಭಕ್ತರೊಲವನು ಗೆಲ್ಲು, ಅದೆ ಎನ್ನ ಪೂಜೆ;
ನೊಂದವರ ಕಣ್ಣೊರಸು, ಸೊರಗಿದರ ಸಂತೈಸು,
ಬಡವರನು ಪತಿಕರಿಸು, ಬಲ್ಲಿದರ ಮದವಿಳಿಸಿ
ಅವರಿಗೆನ್ನನು ತೋರು, ಅದೆ ಎನ್ನ ಪೂಜೆ.
ಶಿಲೆಯ ಪೂಜೆಯು ಸಾಕು, ಶಿವನ ಪೂಜೆಯ ಮಾಡು.
ಎಲ್ಲಿ, ಬೇಡಿದ ದಳವ ಮುದುಕನಿಗೆ ಕೊಡು, ಹೋಗು."

ತನ್ನ ಕಂಗಳ ತಾನು ನಂಬಲಾರದೆ ಸುತ್ತ
ತಿರುತಿರುಗಿ ನೋಡಿದನು ಪೂಜಾರಿ ; ಮುದುಕನನು

ಕಂಡಲ್ಲಿ, ಶಿವನ ಕಡೆ ತಿರುಗಿದನು; ತೆಳುದೆರೆಯ
ಹಿಂದೆ ಹಣತೆಯ ದೀಪ ಮಿನುಮಿನುಗುತಿರಲೊಡನೆ
ತೆರೆಯನೊಕ್ಕಡೆ ಮಾಡಿ, ಬಿಲ್ವಮಾಲೆಯ ತಂದು
ಕೊಡಲು ಮುದುಕನಿಗೆ, "ಅರ್ಚಕ ಮಹಾಶಯರೆ,
ತಪ್ಪಾಯ್ತು, ಕ್ಷಮಿಸುವಿರ? ನಿಮ್ಮ ಮಾತನು ನಾನು
ಕಿವುಡುಗೇಳ್ದಿಲ್ಲಿಯೇ ನಿಂತು ನಿಮ್ಮನು ಕಾಡಿ
ಬೇಡಿ ತೊಂದರೆ ಕೊಟ್ಟೆ. ಈ ಮಾಲೆಯೇಕೆನಗೆ?
ಒಂದು ದಳವೇ ಸಾಕು. ಕೊರಳ ಮಾಲೆಯ ತೆಗೆದು
ಶಿವನ ಅಂದವೆ ಹೋಯ್ತು" ಎಂದು ಮುದುಕನು ನುಡಿಯೆ
ಮೊಗವ ನಗೆ ಬೆಳಗುತಿರೆ, ಬಹಳ ಮೃದು ದನಿಯಿಂದ
ಪೂಜಾರಿಯುಸಿರಿದನು; "ಅಂದವೆಲ್ಲಿಗೆ ಹೋಯ್ತು?
ಕೊರಳ ಬಿಲ್ವದ ಮಾಲೆ ಶಿವನ ಕೊರಳೊಳೆ ಇಹುದು:
ಶಿವನಾರು, ನೀವಾರು !" ಎಂದು ಮಾಲೆಯ ಕೊಂಡು
ವೃದ್ಧಶ್ರೇಷ್ಠನ ಕೊರಳಿಗದ ತೊಡಿಸಿ, ತಲೆಬಾಗಿ,
"ನಾ ಬಹಳ ಕಾಯಿಸಿದೆ, ತಪ್ಪ ಮನ್ನಿಸಿ ದೇವ"
ಎಂದು ಬೇಡಿದನು.
"ಮನ್ನಿಸುವನಾ ಶಿವನು"
ಎಂದು ಮುದುಕನು ಶಿವನ ಕಡೆಗೆ ಕೈತೋರಿದನು.
ಪೂಜಾರಿ ಶಿವನ ಕಡೆ ತಿರುಗಿ ಕೈಗಳ ಮುಗಿದು
ನೋಡುತಿರೆ, ಹಿಂದೆ ತಾ ತೆಗೆದ ಬಿಲ್ವದ ಮಾಲೆ
ಶಿವನ ಕೊರಳೊಳೆ ಮೆರೆಯಲದ ಕಂಡು ಚಿಂತಿಸುತ,
ಬಿಟ್ಟ ಬೆರಗಿನ ಕಣ್ಣ ಹಿಂದುಗಡೆ ತಿರುಗಿಸಲು
ಮುದುಕನಲ್ಲಿರಲಿಲ್ಲ....

ಮಾಲೆಯನು ಕೈಕೊಂಡು,
ಪತಿತರನು ಉದ್ಧರಿಸಿ ಪೊರೆವ ಕರುಣಾಕರಗೆ
ಶಿವಗೆ ವಂದಿಸಿ, ತನ್ನ ಮನೆಗೆ ಹಿಂದಿರುಗಿದನು.

೧೯೩೨]

# ಬೀದಿ ಸೂಳೆ

ಇವಳಿದೋ ಬೀದಿ ಸೂಳೆ !
ಇವಳ ಕತೆ ಕೇಳೆ
ಬೇಸರಾಗುವುದೇನೊ ?
ಅದೊಡಾಗಲಿ, ಕೇಳಿ;
ಮರುಕ ತಾಳಿ.

ನಾನೊರೆವುದೇನಿಹುದು?
ಅವಳಿರವೆ ಹೇಳುತಿದೆ
ಅವಳ ಕತೆಯ,
ಅವಳ ವೆತೆಯ.

ಕಂಡು ಕಾಣದ ತೆರದಿ
ಮುಂಬರಿವಿರೇತಕ್ಕೆ?
ಕಣ್ಣುಕುಕ್ಕುವ ನೋಟ!
ತೆರೆಯದಾಯ್ತೇ, ಅಯ್ಯೊ.
ನಿಮ್ಮೆದೆ ಕವಾಟ?
ಅವಳ ನೋಡಿದವರ್
ಅವಳ ನೋಡದವರ್-
ಎಲ್ಲರೂ ಎದೆಗೊಡಿರಿ
ಈ ನನ್ನ ಕತೆಗೆ:
ಒಂದೆ ಕಂಬನಿ ಸಲಿಸಿ
ನೀವೆನ್ನ ಜೊತೆಗೆ.

ಹನಿಹನಿಯದೊಗ್ಗೂಡಿ
ಹರಿದು ಕಂಬನಿ ಕೋಡಿ
ಕೊಚ್ಚಿಹೋಗಲಿ ಅವಳ
ಪಾಪ ಪಂಕ;

ಕಚ್ಚಿಹೋಗಲಿ ಅವಳ
ಆತ್ಮದ ಕಳಂಕ.

ನಡೆಯಲಾರಳು, ಇರವ
ನುಡಿಯಲರಳು, ನೋವ
ತಡೆಯಲಾರಳು, ಸಾವ
ಪಡೆಯಲಾರಳು, ಇಹಳು
ಬಾಳುವೆಣವಾಗಿ.
ಆಯು ಜೀವವ ಬಿಡದೆ
ಹಿಡಿದಡಸುತಿದೆ ಪೂರ್ವ–
ಜನ್ಮ ಋಣಕಾಗಿ.

ನೋಡಿವಳ ನೋಟ : ಕಟ–
ವಾಯ ಜೊಲ್, ಬಿಟ್ಟ ಪಲ್,
ಸೆಡೆತ ಕಯ್, ಸೋರು ಮೆಯ್,
ಬೀತ ತಲೆ, ಬಾತ ಕಾಲ್....
ಸಾಕು ಸಾಕೆಂಬೆಯಾ?
ಸಾಕೆನಲು ಸಾಕು.

ನನಗೆ ನೆನಪಿಹುದೀಕೆ
ಬೇಡುತಿದ್ದಳು ಬಿಕ್ಕೆ;
ಜೊತೆಗೊಬ್ಬ ಎಳೆ ಹುಡುಗ :
ಅವಳ ಬಾಳಿನ ಹಡಗ
ಪಟವಾಗಿ, ಅದನು
ನಡಸುತಿದ್ದನೊ ಏನೊ:
ಕಾಣನಾಗಿಹನವನು,
ಅರಿಯೆ ಹದನು.
ತಾಯ ಕೈ ಬಿಟ್ಟನೋ
ಪ್ರಾಣವನೆ ಬಿಟ್ಟನೋ,

ಎಂತೊ ಏನೋ? ಇಂದು
ಕಾಣನವನು.

ಒಂಟಿ ಬಾಳಿನ ಹಾದಿ
ಎಲ್ಲಿಗೊಯ್ದಿತೊ ಇವಳ
ಬಲ್ಲರಾರು ?

ಊರೆಗೋಲುಡಿದಿರಲು
ದಾರಿಯಲಿ ಕೊರಕಲು
ಸಿಕ್ಕಿ, ಕೆಳಬಿದ್ದಳೊ,
ಕೆಸರಿನಲ್ಲದ್ದಳೋ?
ಬಲ್ಲರಾರು?

ಬಿಕ್ಕೆ ಹುಟ್ಟದೆಹೋಗಿ
ಹಸಿವ ಹಾಹಾಕಾರ
ಹೆಚ್ಚಿ, ಉದರಕ್ಕಾಗಿ
ಆದಳೋ ಆಹಾರ
ಕಾಮಿಗಳ ಕಾಮಕ್ಕೆ?
ಬಲ್ಲರಾರು ?

ಪತಿಪುತ್ರರಿಲ್ಲದೆಯೆ
ಒಂಟಿ ಬಾಳೊಲ್ಲದೆಯೆ
ವಿಕಲವಾಗಿರೆ ಚಿತ್ತ
ಸುಪ್ತವಾಗಿದ್ದಿವಳ
ಕಾಮವೇ ಉರಿಚಾಚಿ
ಸಿಕ್ಕವರನೇ ಬಾಚಿ
ಕೆರಕೆರಳಿ ಉರಿದುರಿದು
ಇಂಧನಕೆ ಹಾತೊರೆದು

ಕಡೆಗಿವಳನೇ ಹುರಿದು
ತಿನ್ನುತಿಹುದೇನೊ

ಇಲ್ಲದೊಡೆ, ಬೀದಿಯಲಿ
ಹೋಗುತಿರೆ ಈ ಹೆಣ್ಣು–
ನಿರ್ಭಾಗ್ಯೆ ನಿರ್ಗತಿಕೆ
ನಿರ್ದುಷ್ಟೆ ನಿಸ್ಸಹಾಯೆ–
ಭಂಡ ಪುಂಡರ ಕಣ್ಣು
ಬಿದ್ದಿತೇನೊ?
ಹರುಕು ನಡೆನುಡಿಯ ಜನ
ಬೀದಿಯೊಂಟಿಯ ಹೆಣ್ಣ
ಮಾನವುಳಿಸುವರೆ?
ರೂಪೇನು ರಂಗೇನು?
ಹೆಣ್ತನವೆ ಸಾಕಲಾ

ಸ್ವಚ್ಛಂದಗಾಮಿಗೆ,
ಕಡುಕಾಮಿಗೆ !
ಹೆಣ್ಣು ಬೀದಿಗೆ ಬೀಳೆ,
ಇಂಥ ಮಂದಿಯ ನಡುವೆ
ಆಗಲೇ ಸೂಳೆ ?

ಒಂಟಿ ಬಾಳಿನ ಹಾದಿ
ಎಲ್ಲಿಗೊಯ್ದಿತೊ ಇವಳ
ಬಲ್ಲರಾರು?

ಕಡು ದುಷ್ಟೆ ಪಾಪಿಷ್ಠೆ
ಎಂದಿವಳ ಜರೆಯದಿರು:
ಜರೆತದಿಂದೇನು ಫಲ?
ಹರೆವುದೇನವಳ ಮಲ?

ಕೈಲಾದನಿತು ನೀಡು
ನೆರವ : ಅದು ಆಗದಿರೆ
ಇರಲವಳಿಗವಳ ಪಾಡು.

ಮುಸುರಿ ದುಂಬಿಯ ಹಿಂಡು
ಬಂಡನೆಲ್ಲವನುಂಡು
ಹೂ ಬಾಡಿ ಬೀಳಲಿರೆ
ಮತ್ತೆ ಬರುವುವೆ ದುಂಬಿ?

ಮುಟ್ಟಲೊಲ್ಲದ ಹೂವು
ಮುಡಿಹಕಾಗುವುದೆ?
ಕರುಣೆ ಮಾರುತ ಬೀಸಿ
ಹೂವು ಕೆಳಗುದಿರೆ
ತಾಯಿ ತಿರೆಯಿಹಳವಳೆ
ಕಡೆಯಾಸರೆ.

೧೯-೯-೧೯೪೫]

# ಡೋರ*

ರೈತ ಆ್ಯಲನ್ ಬಳಿಯಲವನ ಹೊಲ ಹಟ್ಟಿಯಲಿ
ನೆಲಸಿದ್ದರಿವರು, ವಿಲಿಯಂ ಮತ್ತು ಡೋರ.
ಅವನ ಮಗ, ವಿಲಿಯಂ; ಡೋರ ತಮ್ಮನ ಮಗಳು.
ಎನಿತೊ ಸಲ ಅವನವರ ನೋಡುತ್ತ, ಎನಿತೊ ಸಲ
ಯೋಚಿಸಿದ–"ನಾನಿವರ ಗಂಡಹೆಂಡಿರ ಮಾಳ್ಪೆ"
ಎಂದು. ದೊಡ್ಡಪ್ಪನಿಚ್ಛೆಯನು ಅರಿತವಳಾಗಿ
ವಿಲಿಯಮನಿಗೆಳಸಿದಳು ಡೋರ. ತಾನವಳೊಡನೆ
ಯಾವಾಗಲೂ ಮನೆಯೊಳಿದ್ದ ಕಾರಣದಿಂದ
ಆ ತರುಣನವಳನ್ನು ಕುರಿತು ಯೋಚಿಸಲಿಲ್ಲ.

ಒಂದು ದಿನ ಆ್ಯಲನ್ ಮಗನ ಕರೆದಿಂತೆಂದ:
"ಮಗುವೆ, ಬಲು ತಡವಾಗಿ ನಾ ಮದುವೆಯಾದೆ;
ಆದರೆ, ನಾನು ಸಾಯುವ ಮೊದಲು ನನ್ನ ಮೊ–
ಮ್ಮಗುವನ್ನು ನನ್ನ ತೊಡೆಗಳ ಮೇಲೆ ನೋಡುವೆನು
ಎಂದಾಸೆ. ನಿನಗೆ ತಕ್ಕವಳ ನಿಶ್ಚಯಿಸಿರುವೆ.
ಅದರಿಂದ ನೀನೀಗ ಡೋರಳನು ನೋಡು;
ನೋಡುವುದಕವಳು ಚೆನ್ನಾಗಿಹಳು; ಅಲ್ಲದೆಯೆ,
ತನ್ನ ವಯಸಿಗೆ ಮೀರಿ ಜಾಣೆಯೂ ಅಹುದು.

ನನ್ನ ತಮ್ಮನ ಮಗಳು; ನನಗವನಿಗೊಮ್ಮೆ
ನಿಷ್ಠುರದ ಮಾತಾಗಿ, ಅಗಲಿದೆವು; ಅವನೆಲ್ಲೊ
ಪರದೇಶದಲಿ ಮಡಿದ; ಅದರೊಂದೇ ಕರುಳು–
ಅವನ ಸಲುವಾಗವನ ಮಗಳನ್ನು ಸಾಕಿದೆನು;
ನಿನ್ನ ಹೆಂಡತಿಯಾಗಿ ಅವಳನೊಪ್ಪಿಕೊ; ನಾನು

---

* *Alfred Tennyson* ಎಂಬ ಪ್ರಸಿದ್ಧ ಆಂಗ್ಲ ಕವಿಯ *Dora* ಎಂಬ ಕವನದ ಭಾಷಾಂತರ.

ಎನಿತೊ ವರುಷಗಳಿಂದ ಹಗಲಿರುಳು ಈ ಮದುವೆ
ಹರಸುತಿಹೆ." ಒರಟುತ್ತರವನಿತ್ತನಾದರಾ
ವಿಲಿಯಂ : "ಡೋರಳನು ನಾನೊಲ್ಲೆ; ನನ್ನಾಣೆ,
ಡೋರಳನು ಮದುವೆಯಾಗುವುದಿಲ್ಲ ನಾನು."
ಆಗ ಮುದುಕನು ಕನಲಿ, ಕೈಮುಷ್ಟಿಯನು ತಿರುಹಿ,
ಇಂತೆಂದ: "ಮದುವೆಯಾಗುವುದಿಲ್ಲ, ಮಗೂ !
ಹೀಗೆ ಉತ್ತರಕೊಡಲು ನಿನಗೆನಿತು ಕೆಚ್ಚು !
ನನ್ನ ಕಾಲದಲಿ ತಂದೆಯ ಮಾತು ಕಟ್ಟಳೆ,
ಅಂತಿರುವುದೆನ್ನ ಮಾತಿಂದು. ವಿಲಿಯಂ, ನೋಡು;
ಯೋಚನೆಯ ಮಾಡು; ತಿಂಗಳು ತೆಗೆದುಕೋ ಅದಕೆ ;
ನನ್ನ ಇಷ್ಟದ ಮೇರೆ ನಿನ್ನ ಉತ್ತರವಿರಲಿ;
ಇಲ್ಲದಿರೆ, ನೋಡು, ದೇವರ ಆಣೆ, ಮನೆಬಿಟ್ಟು
ಹೊರಡಬೇಕಾದೀತು; ನನ್ನ ಮನೆ ಹೊಸ್ತಿಲನು
ಮೆಟ್ಟಿ ಮನೆಯನು ಮಂಕು ಮಾಡಕೂಡದು." ಅದಕೆ
ಹುಚ್ಚುಹುಚ್ಚಾಗಿ ಮಾರ್ನುಡಿದನಾ ವಿಲಿಯಂ;
ಹಲ್ಲುಗಳ ಕಡಿದು, ತಾನಲ್ಲಿಂದ ಹೊರ ಹೊರಟ;
ಅವನವಳನೆನಿತೆನಿತು ನೋಡಿದನೊ ಅನಿತನಿತು
ದೂರಮಾಡುತ ಬಂದ; ಕಠಿನವಾಯ್ತವನ ನಡೆ;
ಆದರವುಗಳ ಡೋರ ಮೌನದಲಿ ಸಹಿಸಿದಳು.
ಬಳಿಕ, ತಿಂಗಳ ಒಳಗೆ ತಂದೆ ಮನೆಯನು ಅವನು
ಬಿಟ್ಟು ಹೊರಟನು; ಅಲ್ಲೆ ಹೊಲಗಳಲಿ ತಾನು
ಕೂಲಿಗೆಲಸವ ಮಾಡತೊಡಗಿದನು; ಅಲ್ಲದೆಯೇ,
ಅರ್ಧ ಒಲವಿಂದ, ಮತ್ತರ್ಧ ತಂದೆಯ ಮೇಲೆ
ಹಟದಿಂದ, ಒಬ್ಬ ಕೂಲಿಯ ಮಗಳು ಮೇರಿ
ಮಾರಿಷಸ್ ಎಂಬವಳ ಕೂಡ ಬೇಟವ ಮಾಡಿ,
ಅವಳ ಕೈಹಿಡಿದ.

ಅವರ ಮದುವೆಯ ಸಾರಿ
ಗಂಟೆ ದನಿಗೈಯುತಿರೆ, ಡೋರಳನು ಬಳಿಗರೆದು

ಇಂತೊರೆದನ್ಯಾಲನ್ : "ನನ್ನ ಹುಡುಗಿಯೆ, ನಿನ್ನ
ಬಹುವಾಗಿ ಪ್ರೀತಿಸುವೆ ; ಆದರೆ, ಹಿಂದೆನ್ನ
ಮಗನೆನಿಸಿದವನೊಡನೆ ಮಾತಾಡಿದರು ಸರಿಯೆ,
ಅವನು ಹೆಂಡತಿಯೆಂದು ಕರೆವ ಅವಳೊಡನೆ ನೀ–
ನೊಂದು ನುಡಿಯಡಿದರು ಸರಿಯೆ, ನಿನಗೆಡೆಯಿಲ್ಲ
ನನ್ನ ಮನೆಯೊಳಗೆ. ನನ್ನಿಚ್ಛೆಯೇ ಕಟ್ಟಳೆ."
ನಮ್ರಳಾದಾ ಡೋರ ಈ ಮಾತಿಗೊಪ್ಪಿದಳು.
ಹೀಗೆಯೇ ಇರದೆಂದಿಗೂ, ತನ್ನ ಮನವನ್ನು
ಸಡಿಲಿಸುವ ದೊಡ್ಡಪ್ಪ–ಎಂದು ಬಗೆದಳು ಅವಳು.

ದಿನಗಳುರುಳಿದುವು; ಜನಿಸಿತು ಗಂಡುಗೂಸೆಂದು
ವಿಲಿಯಮ್‌ಗೆ; ಆಗವನಿಗೊದಗಿದುದು ಆಪತ್ತು;
ಎದೆಯೊಡೆದು, ತಂದೆ ಮನೆ ಬಾಗಿಲಿನ ಮುಂದೆ
ಅವನು ದಿನದಿನವೂ ಹಾದು ಹೋಗುತಲಿದ್ದ;
ಆಗವನ ತಂದೆ ಅವನಿಗೆ ನೆರವು ಕೊಡಲಿಲ್ಲ.
ಆದರಾ ಡೋರ, ತಾ ಮಿಗಿಸಲಾದಲ್ಲವನು
ಕೂಡಿಟ್ಟು, ಅವರಿಗದ ಕಳುಹುತಿದ್ದಳು ಕದ್ದು;
ಯಾರು ಕಳುಹಿದರೆಂದು ಅವರಿಗೂ ಅರಿಯದು.
ಇಂತಿರಲು, ಕಡೆಗೆ ವಿಲಿಯಮಿಗೊಂದು ಜ್ವರ ತಗುಲಿ,
ಸುಗ್ಗಿಯಲ್ಲೊಂದು ದಿನ ಮಡಿದನವನು.

ಆ ವೇಳೆ, ಮೇರಿಯೆಡೆಗೈದಿದಳು ಡೋರ;
ಕುಳಿತುಕೊಂಡಳು ಮೇರಿ, ಕಣ್ಣೀರ ಸುರಿಸುತ್ತ
ಕಂದನನು ನೋಡಿದಳು, ಡೋರಳನು ದೂರಿದಳು
ಮನದಲ್ಲೆ. ಡೋರ ಬಂದಳು, ನುಡಿದಳಿಂತು:
"ದೊಡ್ಡಪ್ಪ ಹೇಳಿದಂತಿದುವರೆಗೆ ನಡೆದಿರುವೆ.
ನಾ ಪಾಪ ಮಾಡಿರುವೆ: ಮೊದಮೊದಲು ವಿಲಿಯಮ್‌ಗೆ
ಕೇಡಾದುದೆಲ್ಲ ನನ್ನಿಂದ; ಆದರೆ, ಮೇರಿ,
ಮಡಿದವನ ಸಲುವಾಗಿ, ಅವನು ವರಿಸಿದ ಹೆಣ್ಣು

ನಿನ್ನ ಸಲುವಾಗಿ, ಈ ತಬ್ಬಲಿಯ ಸಲುವಾಗಿ,
ನಿನ್ನ ಬಳಿ ಬಂದಿಹೆನು: ಇಂಥ ತುಂಬಿದ ಸುಗ್ಗಿ
ಕಳೆದೈದು ವರ್ಷದಿಂದಿಲ್ಲವೆಂಬುದನು
ನೀ ಬಲ್ಲೆ: ನನ್ನೊಡನೆ ಕಂದನನು ಕಳಿಸಿಕೊಡು;
ನಾನದನು ಕೂರಿಸುವೆ ದೊಡ್ಡಪ್ಪನೆದುರಿನಲಿ
ಗೋಧಿಪಯಿರಿನ ನಡುವೆ; ತುಂಬು ಸುಗ್ಗಿಯ ಕಂಡು
ಅವನ ಹೃದಯವು ಹರ್ಷಗೊಂಡಿರಲು, ಮಗುವನ್ನು
ನೋಡಿ, ಕಣ್ಮರೆಯಾದ ಮಗನ ಸಲುವಾಗಿ
ಹರಸಬಹುದದನು."

ತಾ ಕರೆದುಕೊಂಡಳು ಡೋರ
ಮಗುವನ್ನು; ಗೋಧಿಪಯಿರಿನ ನಡುವೆ ನಡೆತಂದು,
ಉತ್ತು ಬಿತ್ತಿದ, ಬರಿಯ ಗಸಗಸೆಯ ಗಿಡ ಬೆಳೆದ
ಒಂದು ದಿಬ್ಬದ ಮೇಲೆ ಕುಳಿತುಕೊಂಡಳು ಅವಳು.
ದೂರದಲಿ ರೈತ ಬಂದನು ಹೊಲಕೆ; ಅವಳನ್ನು
ನೋಡಲೇ ಇಲ್ಲ; ಏಕೆನಲು, ಮಗುವಿನ ಕೂಡ
ಡೋರ ಕಾದಿಹಳೆಂದು ಅವನಿಗೊರೆಯಲು ಅವನ
ಜನರಲ್ಲಿ ಯಾರಿಗೂ ಎದೆಯಿಲ್ಲ; ಡೋರಳೇ
ಮೇಲೆದ್ದು ಅವನ ಬಳಿ ಹೋಗಬಹುದಾಗಿತ್ತು,
ಆದರೆದೆಗುಂದಿದಳು; ಕೊಯ್ಲಿಗರು ಪಯಿರನ್ನು
ಕೊಯ್ಯುತಿದ್ದರು; ಸೂರ್ಯನತ್ತ ಕೆಳಗುರುಳಿದನು;
ನೆಲ ಕತ್ತಲಾಯ್ತು.

ಆದರೆ, ಬೆಳಕು ಹರೆದಾಗ
ಅವಳೆದ್ದು ಮತ್ತೊಮ್ಮೆ ಮಗುವ ಜೊತೆಯಲಿ ಕೊಂಡು
ಕುಳಿತಳಾ ಹೊಲದ ದಿಬ್ಬದ ಮೇಲೆ; ಅಲ್ಲಲ್ಲಿ
ಬೆಳೆದಿದ್ದ ಎಲ್ಲ ಹೂಗಳಿನೊಂದು ಕಿರುದಂಡೆ
ಕಟ್ಟಿ, ಕಕ್ಕನ ಕಂಗಳೆದುರಿನಲಿ ಕಂದ
ಮೆರೆಯಲೆಂದದರ ಟೋಪಿಗೆ ದಂಡೆ ಸುತ್ತಿದಳು.

ರೈತ ಹೊಲಹೊಕ್ಕಾಗ ಅವಳನ್ನು ನೋಡಿದನು.
ಕೆಲಸಮಾಡುತ್ತಿದ್ದ ಆಳುಗಳ ಬಳಿ ಬಿಟ್ಟು
ಬಂದು ನುಡಿದನು: "ನೀನು ನಿನ್ನೆ ಎಲ್ಲಿದ್ದೆ?
ಮಗು ಯಾರದಿದು? ಇಲ್ಲಿ ಏನು ಮಾಡುತ್ತಿರುವೆ?"
ನೆಲವ ದಿಟ್ಟಿಸಿ ಡೋರ ಮೆಲ್ಲನುಸಿರಿದಳಿಂತು:
"ವಿಲಿಯಮ್‌ನ ಮಗು !" "ಡೋರ, ಬೇಡವೆಂದಾಗಲೇ
ಹೇಳಲಿಲ್ಲವೆ ನಿನಗೆ ?" ಎಂದೊರೆದನ್ಯಾಲನ್.
"ನಿನ್ನಿಷ್ಟದಂತೆ ನನಗೇನಾದರೂ ಮಾಡು,
ಆದರೀ ಮಗುವ ಕರೆದುಕೊ, ಮತ್ತೆ ಸತ್ತವನ
ಸಲುವಾಗಿ ಹರಸದನು" ಎಂದು ನುಡಿದಳು ಡೋರ
ಮರಳಿ. ಆ್ಯಲನ್ ನುಡಿದನಿಂತು: "ಆ ಹೆಂಗಸೂ
ನೀನೂ ಒಂದಾಗಿ ಹೂಡಿರುವ ತಂತ್ರವಿದು.
ನನ್ನ ಕರ್ತವ್ಯವನು ನಾ ಕಲಿಯಬೇಕೇನು,
ಅದು ಕೂಡ ನಿನ್ನಿಂದ! ಕಟ್ಟಳೆಯದೆನ್ನ ನುಡಿ
ಎಂದು ನೀನರಿತಿದ್ದೆ; ಆದರೂ ನೀನು
ಅದನು ಕಡೆಗಣಿಸುವಾ ಸಾಹಸವ ಮಾಡಿರುವೆ.
ಒಳ್ಳೆಯದು–ಮಗುವನ್ನು ಕರೆದುಕೊಳ್ಳುವೆನು;
ಆದರಿನ್ನಿಲ್ಲಿಂದ ನೀ ತೊಲಗು, ಎಂದಿಗೂ
ನೋಡದಿರು ನನ್ನ."

ಈ ರೀತಿ ನುಡಿಯುತ್ತ,
ಗಟ್ಟಿಯಾಗಳುತಿದ್ದ ಮಗುವನ್ನು ಕರೆದೊಯ್ಯೆ
ಬಲು ಕಷ್ಟಪಟ್ಟನವ. ಬಿದ್ದುದಾ ಹೂದಂಡೆ
ಕೆಳಗೆ ಡೋರಳ ಕಾಲ ಬಳಿಯಲ್ಲಿ. ತಲೆಬಾಗಿ
ಡೋರ ಕೈಮೇಲೆ ಮೊಗವಿರಿಸಿದಳು, ಮಗುವಿನಳು
ಹೊಲದೆ ಕೇಳಿತು, ದೂರವಾಗುತ್ತ ಬರುಬರುತ.
ಮೊದಲು ರೈತನ ಮನೆಗೆ ತಾ ಬಂದ ದಿವಸವನು,
ಮತ್ತೆ ನಡೆದುದನೆಲ್ಲ, ನೆನೆದು ತಲೆಬಾಗಿದಳು;
ಬಾಗಿದಳು, ಬಾಗಿ ತಾ ಮೌನದಲಿ ಹಲುಬಿದಳು.

ಕೊಯ್ಲಿಗಳು ಪಯಿರನ್ನು ಕೊಯ್ಯುತ್ತಿದ್ದರು; ಸೂರ್ಯ
ಅತ್ತ ಕೆಳಗುರುಳಿದನು; ನೆಲ ಕತ್ತಲಾಯ್ತು.

ಆ ಬಳಿಕ ಡೋರ ಮೇರಿಯ ಮನೆಯ ಸಾರಿದಳು,
ನಿಂತುಕೊಂಡಳು ಹೊಸಿಲ ಮೇಲೆ. ಡೋರಳ ಕೂಡ
ಮಗುವಿಲ್ಲದಿರುವುದನು ಮೇರಿ ಕಂಡಳು; ಆಗ,
ವೈಧವ್ಯದಲಿ ತನಗೆ ನೆರವಾದ ದೇವನನು
ನೆನೆನೆನೆದು ಹೊಗಳಿದಳು. ಡೋರ ನುಡಿದಳು ಇಂತು:
"ಕರೆದುಕೊಂಡನು ನನ್ನ ದೊಡ್ಡಪ್ಪ ಮಗುವನ್ನು;
ಮೇರಿ, ನಾನಿನ್ನು ನಿನ್ನೊಡನಿದ್ದು ನಿನ್ನ ಜೊತೆ
ದುಡಿಯುತ್ತ ಬಾಳುವೆನು : ನನ್ನನೆಂದೆಂದೂ
ತಾ ನೋಡನೆಂದಿಹನು." ಮರುಮಾತನಾಡಿದಳು
ಮೇರಿ ಆಗಿಂತು: "ನೀನೆನ್ನ ಕ್ಲೇಶಗಳನ್ನು
ಅನುಭವಿಸಬೇಕೆಂಬುದಿದು ಸಲ್ಲದೆಂದಿಗೂ.
ಈಗ ನನಗೆನಿಸುತಿದೆ–ಇರಕೂಡದೆನ್ನ ಮಗು
ಅವನೊಡನೆ; ಏಕೆನಲು, ಅದಕವನು ಕಲಿಸುವನು
ಕಠಿನತೆಯ, ತನ್ನ ತಾಯನ್ನು ಕಡೆಗಾನುವುದ;
ಅದರಿಂದ, ನಾವಲ್ಲಿಗಿಬ್ಬರೂ ತೆರಳೋಣ,
ನನ್ನ ಮಗುವನು ನಾನು ಕರೆದುಕೊಳ್ಳುವೆ, ಮನೆಗೆ
ಕರೆತರುವೆ; ನಿನ್ನ ಕರೆದುಕೊ ಮತ್ತೆ ಎಂದವನ
ಬೇಡುವೆನು; ಕರೆದುಕೊಳ್ಳಲು ಒಪ್ಪದಿರೆ,
ಅಂದು ನಾವಿಬ್ಬರೂ ಒಂದೆ ಮನೆಯಲ್ಲಿರುವ,
ನಮ್ಮ ನೆರವಿಗೆ ಬರಲು ತಕ್ಕ ವಯಸಿನವರೆಗೆ
ಬೆಳೆವನಕ, ವಿಲಿಯಮ್‌ನ ಮಗುವಿಗಾಗಿಯೆ ದುಡಿವ."

ಅಂತು ಆ ಹೆಂಗಸರು ತಾವೊಬ್ಬರೊಬ್ಬರನು
ಮುತ್ತಿಟ್ಟು, ಹೊರ ಹೊರಟು ನಡೆತಂದು ಹೊಲಮನೆಯ
ಸೇರಿದರು. ಮನೆಯ ಕದ ತೆರೆದಿತ್ತು: ಅವರಿಣಿಕಿ
ನೋಡಿದರು; ತನ್ನ ಅಜ್ಜನ ತೊಡೆಯ ಮೇಲಿತ್ತು

ಮಗು; ಅದನು ಪ್ರೀತಿಸುವವನ ತೆರದೆ ಅವನು
ಮಗುವ ಕೊಂಕುಳಿಗೆ ಕಚಗುಳಿಯಿಟ್ಟು, ಅದರ ಕೈ
ಕೆನ್ನೆಗಳ ತಟ್ಟುತ್ತಿದ್ದನು; ಆಗ ಮಗು ತನ್ನ
ಕೈಚಾಚಿ, ಅವನ ಗಡಿಯಾರದಿಂದಿಳಿಬಿದ್ದು
ಬೆಂಕಿ ಬೆಳಕಿನಲಿ ಥಳಥಳಿಸಿ ಹೊಳೆಯುತ್ತಿದ್ದ
ಹೊನ್ನ ಮುದ್ರಿಕೆಗಾಗಿ ತೊದಲಿ ಕೇಳುತ್ತಿತ್ತು.
ಒಳಹೊಕ್ಕರಾಗವರು; ಅದರಾ ಮಗು ತನ್ನ
ತಾಯ ಕಂಡವಳ ಬಳಿ ಹೋಗಲಳತೊಡಗಿದುದು.
ಮಗುವನಿಳಿಸಿದನ್ಯಾಲನ್; ಮೇರಿ ನುಡಿದಳು ಇಂತು:
"ಓ ತಂದೆ ! ಇಂತು ಕರೆಯಲು ನೀನು ಒಪ್ಪಿದರೆ–
ನನಗಾಗಿ ಅಲ್ಲ, ವಿಲಿಯಮ್ಮಿಗಾಗಿಯು ಅಲ್ಲ,
ಈ ಮಗುವಿಗಾಗಿಯೂ ನಾ ಬೇಡಬಂದಿಲ್ಲ;
ನಾನು ಬಂದಿಹೆನಿಂದೂ ಡೋರಳ ಸಲುವಾಗಿ;
ಅವಳ ಕರೆದುಕೊ ಮತ್ತೆ; ನಿನ್ನ ಮೇಲತಿಶಯದ
ಪ್ರೀತಿ ಅವಳಿಗೆ. ಅಯ್ಯ, ವಿಲಿಯಮನು ಮಡಿದಂದು
ಎಲ್ಲರೊಡನೆಯು ಶಾಂತಿ ಭಾವನೆ ತೋರಿದನು;
ನಾ ಕೇಳಿದಾಗವನು, ನನ್ನ ಕೈ ಹಿಡಿದುದಕೆ
ತಾನೆಂದು ಮರುಗನೆಂದೆನ್ನೊಡನೆ ಹೇಳಿದನು–
ನಾನು ತಾಳ್ಮೆಯ ಮಡದಿಯಾಗಿದೆ; ಆದರೂ
ತಂದೆಗೆದುರಾಗಿ ತಾನಂತು ನಡೆದುದು ತಪ್ಪು
ಎಂದನಲ್ಲದೆ ಇಂತು ಹೇಳಿದನು: 'ಭಗವಂತ
ಅವನಿಗೊಳ್ಳೆಯದ ಮಾಡಲಿ–ನಾನು ಪಟ್ಟಿರುವ
ಕಷ್ಟಗಳನೆಂದಿಗೂ ಅವನರಿಯದೆಯೆ ಇರಲಿ.'
ಆಗ ಮೊಗದಿರುಹಿದನು, ತೀರಿಕೊಂಡನು–ನಾನು
ನಿರ್ಭಾಗ್ಯೆ, ದುಃಖಪಡುತಿಹೆ ! ಆಯ್ತು, ಇನ್ನೀಗ
ನನ್ನ ಮಗುವನು ನಾನು ಕರೆದುಕೊಳ್ಳುವೆ, ಅಯ್ಯ;
ಇಲ್ಲದಿರೆ, ಅವನನ್ನು ಕಠಿನಗೊಳಿಸುವೆ ನೀನು,
ತನ್ನ ತಂದೆಯ ನೆನಪ ಕಡೆಗಣಿಸ ಕಲಿಯುವನು;

ಅದರಿಂದ, ಡೋರಳನು ಮತ್ತೆ ಕರೆದುಕೊ, ಅಯ್ಯ;
ಮುನ್ನಿನಂತಿರಲೆಲ್ಲ."

ಮೇರಿ ನುಡಿದಳು ಅಂತು;
ಮುಖವ ಮರೆ ಮಾಡಿದಳು ಡೋರ ಮೇರಿಯ ಹಿಂದೆ.
ಕೋಣೆ ನೀರವವಿತ್ತು; ಇದ್ದಕಿದ್ದಂತೆಯೇ
ಮುದುಕ ಗದ್ಗದಿಸುತ್ತ ಹೇಳತೊಡಗಿದನಿಂತು:
"ತಪ್ಪು-ನನ್ನದು-ತಪ್ಪು, ನನ್ನ ಮಗನನು ನಾನು
ಕೊಂದಿರುವೆ. ನಾನವನ ಕೊಂದಿರುವೆ-ಆದರೆ,
ನನ್ನ ಮುದ್ದಿನ ಮಗನನವನ ಪ್ರೀತಿಸುತಿದ್ದೆ.
ಕ್ಷಮಿಸಲೆನ್ನನು ದೇವ !-ನಾ ತಪ್ಪು ಮಾಡಿರುವೆ.
ನನ್ನ ಮಕ್ಕಳೇ, ನನ್ನ ಮುದ್ದಿಡಿರಿ ಬನ್ನಿ."

ಆಗ ಮುದುಕನ ಕೊರಳಿಗೆಲ್ಲರೂ ಜೋಲಿಟ್ಟು
ಮುತ್ತಿಟ್ಟರವನನ್ನು ಹಲವು ಸಲ. ಅಂದವನ
ಸರ್ವಾಂಗ ಜರ್ಜರಿತವಾಯ್ತು ಎದೆಗುದಿಯಿಂದ.
ಮತ್ತೆ ಮರಳಿದುದವನ ಕೂರ್ಮೆ ನೂರ್ಮಡಿಯಾಗಿ;
ಮೂರು ಗಂಟೆಯ ಹೊತ್ತು ವಿಲಿಯಮ್‌ನ ಮಗುವಿಡಿದು
ರೋದಿಸಿದನವನು ವಿಲಿಯಮ್‌ನ ನೆನೆನೆನೆದು.

ಅಂತು ಆ ನಾಲ್ವರೂ ನೆಲಸಿದರು ಒಗ್ಗೂಡಿ
ಒಂದೆ ಮನೆಯೊಳಗೆ; ವರ್ಷಗಳು ಮುಂಬರಿಯೆ,
ಮೇರಿ ಮತ್ತೊಬ್ಬನನು ಮದುವೆಯಾದಳು; ಡೋರ
ಮದುವೆಯಿಲ್ಲದೆ ಬಾಳಿದಳು ತನ್ನ ಮರಣತನಕ.

೧೯೩೯]

# ಆ ಚಿತ್ರಗಳು

ಬೇಸಗೆಯಲೊಂದು ದಿನ
ನೇಸರುದಿಸಿದ ಬಳಿಕ
ಮನೆಯುಳಿದು ಹೊರಟು
ಗೊತ್ತುಗುರಿಯಿಲ್ಲದೆಯೆ
ಸುತ್ತುತಿರೆ ನಾನಂತು
ಹೊತ್ತು ಏರುತ ಬಂತು,
ಬಿಸಿಲು ಬಲವಾಯ್ತು.

ಉರಿಬಿಸಿಲಿನಲಿ ತಿರುಗಿ
ನಾ ಬಹಳ ಸೊರಗಿ
ನಡೆಯಲಾರದೆ ನಡೆದು
ಮನೆಗೆ ಬರುತಿರಲು
ಕಾಣಿಸಿದುದೆದುರಿನಲಿ
ಹೆಮ್ಮರದ ನೆಳಲು.

ಮರದಡಿಯ ನಾ ಸೇರಿ
ನಿಂತೆ ಕೆಲಹೊತ್ತು;
ನಿಂತೊಡನೆ ತಣ್ಣೆಳಲ
ತಂಪು ಬೇಗೆಯ ತವಿಸೆ
ದಾರಿ ನಡೆದಾಯಾಸ
ಇನಿಸು ಮರೆಯಾಯ್ತು.

ಎನಿತು ಹಿತ ತಣ್ಣೆಳಲು !–
ಬಿಸಿಲಿನಲಿ ಮೈಬೆಂದು
ನೆಳಲಿನಲಿ ಮುಳುಗೆ
ತಣ್ಣೆಳಲ ತಂಪಮದು

ತಿಳಿವುದೆಲ್ಲರಿಗೆ!
ಕ್ಷಣಿಕ ಸುಖವನು ಕಂಡು
ಸ್ವಲ್ಪ ಮೈಮರೆತೆ;
ಒಡನೆ ಎಚ್ಚರಗೊಂಡು
ಅಡಿಯನಿಡುತಿರಲು–
“ತುಸ ನಿಲ್ಲು, ಅಣ್ಣಾ”
ಎಂಬ ದನಿ ಕೇಳಿಸಿತು,
ನನ್ನ ನಿಲ್ಲಿಸಿತು.
ಯಾರು ಕರೆದವರೆಂದು
ನಾನರಿವ ಮುನ್ನ
ಆ ದೀನ ದನಿ ಬಂದು
ಮಿಡಿದುದೆಯನ್ನ.
ತಿರುಕನಿರಬೇಕೆಂದು
ತಿರುಗಿ ನೋಡಿದೆನು.

–ಜಡೆಗಟ್ಟಿ ಧೂಳಡರಿ
ಹಣೆ ಕಣ್ಣು ಕಿವಿಯ
ನಸುಮುಚ್ಚಿ ಮರೆಮಾಡಿ
ಹೆಗಲಮೇಲುರುಳಿ
ಸ್ವಾತಂತ್ರ್ಯದಿಂದೊಲೆವ
ಕೆಂಗುರುಳ ಹೊರಳಿ;
ಕುಡಿಮೀಸೆ, ಕಿರುಗಡ್ಡ ;
ತೊಟ್ಟ ಅಂಗಿಯ ಬಗೆಯ
ನೋಡಿ ಊಹಿಸಲರಿದು,
ತೊಟ್ಟರಿಯಬೇಕು;–
ಎಲ್ಲೆಲ್ಲಿಯೂ ಹರಿದು
ಮೈ ಕಾಣುತಿತ್ತು;
ತೆಳುಹಳದಿಯಾ ಬಟ್ಟೆ
ತಳೆದಿತ್ತು ಕಡುಗೆಂಪ

ಧೂಳಿನಲಿ ಪೊರೆದು.
ಅವನುಟ್ಟ ಪಂಚೆಯೊ!
ಪಂಚೆಯೆಂದೆನೆ ಹಿರಿದು,
ತುಂಡುಬಟ್ಟೆಯ ಚೂರು;
ಹರುಕುಗಳೊ ನೂರಾರು !
ಮೇಲೆ ಮೊಣಕಾಲ್‌ವರೆಗೆ,
ಬರಿಕಾಲು ಕೆಳಗೆ.
ಅವನ ದನಿಯೊಳಗಿದ್ದ
ದೈನ್ಯ ಮೊಗದೊಳಗಿಲ್ಲ.
'ಕಾಸು ಕೊಡಿ' ಎಂದೆನುವ
ಬೇಡಿಕೆಯದಿಲ್ಲ.
ಅವನ ಮೊಗದೊಳದೇನೊ
ಉಕ್ಕಿ ಹರಿಯುವ ಹೆಮ್ಮೆ,
ಏನೊ ಗೆಲವಿನ ನೋಟ;
ಉಸಿರಬೇಕೆಂದೆನುವ
ತುಟಿಗಳಲುಗಾಟ.
ಇಂತವನ ಬಗೆಗಂಡು
ನಾ ಬೆರಗುಗೊಂಡು
ನಿಂತಿರಲು ಕದಲದೆಯೆ
ಅವನೆದ್ದುಬಂದು
ಕಾಗದದ ಕಟ್ಟೊಂದ
ಕೈಗೆ ನೀಡಿದನು,
ಬೀಗುತ್ತ ಹರುಷದಲಿ
ನನ್ನ ನೋಡಿದನು.

ಈಸಿಕೊಳ್ಳದೆ ಅದನು
ಏನೆಂದು ಕೇಳೆ,
ಸೂಸುವಾನಂದದಲಿ
ಉಸಿರಿದನು ಇಂತು;

"ನನ್ನ ಬದುಕಿನ ಸಾರ,
ನನ್ನ ಜೀವಾಧಾರ!
ಹೆಚ್ಚು ಬಣ್ಣಿಸಲೇಕೆ?
ಕೈಗೆ ಕೊಳ್ಳಿರಿ ಮೊದಲು,
ಬಿಚ್ಚಿ ನೋಡಿರಿ ಸ್ವಲ್ಪ;
ತಿಳಿಯುವುದು ಅದರ ಬೆಲೆ,
ಹರಿಯುವುದು ಹರುಷಹೊಳೆ !
ನನ್ನ ಸಿರಿಯನು ಕಂಡು
ಅದರ ಸವಿಯನು ಉಂಡು
        ಕರುಬುವಿರಿ, ಗೊತ್ತು !
ಗೊತ್ತೆನಗೆ, ಅದು ಗೊತ್ತು!"–
ಎನುತ ಹರುಷವು ಮಿಕ್ಕು
ಅವನು ಬಿರಿನಗೆ ನಕ್ಕು
        ಮತ್ತದನು ನೀಡೆ,
ನಾನದನು ಕೈಕೊಂಡು
ಕಟ್ಟಿನೊಳಗಡಗಿರುವ
ಅಷ್ಟು ಸಿರಯೇನೆಂದು
ಕೇಳಲುತ್ತರಗೊಡದೆ
ಬಾಯ್ದೆರೆದು ಪಲ್ದೋರಿ
"ಹಿಹಿ" ಎಂದು ನಗೆಬೀರಿ
        ಸುಮ್ಮನಿರಲವನು,
ಏನು ಸಂಶಯವಿಲ್ಲ
ಹುಚ್ಚನೇ ಇವನು
ಎಂಬ ನಿರ್ಧಾರ ಮನದಿ
        ನಾಟಿದುದು ಒಡನೆ.
ಬೀದಿಯೊಳಗಲ್ಲಲ್ಲಿ
ದೊರೆತ ಪುಡಿಹಾಳೆಗಳ–
ನಾಯ್ದು ಕಟ್ಟಿಹನು!
ಇದುವೆ ಬದುಕಿನ ಸಾರ!

ಇವನ ನಿತ್ಯಾಹಾರ !–
        ಎಂದು ತೋರಿದುದು.
ಆದರೇನಿರಬಹುದೊ
ನೋಡಬೇಕೆಂದೆನಗೆ
ತುಸ ಕುತೂಹಲವಾಗೆ,
ಅದ ಬಿಚ್ಚಿದೆನು ಕೊನೆಗೆ.
ನಾ ಕಂಡುದೇನಲ್ಲಿ !
ಕಸದ ಗುಂಡಿಯಿದೆಂದು
ಮೊದಲುಪೇಕ್ಷಿಸಿ ಅಲ್ಲಿ
ಕಸವರವ ಕಂಡಂತೆ;
ಕೆಸರುಗೊಳದುದರದಲಿ
ಕಮಲವನು ಕಂಡಂತೆ;
ಕೆದರುಗುರುಳಿನ ನಡುವೆ
ನಗೆಮೊಗವ ಕಂಡಂತೆ;
ಆ ಹುಚ್ಚನೆನಗಿತ್ತ
ಆ ಕಸದ ಕಂತೆಯಲಿ
ಕಲೆಯ ಕಣಿಯನು ಕಂಡೆ,
        ರಸದ ರುಚಿ ಸವಿದೆ.
ಬಿಚ್ಚಿದೊಡನೆಯೆ ಕಂಡ
        ಚಿತ್ರವನು ನೋಡಿ
ಅಚ್ಚರಿಯ ಮೌನದಲಿ
        ನಲಿದೆ ಕೊಂಡಾಡಿ.
ಒರಟು ಕೊಳೆಹಾಳೆಯಲಿ
ಬರಿಯ ರೇಖೆಗಳಿಂದ
        ಬರೆದ ಚಿತ್ರವದು
ಒಬ್ಬ ನವಯುವತಿಯದು;–
ವರ್ಣವೈಖರಿಯಿಲ್ಲ,
        ಬಿಂಕ ಬೆಡಗಿಲ್ಲ;
ಸರಳತೆಯ ಸೋನೆಯನು

ಕರೆಯುತಿಹ ಮುದ್ದುಮೊಗ;
ಎಸಳುಮೂಗಿನ ಮಾಟ.
ತುಂಬುಪ್ರೇಮದ ನೋಟ;
ನಗೆಯ ಬಿರಿಮುಗುಳ ಸಿರಿ,
ಬಗೆಗೊಳ್ವ ಕಬರಿ;
ಒಪ್ಪುವಿಟ್ಟಂತಿವಕೆ
ನಸುನಾಣ ಲಹರಿ.
ಆ ರೂಪು ! ಆ ಚೆಲುವು !
ಮಾತುಗಳ ಮಿತಿಯಿಂದ
ಆ ಮನೋಹರ ರೂಪ
ಹೆಚ್ಚು ಬಣ್ಣಿಸಲರಿದು.
ಹೆಚ್ಚೇಕೆ ? ಆ ಚಿತ್ರ
ಅಂದೆನ್ನ ಚಿತ್ತವನು
ಕವರ್ದುದೊರ್ಮೊದಲೆ.

ಇನಿತು ಸುಂದರವಾಗಿ
ಭಾವಪೂರಿತವಾಗಿ
ಬರಿಯ ರೇಖೆಗಳಿಂದ
ಬರೆದ ಚಿತ್ರಗಳನ್ನು
ನಾನು ನೋಡಿರಲಿಲ್ಲ.
ಎಳೆಯತನದಿಂದೆನಗೆ
ಚಿತ್ರಕಲೆಯಲಿ ಹುಚ್ಚು,
ಕಲೆಗಾರನಾಗುವೆನು
ಎಂಬ ಹುಸಿನಚ್ಚು.

–ಅದರಿಂದ ಅಂದೆನಗೆ
ಚಿತ್ರಗಳನೆಲ್ಲ
ನೋಡಲು ಕುತೂಹಲವು
ಜನಿಸೆ ಹೆಚ್ಚಲ್ಲ.

ಒಂದು ಹಣ್ಣನು ತಿಂದು
ಮರದ ಹಣ್ಣಗಳಿಂತೆ
        ಎಂದು ಬಗೆವಂತೆ,
ಎಲ್ಲವಾ ಚಿತ್ರಗಳು
ನಲ್ಲವಿರಬೇಕೆಂದು
        ನಾನೂಹಿಸಿದೆನು;
ಒಂದೊಂದು ಚಿತ್ರವನು
        ನೋಡತೊಡಗಿದೆನು.

ಆ ಚಿತ್ರಮಾಲೆಯಲಿ
ಕೆಲ ಚಿತ್ರಗಳನುಳಿಯೆ,
        ತರುಣಿಯೊಬ್ಬಳವೇ
ಉಳಿದುವೆಲ್ಲವು ಎಂದು
        ನನಗೆ ತೋರಿದುದು.
ಚಿತ್ರಪ್ರಮಾಣಗಳು,
ಅಂಗವಿನ್ಯಾಸಗಳು
        ವಿವಿಧ ರೀತಿಯವು:
ಒಂದರೊಳು ಹೂಮುಡಿದ
        ಬಟ್ಟ ನಲ್ದುರುಬು;
ಒಂದರೊಳು ನಿಡಿದಾದ
        ಜೋಲ್ವ ಕುರುಳು ;
ಒಂದರಲಿ ಕಡೆನೋಟ,
ಒಂದರಲಿ ನಗೆನೋಟ ;
ಒಂದರಲಿ ಕೊಂಕುದಟು,
ಒಂದರಲಿ ಬಿಟ್ಟ ತುಟಿ'
ಬಗೆಬಗೆಯ ವಿನ್ಯಾಸ ;
ಇಂತೆನಿತೊ ವ್ಯತ್ಯಾಸ;
ಆದರೂ ಮುಖವೊಂದೆ,
        ಮುಖಭಾವವೊಂದೆ,

ನೋಡಿದನಿತನಿತೆಲ್ಲ
ವ್ಯತ್ಯಾಸಗಳ ಮರೆಸಿ,
ಒಂದೆ ಕಳೆಯನು ಹರಿಸಿ
ಅಚ್ಚೊತ್ತಿದಂತೆಸೆವ
ಸಾಮ್ಯಭಾವ.
ಏನಿದೇನಿದು ಹುಚ್ಚು !
ಒಂದೆ ಚಿತ್ರವನಿವನು
ಎನಿತು ಸಲ ಬರೆದಿಹನು
ಬೇಸರಿಲ್ಲದೆಯೆ?–
ಎಂದು ಅಚ್ಚರಿಯಾಯ್ತು.
ಈ ಚಿತ್ರಗಳನೆಲ್ಲ
ಬರೆದವನು ಇವನೆ?–
ಎಂಬ ಸಂಶಯ ಬೇರೆ
ಮನವ ಕೆಣಕುತಿರೆ,
"ಈ ಕೆಲವು ಚಿತ್ರಗಳು
ತರುಣಿಯೊಬ್ಬಳವಲ್ತೆ?
ಇವುಗಳನು ಬರೆದವನು
ನೀನೆ ಅಹುದೇನು?"
ಎಂದು ಆ ಹುಚ್ಚನನೆ
ಕೊನೆಗೆ ಕೇಳಿದೆನು.

ಯಾರು ಬರೆದವರೆಂದು
ಕೇಳಿದೊಡನೆಯೆ ಕನಲಿ,
ಕಣ್ಣುಗಳು ಕೆಂಪೇರೆ,
ಹಲ್ಲುಗಳ ಕಡಿಕಡಿದು
ಬಲವಾಗಿ ಉಸಿರೆಳೆದು
ನುಡಿದನಿಂತು :
"ಯಾರೆಂದು ಕೇಳುವಿರ?
ಯಾರೆಂದು ಕೇಳುವಿರ ?

ನಾನಲ್ಲದಿನ್ನಾರು ?
ನನ್ನನುಳಿದವಳನ್ನು
    ಯಾರು ಕಂಡಿಹರು ?
ನನ್ನನುಳಿದವಳೊಲವ
    ಯಾರು ಸವಿದಿಹರು?
ಅವಳ ಆ ನಲ್‌ಬಿಂಬ
ಕಟ್ಟಿಹುದು ಕಣ್‌ತುಂಬ:
ಆ ಮನೋಹರ ರೂಪು !
ಒಯ್ಯಾರ, ಒನಪು !
ಕಾಮ ಕಲಿಸಿದ ಬಿಜ್ಜೆ–
    ಅವಳ ನಸುಲಜ್ಜೆ!
ಆ ಚೆಲುವು, ಅವಳೊಲವು–
ನಾ ಬಲ್ಲೆ, ನಾ ಬಲ್ಲೆ;
    ನಾನೊಬ್ಬ ಬಲ್ಲೆ....
    ಹಾ ! ನನ್ನ ನಲ್ಲೆ !"
ಎಂದು ನಿಟ್ಟುಸಿರೆಳೆದು
ತುಸ ಮೌನವನು ತಳೆದು
ಕಣ್ಣನರೆಮುಚ್ಚಿ
ತಾನುಸರಿತೊಡಗಿದನು
ತನ್ನ ಕಥೆ ಬಿಚ್ಚಿ:

"ಒಬ್ಬಳವೆ ಇವು ಎಲ್ಲ,
ನಿನ್ನ ನುಡಿ ಸಟೆಯಲ್ಲ.
ಸುಂದರೀಮಣಿಯವಳು
    ಹಿಮದೆ, ಬಲುಹಿಂದೆ,
ನನ್ನ ಬಾಲ್ಯದ ಕೆಳದಿ;
    ಯಾರವಳ ಮುಂದೆ
ಚೆಲುವಿನಲಿ, ಜಾಣ್ಮೆಯಲಿ?
ಅವಳೊಡನೆ ಎನ್ನಾಟ;

ಅವಳೆ ಹೂದೋಟ-
ಅಲ್ಲೆನ್ನ ಬಾಳರಲಿ
ಮೊದಲು ಹೂವಾಯ್ತು;
ಅವಳ ಸಾನ್ನಿಧ್ಯವೇ
ಹೊಂಬಿಸಿಲ ಹೊನಲಾಯ್ತು;
ಅವಳೊಲವೆ ಹೊಯ್ನೀರು,
ಅವಳ ನಗೆನೋಟವದು
ತುಂಬುತಿಂಗಳ ಬೆಳಕು;
ಅವಳ ಒಲವಿನ ಕಿಡಿಯೆ
ನನ್ನ ಬಾಳಿನ ಬೆಳಕು.
ಯಾರ ಕೆಳದಿಯೊ ಇಂದು,
ಯಾರ ಮಡದಿಯೊ ಇಂದು?
ಯಾರ ನಲವಿಗೆ ತಾನು
ನಗುತ ನಲಿಯುವಳೊ?
ಯಾರ ಬೆಡಗಿಗೆ ಸೋತು
ಅವನನೊಲಿಯುವಳೊ?
ಯಾವನ ವಿಲಾಸಕ್ಕೆ
ತಾನಿಂದು ಮೆರೆಯುವಳೊ?
ಯಾರ ಪ್ರೇಮವ ಸುಲಿಯೆ
ನನ್ನ ಮರೆಯುವಳೊ?
ಅಯ್ಯೊ, ನಾನರಿತಿಹೆನೆ !
ಅರಿಯದಿರುವುದೆ ಮೇಲು,
ಅರಿಯೆ ಹೃದಯದ ಶೂಲ;
ಅರಿಯಮೆಯೆ ಸೌಖ್ಯ.
ಅಂತು, ಇಂದವಳ ಕೆಳೆ
ನನಗಿಲ್ಲ, ಇಲ್ಲ.
ಜತೆಗೂಡಿ ಹರಿದ ಹೊಳೆ
ಬೇರಾದುದಲ್ಲ!
ಅವಳಿಲ್ಲದಿರಲೇನು?

ಹೂವು ಎಲ್ಲಿರಲೇನು
ಅದರ ಪರಿಮಳವಿರಲು?
ಅವಳೊಲನೆ ಸಾಕೆನಗೆ,
        ಅವಳೊಲನೆ ಬೆಳಕು.
ಅವಳ ರೂಪೊಂದೇಕೆ–
ಅವಳ ಸರ್ವಸ್ವವೇ
ನನ್ನ ಬಗೆಗೊಳದಲ್ಲಿ
        ಬಿಂಬದಂತಿಹುದು.
ಎಲ್ಲಿ ಹೋಗಿಹಳವಳು?
ಎಲ್ಲಿ ಹೋಗಿಹಳವಳು?
ನನ್ನಲ್ಲಿಯೇ ಇಹಳು–
ನನ್ನ ಹೃದಯದಲಿಹಳು
        ಚೆಲುವಿನಣಿಯಾಗಿ;
ನನ್ನ ಕಣ್ಣೊಳಗಿಹಳು
        ಕಣ್ಣ ಮಣಿಯಗಿ;
ನನ್ನ ಕೈಯೊಳಗಿಹಳು
        ಕಲೆಯ ಕಣಿಯಾಗಿ.
ನಾನು ಮನಮಾಡಿದರೆ
ಎದ್ದುಬರುವಳು ಕುಣಿದು;
ನಾನವಳ ಕರೆಕರೆದು
        ನಲಿಯುವೆನು ತಣಿದು.
ಒಂದು ಚಿತ್ರವ ಬರೆಯೆ
        ಅವಳ ಕರೆದಂತೆ;
ಬರೆಬರೆಯುತವಳೊಡನೆ
        ನಾನು ನೆಲೆದಂತೆ.
ಎಷ್ಟು ಸಲ ಬರೆದಿಹೆನು,
ನೋಡು, ನಲ್ಲೆಯನು?
ಪರಿಪರಿಯ ಭಂಗಿಯಲಿ,
ಬಗೆಬಗೆಯ ಭಾವದಲಿ

ಅವಳ ಬರೆದಿಹೆನು.
ಒಂದರಲ್ಲಿಯು ಕೂಡ
ಒಂದು ತಪ್ಪಿಲ್ಲ;
ಆದರೇತಕೊ ನನಗೆ
ಒಂದು ಒಪ್ಪಿಲ್ಲ.
ತುಂಬುಚೆಲುವನು ಸೂಸಿ
ಮೋಹಜಾಲವ ಬೀಸಿ
ಬಗೆಸೂರೆಗೊಳಬಲ್ಲ
ನನ್ನ ನಲ್ಲೆಯ ಚಿತ್ರ
ಕೈಗಿನ್ನು ಸಿಕ್ಕಿಲ್ಲ.
ನನ್ನ ಆದರ್ಶದಲಿ,
ನನ್ನ ಸ್ಮೃತಿಸದನದಲಿ
ನೆಲಸಿಹುದು ಕೆತ್ತಿ;
ನಾನದನು ಬಿಡುವವನೆ?
ತೋರುವೆನು ಮೇಲೆತ್ತಿ.
ಕಲೆಯ ಬಲೆಯಲ್ಲದನು
ಬಿಗಿಯದಿರೆ ನಾನು
ನನ್ನ ಈ ಬದುಕೇಕೆ?
ಏನಿದ್ದು ಏನು?
ಅದಕಾಗಿ ಅರಸುವೆನು.
ಎಲ್ಲಿದ್ದರೂ ಸರಿಯೆ,
ಕಲೆಯ ಕಣ್ಣಿಯ ಬೀಸಿ
ಅದನು ಬರಿಸುವೆನು.
ಅಂದು ಅವಳೆಂದೆಂದು
ನನ್ನ ಪಟ್ಟದ ರಾಣಿ !
ಅಲ್ಲವೇ ಗೆಳೆಯಾ,
ಅಲ್ಲವೇ ಹೇಳು?"–
ಎಂದಲ್ಲಿಗೇ ನಿಲಿಸಿ
ನನ್ನ ನೋಡಿದನೊಮ್ಮೆ;

ಮುಖವನಾವರಿಸಿತ್ತು
ಏನೊ ಗೆಲವಿನ ಹೆಮ್ಮೆ;
ಕಥೆ ಮುಗಿಯುತಿರಲೊಡನೆ
ಅವನ ಕಣ್ಣುಗಳೆರಡು
ಥಳಥಳಿಸಿದುವು ತೊಳಗಿ
ಉರಿಗೆಂಡದಂತೆ.
ಅವನ ನೋಟದಲೆನ್ನ
ಕಣ್ಣು ಕೀಲಿಸಿಹೋಗಿ,
ಮಾತಳಿದು ಮೌನದಲಿ
ನಿಂತೆ ಬೆರಗಾಗಿ.
ಅಂತೆಯೇ ಅವನಲ್ಲಿ
ಪೂಜ್ಯಭಾವನೆಯಾಯ್ತು.
ಅವ ಹುಚ್ಚನೆಂದೆಂಬ
ಭಾವನೆಯೆ ಹೋಯ್ತು.
ಹುಚ್ಚನಾದೊಡಮೇನು?
ಅವನ ಹುಚ್ಚಿನ ಪರಿಯ–
ನೆಲ್ಲರರಿತಿಹರೆ?
ಅವನ ಹುಚ್ಚಿನ ಫಲದ
ಸವಿಯ ಸವಿದಿಹರೆ?
ಆ ಹುಚ್ಚನನುಭವದ
ಸಾರವನು ನಾ ಕಂಡೆ;
ಅವನ ಹುಚ್ಚಿನ ಹೂತ
ಹೂವುಗಳ ಕಂಡೆ.
ಅದರಿಂದ ಹುಚ್ಚನಲಿ
ಬಹಳ ಮೆಚ್ಚಾಯ್ತು;
ಅವನ ಹುಚ್ಚಿನಲೆನಗೆ
ಭಕ್ತಿ ಹೆಚ್ಚಾಯ್ತು.

ಬೀಳ್ಕೊಳುವ ಮುನ್ನ ನಾ–
ನವನ ಕೊಂಡಾಡಿದೆನು;
ಆ ಕಲಾರತ್ನಗಳ–
ಲೊಂದ ಬೇಡಿದೆನು.
"ಲೇಸಾಯ್ತು! ಲೇಸಾಯ್ತು!
ಈಸು ಹೊತ್ತಿದಕಾಗಿ
ನಿಂತೆಯೇನಣ್ಣಾ . . . !
ನನ್ನ ರನ್ನೆಯ ಚಿತ್ರ
ನಿನ್ನ ಸೋಂಕಿಸಲಹುದೆ!
ಹೊನ್ನು ಸುರಿದರು ನಾನು
ಒಂದನೂ ಕೊಡೆನು !
ನಿನ್ನ ದಾರಿಯ ಹಿಡಿದು
ಹೊರಡಣ್ಣ, ಇನ್ನು"
ಎಂದು ಹುಚ್ಚನು ಕೆರಳಿ
ನುಡಿಯಲಾ ಗಳಿಗೆಯಲಿ
ನಡೆದೆ ಹಿಮ್ಮರಳಿ.

ಅವನು ಒಡಲನು ನೀಗೆ
ಯಾರು ಕೇಳುವರವನ
ಚಿತ್ರಗಳ ಕೊನೆಗೆ ?
ಇಂತಿ ಈ ಚಿತ್ರಗಳು
ಅವನೊಡನೆಯೇ ಅಳಿಯೆ
ನಷ್ಟವಲ್ಲಾ ಇಳೆಗೆ?–
ಎಂದು ಚಿಂತಿಸುತ, ಬಗೆ–
ಹರಿಯದಿರೆ ನನಗೆ,
ಚಿಂತೆಯಲೆ ತಲೆಬಾಗಿ
ಸಾರಿದೆನು ಮನೆಗೆ.

ಆ ಹುಚ್ಚನನು ಮರಳಿ
ನಾ ಕಂಡುದಿಲ್ಲ;
ಆದರಾ ಚಿತ್ರಗಳ–
ನಿನ್ನು ಮರೆತಿಲ್ಲ.
ಹುಚ್ಚು ಹಿಡಿದಲ್ಲದೆಯೆ
ಕಲೆಯ ಕೈಸಾರದೊಡೆ,
ಹುಚ್ಚು ಹಿಡಿದರು ಸರಿಯೆ,
ಎನ್ನೊಳಾ ಚಿತ್ರಕಲೆ
ಚಿಗುರಿ ನೆರೆ ಮೆರೆಯೆ.

೧೯೩೨]

## ದಾದಿ ರನ್ನೆ

ಕೆಂಪು ತಿರುಗಲು ಪಡುದೆಸೆಯ ಮೊಗ
ಹಕ್ಕಿಗಳು ಹಾರಿದುವು ಹಾಡುತ,
ಸಂಜೆಗೆಂಪಿನ ಸೊಬಗ ಸಾರುತ
ದಿಕ್ಕುದಿಕ್ಕಿನಲಿ;
ಚೆಲ್ಲಿದಾರತಿಯಲ್ಲಿ ಹುದುಗಿದ
ಮುತ್ತುಗಳೊ ಎನೆ ಮಿನುಗೆ ತಾರೆಗ–
ಳತ್ತ ಬಾನೊಳು ಮೇಲೆ ಚಂದಿರ
ಮೂಡಿ ಬೆಳಗಿದನು.

ಇಂತು ಸಂಜೆಯು ಸೊಗಸ ಸೂಸಲು,
ಉದಯಸಿಂಹನು ತನ್ನ ಗೆಳೆಯನ
ಜೊತೆಯೊಳಿದ್ದನು ಆಟವಾಡುತ
ಮಾಳಿಗೆಯ ಮೇಲೆ–
ಉದಯಸಿಂಹನು ರಾಜನಾದನು :
ಮರದ ಕುದುರೆಯನೊಂದನೇರಿ,

ಕರೆದು ಗೆಳೆಯನ,–"ಕೇಳು, ಭಾಲ,
ನಾನು ರಾಜನು; ನೀನು ಮಂತ್ರಿ;
ಇಂದು ಚಂದಿರನನ್ನು ಗೆಲ್ಲುವ,
ಸೈನ್ಯವನು ಅಣಿಮಾಡು ಯುದ್ಧಕೆ"
ಎಂದು ಅಣತಿಯಿತ್ತನು.

ಭಾಳ ಮುಂಗಡೆ ಬಂದು, ನಮಿಸುತ,
"ಸೈನ್ಯವೇತಕೆ? ಕೇಳಿ ರಾಜರೆ:
ನಿಮ್ಮ ಕುದುರೆಯ ನನಗೆ ಕೊಟ್ಟರೆ.
ಏರಿ ಕುದುರೆಯ, ಹಾರಿ ಹಿಡಿವೆನು
ಚಂದಿರನ, ನೋಡಿ"
ಎಂದು ನುಡಿದನು.–ಇವರ ಆಟವ
ನೋಡುತಲ್ಲಿಯೆ ಪನ್ನೆಯಿದ್ದಳು:
ಸ್ವಲ್ಪ ಎತ್ತರ ತೆರನ ಹೆಂಗಸು;
ರಾಜಪುತ್ರರ ವೀರ ರಕ್ತದ
ಕೆಂಪು ಛಾಯೆಯು ಅವಳ ಮೊಗದಲಿ
ಹೆಚ್ಚಿ ಹೊಳೆಯಿತು ಸಂಜೆಗಂಪನು
ತಳೆದು ಹೊಗರೇರಿ.
ಬಾಲಕೇಳಿಯ ನೋಡಿ ಹಿಗ್ಗುತ
ಹರುಷಗಡಲೊಳು ಮುಳುಗಿಹೋದಳು;–
"ದೈವಕೃಪೆಯಿರೆ ಮುಂದೆಯೂ ಒಡ–
ಗೂಡಿ ಬಾಳಿರಿ ಸುಖದಲಿ.
ಉದಯಸಿಂಹನು ರಾಜಪದವಿಯು–
ಲಿರಲು ಎನ್ನಯ ಪುತ್ರನವನನು
ಸೇವಿಪುದ ನಾನೆಂದು ನೋಳ್ಪೆನೊ!"
ಎಂದು ಹಂಬಲಿಸಿದಳು ಮನದಲ್ಲಿ.

ಉದಯಸಿಂಹನನೊಮ್ಮೆ ನೋಡುತ–
"ಹಿಂದೆ ನಿನ್ನಯ ಮಾತೆ ಕರ್ಣಾ–

ವತಿಯು ನಿನ್ನನು ನನಗೆ ಒಪ್ಪಿಸಿ:
'ನನ್ನ ಪನ್ನೆಯೆ, ದಾದಿ ರನ್ನೆಯೆ,
ನಿನ್ನ ಮಗನೊಡನೆನ್ನ ಮಗನನು
ಸಲಹು ಕರುಣದಲಿ.
ಬೇರೆ ದೈವವೆ ಪತಿಯನುಳಿದು?
ಆರು ಗತಿಯೆನಗಿನ್ನು ಮುಂದೆ?
ವೈರಿಗಳ ಹಂಗಿನಲಿ ಬಾಳ್ವೆನೆ?
ಸೇರುವೆನು ಸಗ್ಗದಲಿ ಪತಿಯನು'
ಎಂದು ದುಮುಕಿದಳಗ್ನಿಗೆ.
ನಿನ್ನ ಸಾಕಿದೆನಂದಿನಿಂದ,
ನಿನ್ನ ಹಿತವನೆ ಕೋರುತಿರುವೆನು;
ನಿನ್ನನುಳಿದೆನಗೆನ್ನ ಪುತ್ರನೆ?
ನೀನೆ ಹಿರಿ ಮಗನು.
ಜಗವ ಕಾವನೆ ನಿನ್ನ ಕಾವನು,
ಜಗದೊಡೆಯನನೆ ನಂಬಿಕೊಂಡಿಹೆ"
ಎಂದು ಮನದಲಿ ದೇವನನು ಕೈ–
ಮುಗಿದು ಬೇಡಿದಳು.

ಬಾಲಚಂದ್ರನ ಕಾಂತಿಯೊಡನೆಯೆ
ಬಾಲಕೇಳಿಯು ಹೆಚ್ಚಿ ಮೆರೆಯಿತು;
ಪನ್ನೆಗೊಮ್ಮೆಯೆ ಹರುಷವುಕ್ಕಿತು,
ಉಕ್ಕಿ ಹೊನಲಾಯ್ತು:
ಕ್ಷಣದಿ ಓಡುತ ತಬ್ಬಿಕೊಂಡಳು
ಜೊತೆಯ ಬಾಲರನೊಂದೆ ತಬ್ಬಿಗೆ;
ಕೊನೆಗೆ ಹರುಷಾರಣ್ಯದಲಿ ತಾ
ಹೊಲಬು ತಪ್ಪಿದಳು.

ಮುಗಿಲು ಮುಸುಕಿತು ಚಂದ್ರಬಿಂಬವ;
ಕ್ಷಣದಿ ಕಾವಳ ಕವಿಯಿತೆಲ್ಲೆಡೆ;

ತಾರೆಯುದುರಿತು, ನೆಲವೆ ಅದುರಿತು:
ಪನ್ನೆ ಎಚ್ಚತ್ತೆದ್ದು ಬೆಚ್ಚಿದಳು!
"ಪನ್ನೆ, ಎಲ್ಲಿಹೆ? ಪನ್ನೆ, ಪನ್ನೇ !
ಏಳು, ಜಾಗ್ರತೆ, ಜೋಕೆ, ತುಸ ಬಾ !"
ಎಂದು ಕಳವಳದಿಂದ ನುಡಿದನು
ರಾಜಸೇವಕನೊಬ್ಬನು.
"ಉದಯಸಿಂಹ, ಭಾಳನೊಡನಿರು"
ಎಂದು ಹೇಳುತ ತನ್ನ ತಮ್ಮನ
ಬಳಿಯನೈದುತ–"ಏಕೆ ಕಳವಳ?
ಹೇಳು, ಹದನೇನಿಂದು ಅಜಿತ?"
–ಪನ್ನೆ ಕೇಳಿದಳು.
"ಅಯ್ಯೊ ! ಹಾ, ಹಾ! ಏನು ಹೇಳಲಿ?
ಉದಯಸಿಂಹನನೆಂತು ಕಾವುದು?
ಖೂಳನಾ ಬನಬೀರ ಬರುವನು–
ರಾಜಕುವರನ ಕೊಲೆಗೆ ಬರುವನು.
ಮುಂದೆ ಗತಿಯೇನು?"
ಎಂದು ನುಡಿದನು ನುಡಿಯಲಾರದೆ,
ನಿಂತೆಡೆಯೆ ಕದಲದೆಯೆ ನಿಂತನು
ಮೌನಶೋಕದಲಿ.

ಗುಡಿಯ ಕೇಳುತ ಬೆಚ್ಚಿದಳು, ಬಲು
ಬೆದರಿದಳು, ಭಯಭ್ರಾಂತಳಾದಳು;
ತಿಳಿದು ತನ್ನೊಳು ತಾನು, ಮುಂದನು
ಚಿಂತಿಸುತ, ಮನದಂದು ನುಡಿದಳು
ಧಾತ್ರಿ ಧೃತಿವಂತೆ :
"ಅಜಿತ, ಕಾಲವ ಕಳೆಯಲಾಗದು.
ಬುಟ್ಟಿತುಂಬ ಹಣ್ಣುಹಂಪಲ
ಕೊಂಡು ಜವದಿಂದೋಡಿಬಾರೈ"
ಎಂದು ಬೆಸಸಿದಳು.

ಬರಿದೆ ನುಡಿಯುತ ಕಾಲ ಕಳೆಯದೆ
ಅಜಿತ ಹೊರಟನು; ಇತ್ತ ಪನ್ನೆ
ಉದಯಸಿಂಹನ ಬಳಿಯ ಸಾರುತ
"ಮುದ್ದುಕುವರನೆ, ಬಾರ ಬಾ ಬಾ"
ಎಂದು ಎತ್ತಿದಳಪ್ಪುತ.

"ಬೆಳ್ಳಿ ಹೊಳೆಯಲಿ ಹೊನ್ನ ಮೀನು ;
ನೀಲಿ ಬಾನೊಳು ತೊಳಗಿ ಬೆಳಗುವ,
ಪುಟ್ಟ ರೆಕ್ಕೆಯ ಬಡಿದು ಹಾರುವ,
ಹಾರಿ ಏರುವ ಮಕ್ಕಳು;
ಕೆಂಪು ಹೂಗಳು ಪಚ್ಚೆಗಿಡದಲಿ;
ಮಿಂಚುಹೊಳಪಿನ ಹಣ್ಣು ಗೊಂಚಲು;
ಹೂವ ಬಳಸಿಹ ಹೊನ್ನ ಚಿಟ್ಟೆ;
ಹಣ್ಣ ಸುತ್ತಲು ಹಾರಿ ನಲಿಯುವ,
ನಲಿಯುತುಲಿಯುವ ಬಣ್ಣಹಕ್ಕಿ:
ಇವನು ನೋಡಿಹೆಯ?
ಇವುಗಳಲ್ಲದೆ, ನವಿಲು ಕೋಗಿಲೆ
ಹಂಸೆ ಗಿಳಿ ಗೊರವಂಕ ಹೊರಸು
ಜಿಂಕೆ ಮೊಲ ಸಾರಂಗ ಮಂಗ
ತುಂಬಿರುವ ತೋಟವನು ನೋಡುವೆ,
ಕಕ್ಕ ಬರಲಾಮೇಲೆ ಹೋಗುವೆ"
ಎಂದು ಉದಯನ ಮನದೊಳಾಸೆಯ
ಬಿತ್ತಿ ಬೆಳಸಿದಳು.
ಉದಯ ಹಿಗ್ಗುತಲಿರಲು, ಅಜಿತನು
ಹಣ್ಣುಬುಟ್ಟಿಯ ಹೊತ್ತು ತಂದನು;
ಪನ್ನೆಯನು ಕೈಸನ್ನೆಮಾಡುತ
ಬಳಿಗೆ ಬರೆ ಕರೆದ.
ರಾಜಕುವರನನೆತ್ತಿಕೊಂಡೇ
ಪನ್ನೆ ತಮ್ಮನ ಬಳಿಯ ಸೇರಲು,

"ಅಮ್ಮ ಹೋಗುವೆ ಎಲ್ಲಿ"ಗೆನ್ನುತ
ಭಾಳ ಬೆಂಬಿಡಿದ.
ರಾಜಕುವರನನಿಳಿಸಿ ಪನ್ನೆ
ತನ್ನ ಕುವರನನೆತ್ತಿಕೊಂಡಳು:
"ಭಾಳ, ನಿನ್ನನು ಬಿಟ್ಟು ಎಲ್ಲಿಗೆ
ನಾನು ಹೋಗುವೆ, ಕಾಣೆಯ?
ಹಣ್ಣುಗಳ ಜೊತೆಯಲ್ಲಿ ಉದಯನು
ಗುಡಿಗೆ ಹೋಗುವನವನು ಮರಳಿ
ಬರುವವರೆಗೂ ನೀನೆ ರಾಜ:
ಅವನ ಕುದುರೆಯ ನೀನೆ ಏರುವೆ"
ಎಂದು ಕಿವಿಯಲ್ಲೊರೆದಳು.
"ಎಲ್ಲವೂ ಸುಳ್ಳೆಲ್ಲ ಸುಳ್ಳು;
ಉದಯನೊಡನೆಯೆ ನಾನು ಹೋಗುವೆ;
ಅವನ ಬಿಟ್ಟೊಂಟಿಯಲಿ ನಾನರೆ–
ಗಳಿಗೆ ಇರಲಾರೆ"–
ಎಂದ ಮಾತನು ಪನ್ನೆ ಕೇಳುತ,
"ರಾಜಪುತ್ರನೆ ನೀನು ಮೆರೆಯುವೆ"
ಎಂದು ಪುತ್ರನ ನೋಡಿ, ತಣಿಯುತ
ಹರುಷಗೊಂಡಳು ಮನದಲಿ.

ಪನ್ನೆ ಬುಟ್ಟಿಯ ಹಣ್ಣ ಸುರಿದಳು;
ಭಾಳಗೆರಡನು ಕೊಡಲವನು "ಹೋ!"
ಎಂದು ಕುಣಿಯುತ, ದೂರಕೋಡುತ,
ಕಚ್ಚಿ ತಿನ್ನುತಲಿದ್ದನು.
ಪನ್ನೆ ಉದಯನ ಕರೆದು–ಮುದ್ದಿಸಿ,
ಅವನುಡುಗೆತೊಡುಗೆಗಳ ಕಳಚಿ,
ಬಳಿಕ ಬುಟ್ಟಿಯಲವನ ಕೂರಿಸಿ,
ತಲೆಯ ನೇವರಿಸಿ–
"ಬುಟ್ಟಿಪಲ್ಲಕ್ಕಿಯೊಳು ಕುಳಿತಿಹ

ಪುಟ್ಟ ರಾಜರ, ಕಾಣದಂತೆಯೆ,
ಚಂದ್ರಲೋಕದ ವನಕೆ ತಳುವದೆ
ಒಯ್ಯಬೇಕಜಿತಾ"
ಎಂದು ಬುಟ್ಟಿಯ ಮೇಲೆ ಮುಚ್ಚಲು,
ಉದಯನೊಳಗಡೆ ನಗುತಲಿದ್ದನು.
ಅಜಿತ ತ್ಯಾಗದ ಫಲದ ಭಾರವ
ಹೊತ್ತು ಹೊರಹೊರಟ.

ಇತ್ತ ಪನ್ನೆಯು ಮಗನ ಕರೆಯುತ–
"ಇಂದು ನೀನೇ ಉದಯ, ಬಾ ಬಾ !
ಇಂದು ನೀನೇ ರಾಜ, ಬಾ ಬಾ !
ರಾಜಪುತ್ರನ ಹಡೆದ ನನ್ನಯ
ಪುಣ್ಯವೇ ಪುಣ್ಯ!"
ಎಂದು ಉದಯನ ಉಡುಗೆತೊಡುಗೆಯ
ತನ್ನ ಮಗನಿಗೆ ತೊಡಿಸಿ, ಮುದ್ದಿಸಿ,
"ಕಂದ ಮಲಗುವ ಹೊತ್ತು ಆಯಿತು"
ಎಂದು ಮಗನೊಡನವಳು ಉದಯನ
ಮಲಗುಕೋಣೆಗೆ ಹೋದಳು.

ರಾಜಕುವರನ ಮಲಗುವಾಸೊಳು
ತನ್ನ ಮಗನನು ಹೊದಿಸಿ ಮಲಗಿಸಿ,
ತನ್ನ ಮಗನಾ ಬರಿಯ ಹಾಸೊಳು
ಅಡಕಿದಳು ಬರಿ ಬಟ್ಟೆಯ ;
ಅದರ ಮೇಗಡೆ ಅವನ ಹಚ್ಚಡ
ಹೊದಿಸಿ, ತನ್ನಯ ಮಗನೆ ಮಲಗಿರು–
ವಂತೆ ತೋರಿದಳು.

ಇತ್ತ ಭಾಳನು ಮಲಗಿಕೊಂಡಿರೆ
ಪನ್ನೆ ಸಾರುತಲವನ ಬಳಿಯನು,

ಪಿಡಿದವನ ಗಲ್ಲವನು, ಕುರುಳನು
ತಿದ್ದಿ, ಮುದ್ದಿಡುತ–
"ರಾಜಪುತ್ರನೆ ನೀನು, ಅಲ್ಲವೆ?
ರಾಜಪುತ್ರನ ಪರಿಯ ತೋರುವೆ;
ವೀರರಕ್ತದ ಪೆರ್ಮೆ ಮೆರೆಯುವೆ"
ಎಂದು ಹಿಗ್ಗಿಯೆ ನುಡಿದಳು.
ಉರಿವ ದೀಪದ ಬತ್ತಿಯಿಳಿಸುತ,
ಹಾಡಿ ಜೋಗುಳವನ್ನು ಮಗನನು
ನಿದ್ದೆವೋಗಿಸಿ, ಮುಸುಕನೆಳೆದಳು
ಅವನ ಮೈ ತುಂಬ;
ಮತ್ತೆ ಕುವರನ ಕರವ ಪಿಡಿಯುತ,
"ಕಂದ, ಸೊಗ ನಿದ್ದೆಯನು ಪಡೆಯೈ;
ನಿನ್ನ ನಿದ್ದೆಯೆ ನಿನ್ನನೆಂದಿಗು
ರಾಜಪುತ್ರನ ಮಾಳ್ಪುದೆ"ನ್ನುತ
ಮನದಿ ತೃಪ್ತಿಯ ತಳೆದಳು.

ಹೊತ್ತು ಮೀರುತ ಬಂದಿತಾಗ;
ಎತ್ತಲೆತ್ತಲು ಶಾಂತಿ ತುಂಬಿರೆ,
ಎತ್ತಲಿಂದಲೊ ಗೂಗೆ "ಗೂ ಗೂ"
ಎನುವ ದನಿ ಕೇಳೆ,
"ಹರಿ ಹರೀ ನಾರಾಯಣೆ"ನ್ನುತ
ಪನ್ನೆ ಕಿವಿಯನು ಮುಚ್ಚಿ ಕುಳಿತಳು–
ಎದೆಯು ತಟ್ಟನೆ ತುಡಿತುಡಿದುಕೊಳೆ
ತಡೆದಳಾ ತುಡಿತ.
ಏನು ಕಲ್‌ಮನ ! ಏನು ಕೆಚ್ಚದು !
ಹಡೆದು ಸಲಹಿದ ಮುದ್ದು ಕುವರನ
ಸಾವ ಬಾಯೊಳಗೋವಿ ನೂಕಲು
ಎಂತು ಕಾದಿಹಳು !
ತಮ್ಮ ಹರಣವ ಕೊಡುವರುಂಟು–

ಓವಿ ಸಾಕಿದ ಗಿಣಿಯ ಕೊಲ್ವರೆ?
ತಮ್ಮ ಕಣ್ಣನೆ ಕಿತ್ತು ಕೊಡುವರೆ?
ಏನಿದಚ್ಚರಿಯು !

ಇರಲಿರಲು ಹೆಗ್ಗಾಳಿ ಬಿರ್ರನೆ
ಬೀಸಿ ನುಗ್ಗಿತು; ಕೆಡಿಸಿ ದೀಪವ,
ಭೋರುಭೋರೆಂದಳುತ ಶಾಂತಿಯ
ಸೀಳಿ ಬೀಸುತಿರೆ–
ಅವಳ ಕಲ್‌ಮನ ಕರಗಿಹೋಯಿತು:
ಅದೊಡೇಂ, ಕಂಬನಿಯ ಕರೆಯಳು:
ಜವನ ಬರವ ನಿರೀಕ್ಷಿಸುತ ಆ
ಧೀರೆ ಕುಳಿತಿಹಳು.

ಎಲ್ಲೊ ಬಾಗಿಲು ತೆರೆದ ಕಿರಕಿರ;
ಹೆಜ್ಜೆ ಹಾಕಿದ ಹಗುರ ಸಪ್ಪುಳ;–
ಯಾರು ಸರಿಹೊತ್ತಿನಲಿ ಪನ್ನೆಯ
ಮನೆಗೆ ಬರುವವರು?
ಯಾರು, ಮತ್ತಾರಲ್ಲದೆಯೆ ಜವ!
ಹಸುಳೆಗೊಲೆಗಳುಕದೆಯೆ, ಹೇಸದೆ,
ಬಂದನಾ ಬನಬೀರನು.

ಬಂದವನೆ ಕತ್ತಿಯನು ಹಿರಿಯುತ,
“ಪನ್ನೆ, ಹೇಳ್, ಎಲ್ಲಿಹನು ಉದಯ?
ಅವನ ತೋರಿಲ್ಲದೊಡೆ ಭಾಳನ
ಬಾಳ ಹತಿಗೊಡ್ಡುವೆನು; ಜಾಗ್ರತೆ!”
ಎಂದು ಬಗುಳಿದನು.
ಪನ್ನೆ ನಿಂತಳು; ಹಿಂದೆ ಸರಿದಳು;
ಒಂದೆ ಹಿಡಿಯಲಿ ಜೀವವಿಡಿಯುತ,

ಕಂದನನು ಕೈನೀಡಿ ತೋರುತ
ಮೊಗವ ತಿರುಹಿದಳು.

ನುಸುಳಿ ಬರುತಿಹ ಜೊನ್ನವೆಳಗೊಳು
ಹಸುಳೆಕೈಯಲಿ ಉದಯಸಿಂಹನ
ಮಿಸುನಿವಜ್ರದ ಕಿರಿಯ ಮುದ್ರಿಕೆ
ಮೆರೆವುದನು ಕಂಡು,
ಕುರಿಯ ಮರಿಯನು ಕಂಡ ತೋಳನು
ಹಾರಿ ಮರಿಯನು ಬಗಿವ ತೆರದಲಿ
ಒಂದೆ ನೆಗೆತದಲಿರಿದು ಕೊಂದನು
ಕಂದನನು ಬನಬೀರನು.
ತನ್ನ ಕೆಲಸವು ಚಣದಿ ತೀರಿತು;
ಇನ್ನು ಉಳಿದುದು ಏನು, ಖೂಳಗೆ?
ತನ್ನ ಕೆಲಸವ ತಾನೆ ಮೆಚ್ಚುತ
ಹಿಗ್ಗಿದನು ಕುಣಿದು.
ತನ್ನ ಕಂದನ ತೆತ್ತುದಾಯಿತು;
ಇನ್ನು ಉಳಿದುದು ಏನು, ಪನ್ನೆಗೆ?
ರೋದಿಸುವುದೇ !– ಆದರುಸಿದನು
ಹಿಡಿದು ಮೌನದಲಿದ್ದಳು.

ಹಂತಕನ ಎದುರಿನಲಿ ಅಳುವುದೆ?
ದೈನ್ಯವನು ತೋರುವುದೆ ನೀಚನ
ಮುಂದೆ, ಮಗನನೆ ತೆತ್ತು ರಾಜ್ಯದ
ಭಾಗ್ಯದಂಕುರ ಬೆಳೆಯಲು ?
ಬಂದಳಲ ಬೆಂದೆದೆಯೊಳಡಗಿಸಿ
ಮುಂದಿನೊಳ್ಳಿತ ನೆನೆದು ಮನದೊಳು,
ಒಂದೆ ನಮದಲಿ ಧೀರಮೌನವ
ತಳೆದಳಾ ಧಾತ್ರಿ

ಪಾಪಪಂಕದ ಲೇಪವೋ ಎನೆ
ರಕ್ತ ಮೆತ್ತಿದ ಕತ್ತಿಯೆತ್ತಿಯೆ
'ಹಾ ಹ ! ಹೋ ಹೋ !' ಎಂದು ಕೆಲೆಯುತ
ಖೂಳ ತೊಲಗಿದನು.
ಎಲ್ಲ ಅರಿವೂ ಅಳಿಸಿ, ಕಡೆಯಲಿ
ತಾಯ್ತನದ ಅರಿವೊಂದೆ ಉಳಿಯಿತು:
ಕಟ್ಟೆ ಕೂಡಲೆ ಒಡೆದುಹೋಯಿತು–
ತಡೆದ ದುಃಖದ ಜಲವು ಉಕ್ಕುತ
ಉರುಳುರುಳಿ ಬರುತಿರಲು ಪನ್ನೆಯು
ಒಡನೆ 'ಅಯ್ಯೋ' ಎಂದು ಚೀರಿದಳು.
ಮಡಿದ ಎಳಗರುವನ್ನು ನೋಡಿದ
ಆವು ಸುಮ್ಮನೆ ಅರಿಚುವಂದದಿ

"ಕಂದ, ಹಾ ಹಾ, ಕಂದ !" ಎನ್ನುತ
ಚೀರಿದಳು ತಾಯಿ.
"ಎನ್ನ ಬಾಳಿನ ಬೆಳಕು ನಂದಿತೆ,
ಎನ್ನ ಕಣ್ಣಿನ ಹಾಹೆ ಸಿಡಿಯಿತೆ,
ಎನ್ನ ನೆತ್ತರು ತಣ್ಣಗಾದುದೆ
ಮಣ್ಣು ಗೂಡುತಲಿ !
ಇನ್ನು ಯಾರಿಗೆ ಬದುಕಿರಲಿ, ನಾ–
ನಿನ್ನು ಯಾರನು ಕಂದನೆನ್ನಲಿ ?
ಚಿನ್ನ ಭಾಲನು ಹೋದನೇ, ಹಾ!"
ಎಂದು ಕಂದನನಪ್ಪಿಕೊಳ್ಳುತ
ಅವನೊಳೈಕ್ಯವ ಹೊಂದಿದಳೊ ಎನೆ
ಕೆಡೆದಳಾ ತಾಯಿ.

ಚುಕ್ಕಿಗಳು ಮಿಟುಕಿದವು ಬಾನೊಳು;
ಬಾಲ ಚಂದಿರನೊಮ್ಮೆ ಕಿಟಕಿಯಿ–
ಣಿಕಿ ನೋಡುತ, ಹದನನರಿಯುತ,

ಮುಗಿಲ ಮರೆಯಲಿ ಮೌನವಾದನು;
ತಿರೆಯು ತಮಮಯವಾಯಿತು.
ಒಯ್ಯನೊಯ್ಯನೆ ತೀಡುತಲ್ಲಿಯೆ
ಸುಯ್ಯೆಲರು ಸುಳಿದಾಡುತಿದ್ದಿತು,
ತಾಯಿಮಕ್ಕಳು ಅಲ್ಲಿ ಮಲಗಿರೆ–
ಮಸಣ ಮೌನವು ನೆಲಸಿರೆ.

೧೯೩೦]

# ರಾಗ

(೧೯೪೬)

# ಬಿನ್ನಹ

ಮೂರು ವರ್ಷಗಳ ಹಿಂದಿನ ನನ್ನ ಸಂಕಲ್ಪ ಇಂದು ಈಡೇರಿ ಪ್ರೇಮಗೀತಗಳ ಸಂಕಲನವೊಂದನ್ನು ಸಹೃದಯ ಮುಂದಿಡುವ ಸುಯೋಗ ಒದಗಿದುದಕ್ಕಾಗಿ ಹರ್ಷಿಸುತ್ತೇನೆ. ಈವೊತ್ತಿನವರೆಗೆ ಬರೆದ ಕವನಗಳಲ್ಲಿ ಪ್ರಕಟಿಸಲು ಸರಿಗಂಡುವೆಲ್ಲ. ಈ ಸಂಕಲನದಲ್ಲಿ ಬಂದಿವೆ. ಅವುಗಳಲ್ಲಿ ಬಹು ಸಂಖ್ಯೆಯ ಕವನಗಳು ೧೯೩೦ರಿಂದ ೧೯೩೫ರ ವರೆಗೆ ೫ ವರ್ಷಗಳ ಅವಧಿಯಲ್ಲಿ ಬರೆದವು; ಇನ್ನುಳಿದವು ಕೂಡ ತೀರ ಈಚಿನವೇನಲ್ಲ. ಒಂದು ಸಣ್ಣ ಕವನ ಸಂಗ್ರಹವನ್ನು ಹೊರತರಬೇಕಾದರೆ ಎಷ್ಟು ಕಾಲ ಕಾದಿರಬೇಕು !

ಇಳೆಯ ಬಾಳಿನ ಒಲವಿನ ಉದ್ಯಾನದಲ್ಲಿ ದಾರಿಗಳು ನೂರಾರು ಆದರೆ, ಬಹುಮಂದಿ ನಡೆದು ನಡೆದು ಆದ ದಾರಿ ಒಂದೆ: ದಾಂಪತ್ಯ ಪ್ರೇಮದ ಹೆದ್ದಾರಿ. ಉಳಿದವು – ನಡೆದದ್ದರಿಂದ ದಾರಿ: ನಡೆದಾರಿಯಲ್ಲಿ ನಡೆದ ದಾರಿ. ಹತ್ತು ಜನದ ಗುರಿಯೂ ಒಂದೇ ಆಗಿದ್ದು, ಆ ಹತ್ತೂ ಜನ ತುಳಿದ ದಾರಿ ಕಾಲುದಾರಿಯಾದರೂ ಆದೀತು. ಹೆಸರಿಗೆ ಎಲ್ಲರ ಗುರಿಯೂ ಒಂದೆ : ವಿಹಾರ. ಆದರೆ, ವಿಹಾರದ ಜೀವಾಳ ಸ್ವಾಚ್ಛಂದ ವಿಹಾರಿಗಳೂ ಹಲವರು: ಆದ್ದರಿಂದಲೇ ದಾರಿಗಳೂ ಹಲವು, ನೂರಾರು. ಒಂದೊಂದೂ ನಡೆದವನ ಅನುಭವಕ್ಕೆ ವಿಶಿಷ್ಟವಾದುದು. ಪ್ರೇಮೋದ್ಯಾನ ವಿಹಾರಿಯಾದ ಕವಿಯ ಹೃದಯದಿಂದ ಆ ಪ್ರೇಮಾನುಭವ–ಪ್ರೇಮ ಮಕರಂದ–ಹೊರಸೂಸಿದಂದು, ಅದು ಮಧುಮತ್ತಮವಾಗಿ ರಸಿಕರ ಆಸ್ವಾದನಕ್ಕೆ ಅಣಿಯಾಗುತ್ತದೆ. ಮಧು ಯಾವ ಹೂವಿನ ಮಕರಂದದಿಂದ ಬಂದದ್ದು ಎಂಬ ಪ್ರಶ್ನೆ ತೀರ ಅನಾವಶ್ಯಕ.

ಉದ್ಯಾನದಲ್ಲಿ ವಿಹಾರಿಗಳೂ ಉಂಟು, ವಿರಹಿಗಳೂ ಉಂಟು. ವಿಹಾರಕ್ಕೆ ಬೆಳಗ್ಗೆ, ಸಂಜೆ,–ಸೊಗಸು. ಹಗಲಿನಲ್ಲಿ ವಿಹಾರವೆ? ವಿಹಾರವನ್ನು ಬೆಳಗುವುದು ಅರುಣರಾಗ, ಇಲ್ಲವೆ ಸಾಂಧ್ಯರಾಗ.

ವಿಹಾರಿ ಕಾಣುವುದು ಅರುಣರಾಗ, ಆಮೇಲಿನ ಹೊಂಬೆಳಕು; ವಿರಹಿ ಕಾಣುವುದು ಸಂಜೆಯ ರಾಗ, ಆಮೇಲಿನ ಕತ್ತಲೆ. ಎರಡೂ ರಾಗವೆ. ಎಳವರೆಯದಲ್ಲಿ ವಿಹಾರಿಯಾಗಿ, ವಿರಹಿಯಾಗಿ, ಕಂಡ ರಾಗ, ಅದರ ಸವಿನೆನಪು–ಈ 'ರಾಗ'.

ಮೊದಲು ರಾಗ; ಆಮೇಲೆ ವಿರಾಗ. ರಾಗವಿಲ್ಲದೆ ವಿರಾಗವಿಲ್ಲ. ವಿರಾಗದ ಗುರಿಯೂ ಪ್ರೇಮದರ್ಶನವೆ: ಪ್ರೇಮ ಸರ್ವಸ್ವದ ದರ್ಶನ. ವಿರಾಗಿಯೂ ಪ್ರೇಮಿ. ರಾಗವಿಲ್ಲದೆ ಬದುಕಿಲ್ಲ.

'ರಾಗ'ದಲ್ಲಿ ಕೆಲವೆಡೆ ಬಣ್ಣ ದಟ್ಟವಾಗಿರಬಹುದು, ಹಲವೆಡೆ ತೆಳ್ಳಗಿರಬಹುದು; ಇನ್ನೂ ಕೆಲವೆಡೆ ಅಡ್ಡಮೋಡಗಳಿಂದ ಮರೆಯಾಗಿರಬಹುದು. ರಾಗದ ಬಣ್ಣ

ಒಂದು ಕಡೆ ಇದ್ದಹಾಗೆ ಇನ್ನೊಂದು ಕಡೆ ಇರದು; ಒಂದು ಕ್ಷಣ ಇದ್ದಹಾಗೆ ಇನ್ನೊಂದು ಕ್ಷಣ ಇರದು. ಇದು ಸತ್ಯ. ಮುಖ್ಯವಾದುದು ಒಟ್ಟು ನೋಟ; ಅದು ರಂಜಿಸಿತೆಂದರೆ, ಕವಿ ಸುಪ್ರೀತ.

ಈ ಪುಸ್ತಕದ ಪ್ರಕಟನ ಕಾರ್ಯದಲ್ಲಿ ಸಹಾಯಮಾಡಿದ ಗುರುಹಿರಿಯರು, ಮಿತ್ರರು, ಪ್ರಕಾಶಕರು, ಮುದ್ರಕರು–ಇವರಿಗೆಲ್ಲ ನಾನು ತುಂಬ ಕೃತಜ್ಞನಾಗಿದ್ದೇನೆ.

೧೫–೧೨–೧೯೪೬ **ರಾಘವ**
ಬೆಂಗಳೂರು

— ಗೆ

ಇದೊ ಇದೊ ಬಂದನಿದೋ ಮೇಘದೂತ
ಯಕ್ಷನ ನಚ್ಚಿನ ನಲ್‌ಗೆಳೆಯ ;
ಕಳಿಸುವೆನವನೊಡನೀ ಪ್ರೇಮಗೀತ :
ನನ್ನ ನಿನ್ನ ಹಂಗಾಯ್ತೀ ಇಳೆಯ

# ಬಾಳ ಬೆಳಕು

ಎನ್ನ ರನ್ನೆ ಎನ್ನನೊಲಿದು
ಎನ್ನ 'ಬಾಳ ಬೆಳಕು' ಎನಿಸಿ
ಕಣ್ಣ ಮುಂದೆ ಮಿಂಚಿ ಮೆರೆದು
        ಸೆಳೆದಳೆನ್ನನು;
ಎನ್ನ ಮಬ್ಬು ಎದೆಗೆ ಒಲವ
        ಬೆಳಕ ಕರೆದಳು.

ಅವಳು ತರಳೆ, ನಾನು ತರಳ;
ಅವಳು ಮುಗ್ಧೆ, ಕಿರಿಯ ಕನ್ನೆ;
ಸವಿಯ ಪ್ರೇಮವೇನೊ ಅಂದು
        ಅರಿಯದಿದ್ದೆವು ;
ಅವಳಲೆನ್ನ ಪ್ರೇಮವೆಂತೊ
        ಹರಿದುದರಿಯೆನು.

ಎಂದು ನನ್ನ ಬಾಲೆ ತನ್ನ
ಇಂದುವಂತೆ ಹೊಳೆವ ವದನ-
ದಿಂದ ಪ್ರೇಮಚಂದ್ರಿಕೆಯನು
        ಬೀರಿ ಒಲಿದಳೊ
ಅಂದು ನಾನು ಹರುಷಗೊಂಡೆ
        ಸೇರಿ ಅವಳಲಿ.

ಅವಳಿಗಧಿಕ ಚೆಲುವದಿಲ್ಲ,
ಬವಣೆಗೊಳಿಪ ಭಾವವಿಲ್ಲ,
ಬೆಡಗಿನ ಬಿನ್ನಾಣವಿಲ್ಲ

ಮರುಳುಗೊಳಿಸಲು;
ಹೇಗೊ, ಅರಿಯದಂತೆ ನನ್ನ
ಮನವ ಸೆಳೆದಳು.

ಅವಳ ಬಣ್ಣ ಕೊಂಚ ಕಪ್ಪು !–
ಆದರೇನು ? ನನಗೆ ಒಪ್ಪು !
ಕಪ್ಪಗಿದ್ದರೇನು ಮಯ್ಯಿ?
ಪ್ರೇಮ ಕರಿಯದೆ?
ಒಪ್ಪೆ ಮನವು ಕಪ್ಪ ಮೀರಿ
ಒಲವು ಹರಿಯದೆ?

ಆದರವಳ ಮಾಟ ಅಂದ ;
ನಡಗೆ ನಿಲುವು ಭಂಗಿ ಚೆಂದ;
ಮಾತು ಜೇನು, ನೋಟ ಜೊನ್ನ :
ಇವುಗಳೆನ್ನನು
ಸೆಳೆದುವೇನೊ?–ಎಂತೊ ಏನೊ,
ಒಲಿದೆನವಳನು !

ಅಂತು ಅವಳಿಗೊಲವನಿತ್ತು,
ಅವಳ ಒಲವ ನಾನು ಕೊಂಡು,
ಒಲವಿಗೊಲವು ಕೂಡಿ, ಒಲವೆ
ಬೆಳಗತೊಡಗಿತು;
'ಒಲವೆ ಬಾಳಬೇಕು' ಎಂದು
ಕಾಣತೊಡಗಿತು.

೧೯೨೯]

# ಬಂದಳು ನಲ್ಲೆ !

ಬಂದಳು ನಲ್ಲೆ ! ಬಂದಳು ನಲ್ಲೆ !
–ನಾ ಬಲ್ಲೆ
ಕಾಲ್ ಸರವಲುಗುವ ಘಲ್ ಘಲ್ ಸದ್ದು–
ಬರುತಿಹಳೀ ಕಡೆ ಮೆಲ್ಲನೆ ಕದ್ದು !
ಜಾಜಿಯ ಸುಗಂಧ ಸುಳಿಯುತಿದೆ–
ಇನಿಯಳ ಬರವನು ಒರೆಯುತಿದೆ !
ಕಣ್ಣಿಗೆ ಕಾಣಳು, ಕಂಗಳು ಕುರುಡು !
ಒಲಿದ ಹೃದಯವದು ತಾ ಕುರುಡೆ ?

ಬಂದಳು ನಲ್ಲೆ ! ಬಂದಳು ನಲ್ಲೆ !
– ನಾ ಬಲ್ಲೆ.

ಅವಳತಿ ಮುದ್ದು....
ಏನಿದು ಗುದ್ದು !–

ಬಂದಳು ರನ್ನೆ, ಬಂದಳು ಚೆನ್ನೆ–
ತಿರುಗಲು, ಸೊನ್ನೆ !

೧೯೩೦]

# ಹಾದಿಯ ಹಕ್ಕಿ

ಬೀದಿಯ ಮುಂಬಾಗಿಲಿನಲಿ ನಿಂತಿಹ
ಚೆಲುವೆಯಿದಾವಳೊ ನಾನರಿಯೆ ;
ಹಾದಿಯ ಹಿಡಿದಿಹ ನನ್ನನು ಸೆಳೆದಿಹ
ಚೆಲುವೆಯಿದಾವಳೊ ನಾನರಿಯೆ.

ತುಟಿಗಳ ಸೆರೆಯನು ತಪ್ಪಿಸಿಕೊಂಡು
ನುಸುಳುತ ಬಂದಿದೆ ನಸುನಗೆಯು;
ನಟಿಸಿದರೇನು ಕಣ್ಣಲಿ ಸೌಮ್ಯವ ?
ನುಸುಳುತ ಬಂದಿದೆ ನಸುನಗೆಯು !

ನನ್ನನು ನೋಡದೆ ನಕ್ಕಿರಬಹುದೆ?–
ದಿಟ್ಟ ನೋಡುತಿದೆ ನನ್ನನ್ನೆ !
ನನ್ನನು ನೋಡಿಯು ನಕ್ಕಿರಬಹುದೆ?–
ನಾನೇನಂತಹ ಸುಂದರೆ?

ಈ ಸಲ ನೋಡಿದಳೆನ್ನನು ಅವಳು;
ಸೆರಗಲಿ ತುಟಿಗಳ ಮುಚ್ಚಿದಳು:
ಆಸೆಯು ಮೂಡಿತು ಎನ್ನಯ ಮನದೊಳು,
ಹೊರಡದೆ ನಿಂತೆನು ಬೀದಿಯೊಳು.

ಯಾರೀ ಚೆಲುವೆಯು ಎನ್ನುತ ಮನದಲಿ
ಚಿಂತಿಸುತ್ತ ಪಿಡಿದೆನು ಗಲ್ಲ;
ಹಾರಿಯೆ ಹೋಯಿತು ಹಾದಿಯ ಹಕ್ಕಿ–
ಕರೆದನೇನೊ ಒಳಗಡೆ ನಲ್ಲ !

೧೯೨೯]

# ಒಲವಿನ ಚೆಲುವು

ವೀಣೆಯಿಂದ್ಹೈತರುವ ಮೆಲ್ನುಡಿಯ ಸೊಗಸಿನಲಿ,
ಹಕ್ಕಿಗಳ ಇನಿದನಿಯ ಗೆಜ್ಜೆ ಕಟ್ಟಿ
ನಾಣಿನಿಂದ್ಹೈತರುವ ಸಂಜೆವಣ್ಣಿನ ಸೊಗಸ
ನೋಡಿಹೆನು ಗುಡ್ಡಗಳ ಮೇಲೆ ನಿಂತು;

ಪನಿನೀರ ಚೆಲ್ಲುತ್ತ, ಹೂಗಳನು ಹರಡುತ್ತ,
ಹಸುರು ಹಾಸಿನ ಮೇಲೆ ಅಳುಕಿ ಬಳುಕಿ
ನಾಗಕನ್ನಿಕೆಯಂತೆ ನಲಿದೊಲಿದು ಸಾರುತಿಹ
ಚೈತ್ರವಧುವನು ನಾನು ನೋಡಿರುವೆನು;

ಸುಗ್ಗಿಯನು ಸವಿದುಂಡು ಬಗ್ಗಿಸುವ ಕೋಗಿಲೆಯ
ಗಾನದಿನಿಗಡಲಿನಲಿ ಮುಳುಗಿರುವೆನು;
ಹಿಗ್ಗುತಿಹ ಹಿಮಕರನ ನಗೆಗಡಲು ಮೌನದಲಿ
ಸೌಂದರದ ಸುಧೆಯನ್ನು ಸವಿದಿರುವೆನು;–

ಆದರೆನ್ನಯ ರನ್ನೆ, ನೀನೆನ್ನನೊಲಿದಾಗ
ಎಮ್ಮೊಲವಿನಲಿ ಕಂಡೆ–ಹೇಳಲೇನು?
ಸಂಜೆವೆಣ್ಣಿನ ಸೊಗಸು, ಚೈತ್ರವಧುವಿನ ಚೆಂದ–
ಒಲವ ಚೆಲುವಿನ ಮುಂದೆ ಇವುಗಳೇಕೆ !

೧೯೩೦]

# ನಸು ನಾಚಿಕೆ

ಓಡಿದಳೆನ್ನ ಮನೋಹಾರಿ
ನಸು ನಾಚಿಕೆಯನು ತುಸ ಬೀರಿ !

ನಾಚಿಕೆ ಮೊಗದಲಿ ನಾಟ್ಯವಾಡಿತು
ಮಿಂಚಿತು ತಿಳಿಗಣ್ಣೊಳು ಫಳಫಳನೆ
ಕೆಂದುಟ ಕೊನೆಯಲಿ ನಗೆಗುಡಿಯಾಗಿ
ಕೆನ್ನೆಯೊಳರಳಿತು ಕೆಂಪಾಗಿ !

೧೯೪೧]

# ಸರಿಯಲು ಮಳೆಮುಗಿಲಿನ ತೆರೆ

ಸರಿಯಲು ಮಳೆಮುಗಿಲಿನ ತೆರೆ
ನೀಲಿಗೆ ನಭ ತಿಳಿಯೆ
ಹರಿಯುವ ನೆರೆ ತಿಂಗಳ ತೊರೆ
ಉಕ್ಕುತ ಇಳೆಗಿಳಿಯೆ

ಒಡನೆಯೆ ತೇಲುತ ಬಂದಳು
ಎನ್ನಯ ಮನದನ್ನೆ;
ಒಲವಿನ ಕಾಣಿಕೆ ತಂದಳು–
ಮಾಡಿದೆ ಕೈಸನ್ನೆ !

ಮತ್ತುಗುಳಿತು ಕತ್ತಲೆಯನು
ಸುತ್ತಲು ಕಾರ್ಮುಗಿಲು;
ಬಿತ್ತರ ಬೆಳುದಿಂಗಳನದು
ನುಂಗಿದುದಿರಲಿರಲು.

ಎಲ್ಲಿಯ ಬೆಳುದಿಂಗಳ ನಗೆ,
ಎಲ್ಲಿಹಳಾ ನಲ್ಲೆ!
ಇಲ್ಲದುದನು ಚಿತ್ರಿಸಿ ಬಗೆ
ತೋರುವುದದ ಬಲ್ಲೆ !

೧೯೩೨]

## ಏತಕೋ ಅರಿಯೆನು

ಕೆಲಸವಿರಲಿ ಇಲ್ಲದಿರಲಿ
ಹಗಲು ಸಂಜೆ ಇರುಳಲಿ
ನಿನ್ನನೇ ನೆನೆಯುತಿರುವೆ;
ಏತಕೋ ಅರಿಯೆನು.

ಎಂದೊ ಒಂದು ದಿವಸ ನೀನು
ಕಾಣದಿರಲು ನನ್ನನು
ಕುಂದನೆಣಿಸಿ ನಿನಗೆ ಮುನಿವೆ;
ಏತಕೋ ಅರಿಯೆನು.

ಬಹಳ ದಿನಗಳಿಂದ ನೀನು
ನನ್ನ ಬಳಿಗೆ ಬರದಿರೆ–
'ತೊರೆದೆಯೇನೊ'–ಎಂದು ಬಗೆವೆ:
ಏತಕೋ ಅರಿಯೆನು.

ನಿನ್ನ ಮೇಲೆ ಕೋಪಗೊಳ್ವೆ,
ಇನ್ನು ಮರೆವೆನೆನ್ನುವೆ ;
ನಿನ್ನನರಸಿಕೊಂಡು ಬರುವೆ;
ಏತಕೋ ಅರಿಯೆನು.

ನಿನ್ನ ನಗುವ ಮೊಗವ ನೋಡಿ
ಕೋಪವೆಲ್ಲ ಕರಗಲು,
ಹೃದಯ ಕುಣಿವುದೊಡನೆ ಹಾಡಿ:
ಹೇಗೊ ನಾನರಿಯೆನು.

ನೀನು ಬರುವೆ, ನಲವ ತರುವೆ:
ಅದನು ಸವಿದು ಹೃದಯವು
ತುಂಬಿ ತುಳುಕಿ ಇನ್ನುಮರಕೆ :
ಏತಕೋ ಅರಿಯೆನು !

೧೯೩೨]

## ಉಯ್ಯಾಲೆ

ನೆನಪಹುದು ಎಲೆ ಬಾಲೆ
ತೂಗಿದುದು ಉಯ್ಯಾಲೆ

ಸುಳಿಯುತಿರುವೆಗಾಳಿಗೊಯ್ಯನೆ
ಅತ್ತಲಿತ್ತಲು ತೂಗುವ
ತಳಿತ ಸೆಳೆಗೊಂಬೆಯನು ಸಾರುತ
ಪಕ್ಕ ಪಕ್ಕವ ಸೋಕಿಸಿ
ಕೊಂಡು ಕೊರಲನು ಜೋಡಿ ಮಾಡುತ
ಒಂದೆ ದನಿಯಲಿ ಹಾಡುತ
ಬಿಂಕದಿಂದುಯ್ಯಾಲೆಯಾಡುವ
ಹಕ್ಕಿಜೋಡಿಯ ತೆರದಲಿ–
ನೆನಪಿಹುದೆ, ಎಲೆ ಬಾಲೆ,
ಆಡಿದೆವು ಉಯ್ಯಾಲೆ?

ಪಕ್ಕ ಪಕ್ಕದಿ ಕುಳಿತು, ನೆಲವನು
        ಒಟ್ಟಿಗೊಟ್ಟಿಗೆ ಮೆಟ್ಟುತ ;
ತೆಕ್ಕೆಯೊಳು ಕೈವಿಡಿದು, ಮಣೆಯನು
        ಹಿಂದು ಮುಂದಕೆ ತೂಗುತ;
ತೂಗು ಗಾಳಿಗೆ ನಿನ್ನ ಪಾವುಡೆ
        ಪಟಪಟನೆ ಹಾರಾಡಲು
ಬಾಗುತೊಲೆಯುತ ಒಂದೆ ಲಯದಲಿ
        ನಮ್ಮ ಮಯ್ ಕುಲುಕಾಡಲು–
ಚೆಂದದಿಂದಲಿ, ಬಾಲೆ,
ತೂಗಿದೆವು ಉಯ್ಯಾಲೆ.

ನಿನ್ನ ಕಾಲ್‌ಬಳೆ ಕೂಡಿ ಕಾಲ್‌ಸರ
        ಘಲಿರುಘಲಿರೆನುತುಲಿಯಲು
ಹೊನ್ನ ಕಂಠಿಕೆ ಎದೆಯ ಮೇಗಡೆ
        ಹಿಂದುಮುಂದಕೆ ಒಲೆಯಲು
ಬೆನ್ನ ಮೇಗಡೆ ನಿಡುಗುರುಳ ಜಡೆ
        ಜೋಲುತಲೆದೆಳೆದಾಡಲು
ತನ್ನ ನೆಲೆಯುಳಿದಲ್ಲಿಗಿಲ್ಲಿಗೆ
        ಮುಂಗುರುಳು ಹಾರಾಡಲು–
ಚೆಂದದಿಂದಲಿ, ಬಾಲೆ,
ತೂಗಿದೆವು ಉಯ್ಯಾಲೆ.

ಕೆನ್ನೆ ಕೆನ್ನೆಗೆ ಒತ್ತಿ ಸೋಕಲು
        ಒಬ್ಬರೊಬ್ಬರ ತಬ್ಬುತ
ಚೆನ್ನಿನೊಲುಮೆಯ ಭಾವ ಮೊಳೆಯಲು
        ಇಬ್ಬರೂ ಮನವುಬ್ಬುತ
'ಹಿಂದ' ನೆನೆಯದೆ 'ಮುಂದ' ಬಗೆಯದೆ
        'ಇಂದು'ವೊಂದನೆ ನೆಮ್ಮುತ
ಒಂದೆ ಭಾವವನೆರಡು ಕಿರಣದ

ನಗೆಯ ಬೆಳಕಲಿ ಚಿಮ್ಮುತ
ತೂಗಿದುದ ಉಯ್ಯಾಲೆ
ಎಂತು ಮರೆವೆನು ಬಾಲೆ !

೧೯೪೧]

## ಎಂದಿನಂತೆಯೆ ಸಂಜೆರಾಗ

ಎಂದಿನಂತೆಯೆ ಸಂಜೆ ರಾಗವು
ಅಂದಗೊಳಿಸಿಹುದಂತರಿಕ್ಷವ ;
ಮಂದಮಾರುತವನವಿತು, ತಟ್ಟನೆ
ಸುಳಿದು, ಆಡುತಲಿರುವನು.

ಮುನ್ನಿನಂತೆಯೆ ಪೂರ್ಣಚಂದ್ರನು
ರನ್ನಗನ್ನಡಿಯಂತೆ ಹೊಳೆಯುತ
ತನ್ನ ನಗೆ ಚಂದ್ರಿಕೆಯ ಚೆಲ್ಲುತ
ಜಗವ ನಗಿಸುತಲಿರುವನು.

ಆದರೇತಕೊ ಅಂದ ನೋಟವು
ಮೋದವೀಯದೆ, ಮನವ ಕೆಣಕುತ,
ಹೋದ ಬಾಳಿನ ಸೊಗದ ನೆನಪಿನ
ಬೇಸರಿವನು ತಂದಿದೆ.

ತುಂಬು ಚೆಲುವನು ಪೂರ್ಣಗೈಯುವ
ತುಂಬು ಪ್ರೇಮದ ಮೂರ್ತಿ, ರನ್ನೆ,
ಅಂಬರದ ಬಿಳಿಮುಗಿಲ ತೆರದಲಿ
ಎಲ್ಲೊ ಕಣ್ಮರೆಯಾಗುತ–

ಬೇರೆಯೊಬ್ಬನ ಮಡದಿಯೆನಿಸುತ
ಸಾರಿ ಬರುವೆನು ಮತ್ತೆಯೆನ್ನುವ
ದೂರದಾಸೆಯ ಬೆಳಕ ನಂದಿಸಿ
ತಮದ ತೆರೆಯನ್ನೊಡ್ಡಿರೆ-

ಚೆಲುವು ಸೊಗಸುವುದೇನು ಹೃದಯಕೆ?
ಒಲವಿನಲ್ಲಿಯೆ ಚೆಲುವ ಕಾಣಿಸಿ
ಬೆಳಕು ಬೀರಿದ ಹೆಣ್ಣು ಹೋಗಲು
ಉಳಿದ ಚೆಲುವೇನಿರುವುದು?

೧೯೩೧]

## ರಾಗ

ಹಗಲವೇಳೆಯಲೆಲ್ಲ ನನ್ನ ಕೆಲಸವು ನನಗೆ,
ನಿನ್ನ ಕೆಲಸವು ನಿನಗೆ: ಸೇರ್ವುದೆಂತು?
ಹಗಲಿರುಳನಪ್ಪುತಿರೆ ರಾಗದಲಿ ತೇಲಿ
ನಿನ್ನ ಸೇರುತಲಿದ್ದೆ ನಾನು ಅಂತು.

ದಾಳಿಂಬೆ ಮರವೇರಿ ಹಕ್ಕಿಗಳು ಉಲಿಯುತಿಹ
ನಿಮ್ಮ ಮನೆ ಹಿತ್ತಿಲೇ ನಮ್ಮ ತಾಣ;
ದಾಳಿಂಬೆ ಮರದಡಿಯ ಬಾವಿಕಟ್ಟೆಯೆ ನಾವು
ಸುಮ್ಮಾನದಲಿ ಕುಳಿತು ನಲಿದ ತಾಣ.

ಕೊಡದ ಭಾರಕೆ ನಡುವು ಬೆಡಗಿನಲಿ ಬಾಗಿರಲು
ಇಳುಹುತಿದ್ದೆನು ನಾನು ನಿನ್ನ ಭಾರವನು;
ಅಡಿಯ ಹಿಂದಿಡುತ ನೀ ನಾಚಿ ಪೋಗುತ್ತಿರಲು
ಬಳಿಗೆಳೆಯುತಿದ್ದೆ ನಾ ಕರವ ಪಿಡಿದು.

ಅಂದು ನಿನ್ನಯ ಮೊಗವು ಕೆಂಪೇರುತಿರಲು,
ಸಂಜೆವೆಣ್ಣಿನ ಮೊಗವು ಕೆಂಪೇರುವಂತೆ–
ಒಂದು ಮುತ್ತೇ ಸಾಕು ಎಂದೆನಿತು ಬೇಡಿದರು
ಅಂಜುವೆನು ಮನೆಯವರಿಗೆನ್ನುತಿದ್ದೆ.

ಮುತ್ತಿಲ್ಲದಿದ್ದರೇನೊಲವಿಹುದು ಎನುತಿದ್ದೆ
ನಿನ್ನ ಮೊಗ ಕೆಂಪಡರೆ ಪ್ರೇಮದಿಂದ;
ಮುಳುಗು ಹೊತ್ತಿನ ರಾಗ ನಿನ್ನ ವದನದಲಿತ್ತು;
ನಿನ್ನದೊ, ಸಂಜೆಗೆಂಪಿನ ಛಾಯೆಯೊ?

ಮೋಸಹೋದೆನೊ ಏನೊ ಮೊಗದ ಕೆಂಪನು ಕಂಡು
ಸೂಸುತಿಹ ಒಲವ ಕುರುಹೆಂದು ಬಗೆದು;
ಎಲ್ಲಿ ಹೋಯಿತೊ ಕಾಣೆ ನಿನ್ನ ಆ ಒಲವಿಂದು :
ಎಲ್ಲೆಲ್ಲು ಕತ್ತಲೆಯೆ–ರಾಗವೆಲ್ಲಿ ?

೧೯೩೦]

## ದಿಟ್ಟಿಸಿ ನೋಡಲು

ದಿಟ್ಟಿಸಿ ನೋಡಲು
ತಟ್ಟನೆ ತಿರುಗುವೆ–
ಮೊದಲಿನ ಪ್ರೇಮವು ಇಂಗಿದುದೇ ?
ನಿಟ್ಟುಸಿರುಸಿರಲು
ಸಿಟ್ಟನು ಬಗೆಯುವೆ–
ಮೊದಲಿನ ಒಲವದು ಹಿಂಗಿದುದೇ ?

ಆಸೆಯನುಳಿಯುತ
ಬಾಸೆಯ ಮರೆಯುತ

ಸುಮ್ಮನೆ ನಾನಿರೆ ನೀ ನಗುವೆ ;
ನನ್ನಿಯ ನಗುವೆಂ-
ದೆನ್ನುತ ನಾನಗ-
ಲೆನ್ನಲಿ ಕೋಪವ ನೀ ಬಗೆವೆ.

ನೀನಿರುವೆಡೆಯನು
ಕಾಣದೆ ಸೇರುವೆ :
ದೂರಕೆ ಸರಿಯುವೆ ಮೊಗತಿರುಹಿ;
ಕಣ್ಣಿಂದೊಲವನು
ನಿನ್ನಲಿ ಒರೆಯಲು
ತೆರಳುವೆ ನುಡಿಯದೆ ನಿಲ್ಲದೆಯೆ.

ಎನ್ನಯ ರನ್ನೆಯು
ಎನ್ನಯ ಚೆನ್ನೆಯು
ಬಂದಳು ಎನ್ನುತ ಹಿಗ್ಗಿದೆನು ;
ಇನ್ನವಳೆನ್ನಯ
ರನ್ನೆಯಲ್ಲವೆಂ-
ದೊಳಗೊಳಗೇ ಬಲು ಕುಗ್ಗಿದೆನು.

ಹುಣ್ಣಿಮೆ ಹೋಗಲು
ಜೊನ್ನವು ಜಾರಲು
ದುಃಖದ ತಮದಲಿ ಮುಳುಗಿದೆನು;
ಜೊನ್ನವು ಬರುವುದು
ಇನ್ನು ಮುಂದೆಯೂ-
ಆದರೆ ಸೊನ್ನೆಯೆ ಎನಗಂದು!

೧೯೩೦]

# ನಿನ್ನೊಲವೆ ಸಾಕು

ಕಡೆಯ ಸಲ ನಿನಗೆನ್ನ ಒಲವ ಕಾಣಿಕೆಯನ್ನು
ಸಲಿಸಿದೆನು, ಸಂತಸದಿ, ಶೋಕ ಮೌನದಲಿ ;
ಕಂಬನಿಯು ಕಂಠವನು ಕಟ್ಟಿರಲು ಕೊರಗಿನಲಿ,
ಕಣ್ಣಿನಲೆ ಕೇಳಿದೆನು 'ಮರೆಯುವೆಯ'? ಎಂದು.

ನನ್ನ ಬಗೆಯನು ನೀನು ಬಗೆಯಲಾರದೆಹೋದೆ,
ಆದರೆನ್ನಯ ಕಾಣಿಕೆಯನು ಕೈಕೊಂಡೆ;
ತೊರೆದೆ ನೀ ಕೊನೆಗೆನ್ನ ; ನಿನ್ನಾಸೆಯನು ಬಿಟ್ಟೆ;
ಆದರೂ ನಿನ್ನೊಲುಮೆ ಬಿಡದಿರುವುದು.

ಮತ್ತೇಕೆ ನೀ ಬಂದು, ಕಣ್ಮುಂದೆ ಸುಳಿಸುಳಿದು,
ನನ್ನ ಮನವನ್ನೇಕೆ ಸೆಳೆಯುತಿರುವೆ ?
ಹತ್ತಿರವೆ ನೀನಿರುವೆ, ಹತ್ತಿರಕೆ ಬರಲಾರೆ;
ಕಟ್ಟುಗಳ ಮುರಿದು ಮುಂಬರಿವುದರಿದು.

ಬಣ್ಣಸೀರೆಯನುಟ್ಟು ಮೊದಲಿನಂತೆಯೆ ನೀನು
ಕಣ್ಣುಗಳಿಗೀಯುತಿಹೆ ಹಬ್ಬವನ್ನು ;
ಎನಿತು ಹತ್ತಿರವಿಹೆವು ! ಹತ್ತಿರಕೆ ಬರಲಾರೆ ;
ಕಡಲೊಂದು ನಡುವೆಯಲಿ ಉರುಳುತಿಹುದು.

ತಿರುತಿರುಗಿ ಸುಳಿಸುಳಿದು ಏಕೆನ್ನ ಸೆಳೆಯುತಿಹೆ,
ಪಾಪ ಸೋಂಕಿನ ಚರ್ಯೆಗೇತಕೆಳೆವೆ ?
ನಿನ್ನೊಲುಮೆ ಬಲೆಯಲ್ಲಿ ಬಿದ್ದಿಹುದೆ ಸಾಕೆನಗೆ,
ನೀ ಬೇಡ, ಹೋಗು; ನಿನ್ನೊಲವೆ ಸಾಕು.

೧೯೩೦]

# ಏಕೆ ಕೊರಗುವೆ ?

ಕೊರಗುತಿರುವೆಯೇಕೆ ನೀನು? ನಿನ್ನ ರನ್ನೆಯಿಲ್ಲವೇನು?
ಒಲಿದ ಹೆಣ್ಣು ಹೋದರೇನು, ಏಕೆ ಕೊರಗುವೆ ?
ಒಲಿದು ನಲಿದ ಸೊಗದ ನೆನಪೆ ನಿನಗೆ ಸಾಲದೆ?
ಹಕ್ಕಿ ಹಾಡಿ ಹೋಗೆ ಕೊನೆಗೆ
ಅದರ ಬಯಕೆಯೇಕೆ ನಿನಗೆ?
ಅದರ ಗಾನ ಸಾಲದೆ?
ಬರಿಯ ಗಾನವನ್ನು ನೆನೆಯೆ ಮನಕೆ ಮೋದವಾಗದೆ?

ಮೆರೆಯುತಿರುವ ಸುಮದ ಚೆಲುವ ನೋಡಿ ನೀನು ಮನವ ಸೋತೆ-
ಸುಮದ ಘಮವು ಯಾರ ಮನವ ಸೆಳೆಯಲಾರದು ?
ಸುಮದ ಚೆಲುವು ಯಾರ ಒಲವ ಸೂರೆಗೊಳ್ಳದು ?
ಅದರ ಅಂದ ಕಣ್ಗೆ ಹಬ್ಬ,
ಕಿವಿಗೆ ಕೇಳದಿರುವ ಕಬ್ಬ-
ಅದರ ನೋಟ ಸಾಲದೆ?
ಕರದೊಳದನು ಪಿಡಿದು ಮೂಸದಿರಲು ಹೃದಯ ತಣಿಯದೆ?

ಹುಚ್ಚು, ಹುಚ್ಚು, ಬರಿಯ ಹುಚ್ಚು; ರನ್ನೆಯಗಲೆ ಕೊರಗಲೇಕೆ?
ಎಂದು ಹೇಳೆ ಒಲಿದ ಹೃದಯ ತಾನು ಕೇಳ್ವುದೆ ?
ಅಂದು ಪಡೆದ ನಲವ ನೆನೆದು ತಾನು ಕೊರಗದೆ ?
ನೆನಪಿನಲ್ಲಿ ನಲವು ಇಹುದು;
ಕನಸಿನಲ್ಲು ನಲವು ಇಹುದು-
ಇನ್ನು ಬಾಳದೇತಕೆ?
ರನ್ನೆ ರನ್ನೆ ಎಲ್ಲೊ ಮೆರೆಯೆ ಒಲಿದ ಹೃದಯ ಕೊರಗದೆ?

೧೯೩೦]

## ಸುಮ್ಮನೆ ಸುಮ್ಮನೆ ನಾ ನಡೆಯುತಿರೆ

ಸುಮ್ಮನೆ ಸುಮ್ಮನೆ ನಾ ನಡೆಯುತಿರೆ
ನೀ ಬಂದೆ,
ಒಲವನು ತಂದೆ !

ನಿನ್ನಯ ಒಲವಿನ ಹೊಂಬೆಳಕಿನಲಿ
ದಾರಿಯ ನಡೆಯುತಲಿರೆ ಸಾಗಿ
ಬಿರ್ರನೆ ಬೀಸಿತು ಬಿರುಗಾಳಿ,
ಕ್ರೂರವಿಧಿಯ ಗಾಳಿ !
ಬೇರಾದೆವು ನಾವಂತು:
ಸೇರುವ ಬಗೆಯೆಂತು?

ಸುಮ್ಮನೆ ಸುಮ್ಮನೆ ನಾ ನಡೆಯುತಿರೆ
ನೀ ಬಂದೆ–
ಏತಕೆ ಬಂದೆ?

೧೯೩೩]

## ನಿನ್ನ ಹಂಗೇಕೆ ?

ನನ್ನ ಪ್ರೇಮದ ಹೆಣ್ಣೆ
ನನ್ನ ಬಾಳಿನ ಕಣ್ಣೆ
ನೀನಿಲ್ಲದೆಲೆ ನಲ್ಲೆ.
ನಾ ಕುರುಡನಲ್ಲೆ !
ನೀನಿರಲು ನನ್ನ ಬಳಿ
ನನ್ನ ಹೃದಯದಲಿ

ನನ್ನ ಕಣ್ ತೆರೆದಿತ್ತು
ಬಾಳು ನೆರೆದಿತ್ತು
ನೀನಿಲ್ಲ–ಕಣ್ಣೆರಡು
ಇದ್ದು ಅವು ಕುರುಡು.

ಕುರುಡು ಕಣ್ಣನು ಮುಚ್ಚಿ
ಬರಿಯ ಹೃದಯವ ಬಿಚ್ಚಿ
ನಿದ್ದೆ ಹೋಗುವ ಮುನ್ನ
ಕಾದಿರುವೆ ನಿನಗೆ;
ಬಾರನ್ನೆ ಬಾರೆನ್ನ
ನಿದ್ದೆಯರಮನೆಗೆ.

ಕಾಣದುದು ಕಾಣುವೆನು
ನಾನಂದು, ನಲ್ಲೆ;
ಕಣ್ಣಿದ್ದು ನೀನಿರದ
ಹಗಲ ನಾನೊಲ್ಲೆ.
ಇಲ್ಲದುದನಿರುಳೀಯೆ
ಹಗಲ ಹಂಗೇಕೆ?
ಅಲ್ಲಿಗೂ ಬಾರದಿರೆ
ನಿನ್ನ ಹಂಗೇಕೆ?

೧೯೩೫]

## ತಂಗಾಳಿ ತಣ್ಣಗಿತ್ತು !

ತಂಗಾಳಿ ತಣ್ಣಗಿತ್ತು,
ಬಾನ ಬಣ್ಣ ಬಣ್ಣಗಿತ್ತು !
ಬಾಳು ಹೂದೋಟದಲ್ಲಿ
ಜೊತೆಯ ಕೂಡಿ ಹರಿಯಿತು.

ಅದುವೆ ತಂಗಾಳಿ ಕೊರೆತ ;
ಅದುವೆ ಬಾನು ಸರ್ವಶೂನ್ಯ ;
ಅದುವೆ ಬಾಳು ಬಯಲುತೊರೆ–
ಒಡೆದು ಕವಲುವರಿಯಿತು.

ಇನಿಯಳೊಡನೆ ಇದ್ದುದರ್ಥ:
ಈಗ ಎಲ್ಲವೂ ವ್ಯರ್ಥ.

೧೯೩೭]

## ಬರಿದೆ ಹಾರಾಡುತಿಹೆಯೇಕಿಲ್ಲಿ

ಬರಿದೆ ಹಾರಾಡುತಿಹೆಯೇಕಿಲ್ಲಿ, ಓ ದುಂಬಿ,
ಸವಿಯೆ ಹೂ ಸಂಗವುಂಟೆಂದು ನೆರೆ ನಂಬಿ?
ಮರಳು ಮರಳೋ ಭ್ರಮರ ! ಬಯಲೊಳೇಕೀ ಭ್ರಮಣೆ?
ಒಲೆದೊಲೆದು ಕರೆವ ಹೂವಿಲ್ಲ, ಸಖನೆ !

೧೯೪೬]

## ನೆನಪಿದೆಯೆ?

ಯಾರೂ ಕಾಣದ ತೆರದಲ್ಲಿ
ದಿನದಿನವೂ ನಾವ್ ಜೊತೆಗೂಡಿ
ಒಲಿದು ಆಡಿದುದು ನೆನಪಿದೆಯೆ?

ಯಾರೂ ಇಲ್ಲದ ವೇಳೆಯಲಿ
ಇರ್ವರೂ ತೂಗುಯ್ಯಾಲೆಯಲಿ
ಆಡಿದ ಆಟವು ನೆನಪಿದೆಯೆ ?

ಅಣ್ಣನ ಮಗುವನ್ನು ನೀನೆತ್ತಿ
ನಿಂತಿರೆ, ಮಗುವೆನ್ನನು ನೋಡಿ
'ಮಾವ' ಎಂದುದದು ನೆನಪಿದೆಯೆ?

ಹಿಂದಿನಿಂದ ನಾ ಬಳಿಸಾರಿ
ಕಣ್ಣ ಮುಚ್ಚೆ, ಹೆಸರನು ಹೇಳಿ
ನೀನಿತ್ತುದೇನು ನೆನಪಿದೆಯೆ?

ಬರಿಹಣೆಯಲ್ಲಿರೆ ನೀನೊಮ್ಮೆ
'ತುಟಿಕೆಂಪನು ಕೊಡು ಹಣೆಗಿಡುವೆ'
ಎನ್ನಲು, ಕೊಟ್ಟುದು ನೆನಪಿದೆಯೆ?

ಎಲ್ಲವನೆಲ್ಲವನೆಲ್ಲವನೂ
ನೆನೆವೆನು ನೆನೆವೆನು ದಿನದಿನವೂ–
ನಿನಗೊಂದಾದರು ನೆನಪಿದೆಯೆ?

೧೯೩೯]

## ಹೆಸರ ಹಿಂದಿನ ರೂಪು

ನಿನ್ನ ಹೆಸರು ಕೇಳಲೊಡನೆ
        ಹಿಂದೆ ತಿರುಗಿದೆ;
ನೀನು ಕಾಣಲಿಲ್ಲ, ಮೋಸ
        ಹೋದೆ, ಕೊರಗಿದೆ.

ಆದರೇನು, ಹೆಸರ ಹಿಂದೆ
        ನಿನ್ನ ರೂಪದು
ಬಂದು ಬಗೆಯ ಕಣ್ಣ ಮುಂದೆ
        ನಿಂದು ಮೆರೆದುದು

ಎನಿತು ಕಾಲವಾದರೇನು
ಅದುವೆ ರೂಪದು
ಕಾಲನ ಕೂರ್ವಾಳ ಬಾಯ್ಗೆ
ಸಿಗದ ರೂಪದು !

ನೆನಪ ಮೂರ್ತಿಯಾಗಿ ನೀನು
ನಿತ್ಯ ಯೌವನೆ;
ಎಂದೆಂದಿಗು ಉಳಿಯಲಿದುವೆ
ದಿವ್ಯಭಾವನೆ.

೧೯೪೦]

## ಚಂದಿರನು ಮುಳುಗಿರಲು

ಚಂದಿರನು ಮುಳುಗಿರಲು ಚಂದ್ರಿಕೆಯದಿನ್ನೆಲ್ಲಿ ?
ಕುಸುಮ ಬಾಡಿರಲೆಲ್ಲಿ ಕಂಪಿನೊರತೆ ?
ತಂಗಾಳಿ ತೆಗೆದಿರಲು ತಂಪಿನೆರಚಿಕೆಯೆಲ್ಲಿ ?
ವೀಣೆ ನುಡಿಯದೆ ನಿಲ್ಲೆ ವಾಣಿಯೆಲ್ಲಿ ?

ಆದರೋ ನಲ್ಲೆ ! ನೀನೆನ್ನ ಬಳಿಯಿಲ್ಲದಿರಲೇನು ?
ನನ್ನ ಹೃದಯದೊಳಿನ್ನುಮಿದೆ ನಿನ್ನ ಎದೆಯೊಲವ ಜೇನು ?

೧೯೪೨]

# ಒಲವ ಪರಾಕು

ನಲ್ಲಳ ಮುಡಿಹದ ರೋಜದ ರೇಕು
ಹೊತ್ತಗೆ ಹಾಳೆಗಳೊತ್ತಿನಲಿ
ಇನ್ನು ಮುಸಿರುತಿದೆ ಒಲವ ಪರಾಕು
ನಲ್ಲಳೆ ಇಲ್ಲದ ಹೊತ್ತಿನಲಿ !

೧೯೪೬]

# ಚೆಲುವಿನಲಿ ಮಿಗಿಲಾದ ಹೆಂಗೆಳೆಯರಿರಲು

ಚೆಲುವಿನಲಿ ಮಿಗಿಲಾದ ಹೆಂಗೆಳೆಯರಿರಲು
ಬರಿಯ ರೂಪಿಗೆ ಮನವು ಮರುಳಾಗಲಿಲ್ಲ;
ಬಲು ಬೆಡಗ ತೋರುವಾ ಬಿನ್ನಾಣಗಳಿಗೆ
ಹರುಷಗೊಂಡೆನ್ನ ಹೃದಯವು ಸೋಲಲಿಲ್ಲ;
ಬಿತ್ತರದ ಬೊಗಸೆಗಂಗಳ ನೋಟದಲ್ಲಿ
ಸೊಗವ ಸೂಸುವ ಬಗೆಯ ಆಳವಿರಲಿಲ್ಲ;
ಹೊತ್ತು ಮುಳುಗುವ ಕೆಂಪ ನಗುವ ತುಟಿಗಳಲಿ
ಮುಗುಳುನಗೆಯಾಗರಳುವಾ ರಾಗವಿಲ್ಲ;
ನಿನ್ನ ಕಂಗಳಲೇನೊ ಬೆಳಕೊಂದು ಸುಳಿದು
ಬಂದು ಬೆಳಗಿದುದೆನ್ನ ಹೃದಯಮಂದಿರವ;
ರನ್ನೆ, ನಿನ್ನಧರಗಳ ರಾಗ ರಸದಲ್ಲಿ
ಮಿಂದೆನ್ನ ಹೃದಯ ನಿನ್ನೊಳು ಸೇರಿತಂದು.
ಮೇಲುನೋಟಕೆ ಮೆರೆವ ಚೆಲುವು ಕಡೆಗೊಮ್ಮೆ ಮಣ್ಣು ;
ಬಾಳ ಬೆಳಗುವ ಒಲವೆ ಚೆಲುವಿನಾ ತಿರುಳು, ಕಣ್ಣು !

೧೯೩೨]

# ಹಿಂದಿರುಗಿ ನೋಡಿದೆನು

ಹಿಂದಿರುಗಿ ನೋಡಿದೆನು : ಮೆಲ್ಲನಡಿಯಿಡುತ,
ಕೆದರು ಮುಂದಲೆಗುರುಳ ಸರಿಮಾಡಿಕೊಳುತ
ಬೆದರುಗಂಗಳಿನೊಮ್ಮೆ ಅತ್ತಿತ್ತ ನೋಡಿ
ಮುಂದೆ ಕೈ ಚಾಚಿದಳು, ಮೆಲ್ಲನುಸಿರಿದಳು:
'ಎಂದಾದರೊಂದು ದಿನ ಬಳಿಗೆ ಬಹೆನೆಂದು
ನಿನಗೆ ಹೇಳಿದುದುಂಟು–ಕೋಪವೇ ರಮಣ?
ಮನಕೆ ಬೇಸರವಾಯ್ತೆ ನನಗಾಗಿ ಕಾದು?
ಕುಂದನೆಣಿಸದೆ ಎನ್ನ ಸ್ವೀಕರಿಸು, ಇನಿಯ.'
ಬೆಳಕಳಿದ ಕುರುಡನಿಗೆ ಕಣ್ಣು ಬಂದಂತೆ
ಉಬ್ಬಿ ಹರುಷದಲಿ, 'ಬಾ! ಬಾಳ ಬೆಳಕಿನ ಬೊಂಬೆ !
ಮೊಗದೋರು ಮುದ್ದುಗಿಣಿ, ಬೇಗ ಬಾ ರಮಣಿ !
ಅಳಿದ ದಿನಗಳ ತಾಪಕೊಲವನೆರೆ' ಎಂದು
ತಬ್ಬಿಕೊಳಲೆನ್ನ ಕೈ ನೀಡಿ ಕಣ್‌ತೆರೆಯೆ–
ಹಗಲು ಬಂದಾ ಬೆಳಕನೊಯ್ಯಲಿರುಳಾಯ್ತು !

೧೯೩೨]

# — ರೆ

ನೀಲಿ ನಭದಲರುಗಳು, ಬೆಳ್ಳಿ ತಾರೆಗಳು:
ತೊಟ್ಟುಗಳಚುತೆ ನಿಲುಕದಾ ಹೂಗಳುದಿರೆ
ಕಟ್ಟುವೆನು ಎನ್ನೊಲವ ದಾರದಲಿ ಬಿಗಿದು–
ಮಾಲೆಯನು ಮನವೊಪ್ಪೆ ಮುಡಿಸುವೆನು ನಿನಗೆ;
ತೇಲುತ್ತ ಬಾನಿನಲಿ ಮುಂದುರುಳುತಿರುವ
ಚಾರು ಚಂದಿರ ರನ್ನಗನ್ನಡಿಯದೊಮ್ಮೆ
ಜಾರಿ ಮುಗಿಲೆಡವಿ ಕೆಳಗುರುಳಿದರೆ ನಾನು

ಬೀಳಗೊಡುವೆನೆ ಅದನು? ಹಿಡಿದು ನಿನಗೀವೆ;
ಬಿಳಿಯ ಬೆಳ್ದಿಂಗಳಿನ ಹೊಳೆವ ನವಿರುಡೆಯು
ಹರಿದು ಆಗಸದಿಂದ ಕೆಳಗೆ ಜಾರಿದರೆ
ನೆರಿಹಿಡಿದು ಧೂಳಡರದಂತೆ ಮಾಡಿಸಿಡುವೆ;
ತಳೆಯಲೀ ಸೀರೆಯನು, ಮುಡಿಯೆ ಮಾಲೆಯನು,
ಕರಕೆ ಈ ಕೈಗನ್ನಡಿಯ ಕೊಡುವೆ ರಮಣಿ;
ಬರಿ ಬಯಕೆಯಲ್ಲವಿದು ನೀ ಬಂದರೆ !

೧೯೩೨]

# ನೆನಪು

ಆಗಾಗ ಒಮ್ಮೊಮ್ಮೆ ನನ್ನಂತರಂಗದಲಿ
ಸುಳಿದಾಡುವುದು, ರನ್ನೆ, ನಿನ್ನ ಸೊಗ ನೆನಪು:
ನಲಿದಾಡುವುದು ಒಡನೆ ನಿನ್ನ ನಲ್‌ರೂಪು ;
ರಾಗಸಾಗರದ ಸಂಮೋಹಕ ತರಂಗದಲಿ
ಈಸಾಡುತಿರೆ ನಾನು ನಿನ್ನೊಡನೆ ಮೈಮರೆತು,
ಈ ಲೋಕ ಮರೆಯಾಗಿ ಯಾವುದೋ ಬೇರೊಂದು
ಆನಂದಸಾಮ್ರಾಜ್ಯ ತೋರುವುದು ಕಣ್ಮುಂದು–
ಭಾಸವಾಗುವುದೆಲ್ಲ ಶೂನ್ಯ, ನೀ ಹೊರತು.
ನಿನ್ನ ನೆನಪಿನ ನೆರಳ ಹಿಂದೆಯೇ ನೀನಿರುವೆ
ಪರಿಮಳವ ಮುಂದಟ್ಟಿ ಹಿಂದುಳಿದ ಅರಲಂತೆ;
ಮರದೊಳಡಗಿರಲೇನು? ಕೋಗಿಲೆಯ ಕೊರಲಂತೆ,
ನಿನ್ನ ನೆನಪೆನಗಿರಲು, ನೀನೊಡನೆಯೇ ಇರುವೆ.
ನನ್ನ ಮನದಲಿ ನಿರುತ ನೆಲಸಿರಲಿ ನಿನ್ನ ನೆನಪು;
ಒಡನಿರದೆ ನಿನ್ನ ತನು, ನಿನ್ನ ಮನ, ನಿನ್ನ ರೂಪು?

೧೯೩೪]

# ಬೀದಿಯಲಿ ಹೋಗುತಿರೆ ನಿನ್ನ ಕಂಡೆನು

ಬೀದಿಯಲಿ ಹೋಗುತಿರೆ ನಿನ್ನ ಕಂಡೆನು ಅಂದು:
ಗೆಳತಿಯರ ಜೊತೆಗೂಡಿ ಮೆಲು ನಡಗೆ ನಡೆಯುತ್ತ
ಕೆಳಗೆ ದಿಟ್ಟಿಯನಿಟ್ಟು ನೀ ನಡೆದೆ; ಅಹ !
ಹೋದ ಒಂದಿನ ಹಬ್ಬ ಹಿಂದಿರುಗಿದುದು ಕಣ್ಗೆ.
ಅದರೆನ್ನನು ನೋಡಿ ನೀನೇಕೆ ನಗಲಿಲ್ಲ ?
ನಟ್ಟ ದಿಟ್ಟಿಯನೇಕೆ ನೆಲದಿನಗಲಿಸಲಿಲ್ಲ,
ಕಟ್ಟಿದಿರು ಬಂದೆನ್ನ ಕಡೆಗೆ ಹೊರಳಿಸಲಿಲ್ಲ?
ಕಾದು ನಿಂತೆನು–ನೀನು ಕಾಣದಾಗುವವರೆಗೆ.
ಲೇಸಾಯ್ತು ಬಿಡು ರನ್ನೆ : ನೀನೆನ್ನ ನೋಡಿಯೂ
ನೋಡದಂತಿರಲಂದು ಎಂತು ಸೈರಿಸುತಿದ್ದೆ–
ಎಂದು ತೃಪ್ತಿಯ ತಂದು ಮನದೊಳಗೆ, ಮುಂಬರಿದೆ !
ಈಸು ನಗೆಯನು ಬೀರಿ, ನಲ್ಮೆ ನೋಟವ ಹರಿಸಿ
ಓಡಿಹೋದರು ರನ್ನೆ ಕೂಡುತಿದ್ದೆನು ಅವಳ–
ಎಂದಾಸೆ ಒಡನುಸಿರೆ ಕೊರಗಿದೆನು ಬರಿದೆ !

೧೯೩೫]

# ನಿನ್ನ ನೋಡಿದ ಚಣದಿ ನಿನ್ನ ಕೆಳೆ

ನಿನ್ನ ನೋಡಿದ ಚಣದಿ ನಿನ್ನ ಕೆಳೆ ನನಗಂದು
ಏಕಾಯ್ತು ? ನನ್ನ ಸಂಗವು ತಾನೆ ನಿನಗೇಕೆ
ಬೇಕಾಯ್ತು ? ಕೆಳೆ ಬಲಿತು ಹೂತುದೇಕೊಲವಾಗಿ?
ನಿನ್ನ ಬಾಳೆನ್ನ ಬಾಳೊಳು ಬೆರೆತುದಂತೇಕೆ?
ಇನ್ನುಳಿದ ಕೆಲಸಗಳನೆಲ್ಲವನು ನಾ ತೊರೆದು
ಹಿತ್ತಿಲಲಿ ನಿನಗಾಗಿ ಏಕೆ ಕಾಯುತಲಿದ್ದೆ?
ಕತ್ತಲಾಗುವ ಮುನ್ನ ಕದ್ದೇಕೆ ನೀ ಬಂದು

ಕೆನ್ನೆಕೆನ್ನೆಗೆ ಒತ್ತಿ ನನ್ನ ಬಳಿಯಿರುತಿದ್ದೆ?
ಅಂದು ತೋಳ್‌ಸೆರೆಗೇಕೆ ನೀ ಬಂದಿಯಾಗಿದ್ದೆ?
ತುಟಿಮುತ್ತುಗಳಿಗೇಕೆ ಸವಿಸಮ್ಮತಿಯನಿತ್ತೆ?
ಒಲವ ದೀವಿಗೆಗೇಕೆ ಅಷ್ಟು ತೈಲವನೆರೆದೆ?
ಇಂದು ನೀನೊಡನಿಲ್ಲ, ತೈಲವಿಂಗಿಹುದೆಲ್ಲ;
ದಿಟವ ಸಟೆಮಾಡದೇಕೊಲವಿನ್ನುಮಾರದೆಯೆ
ಜ್ವಲಿಸುತಿದೆ ಹೃದಯದಲಿ, ದಹಿಸುತಿದೆ ಹೃದಯವನು?

೧೯೩೫]

## ನನ್ನಯ ಮನೋಮಂದಿರದೆ

ನನ್ನಯ ಮನೋಮಂದಿರದೆ ಬಿಡದೆ ನೆಲಸಿರುವ
ನಿನ್ನ ಮೂರ್ತಿಗೆ ಮರೆವ ತೆರೆ ಹಾಕಬೇಕೆಂದು
ಯತ್ನಿಸುವೆ; ಆಗದು, ಆಗದಾಗದು ರನ್ನೆ !
ನಿನ್ನ ಮರೆವೆನು ಎಂತು ನೀನೆನ್ನ ಬಳಿಯಿರಲು ?
ಮನ್ಮನೋರಾಜ್ಯದಲಿ ರಾಣಿಯಾಗಿಹೆ : ಅಲ್ಲಿ
ಓಡಾಡಿ ಕುಣಿದು ಮಾತಾಡಿ ಹರುಷವ ಸೂಸಿ
ಹೂಡಿ ದಿಟ್ಟಿಯ ಕಣೆಯ ಮೋಹಜಾಲವ ಬೀಸಿ
ಉನ್ಮತ್ತನನು ಮಾಡುತಿರಲೆಂತು ನಾ ಮರೆವೆ?
ಆದರಿಲ್ಲಾ ಶಾಂತಿ ಮನಕೆ ಮರೆವನಕ ನಿನ್ನ:
ಹೊರದೂಡಲೆಂದೊಮ್ಮೆ ಬಗೆವೆ; ಆದರೆ ನೀನು
ನೆನಪ ನೆರಳಿನ ಬೊಂಬೆ, ಕೈಗೆ ಸಿಗದಿಹೆಯಲ್ಲೆ !
ಮೈದೋರು ಬಾ ನೀನು, ನನ್ನ ಕೈಸೆರೆಯಾಗು;
ಹೊರದೂಡಿ ನಿನ್ನ....ಅಯ್ಯೋ, ಇಲ್ಲ–ನಾನಂದು
ಮನಮರೆತು ಮೈಮರೆತು ನಿನ್ನನಪ್ಪುವೆ ನಲ್ಲೆ !

೧೯೩೫]

# ಬಾಳ ಮರುಭೂಮಿಯಲಿ

ಬಾಳ ಮರುಭೂಮಿಯಲಿ ನಿನ್ನ ನಲ್‌ನೆನಪುಗಳು
‘ಒಯೆಸಿಸು’ಗಳಂತೆ : ಅವು ಕೂಡ, ಓ ನಲ್ಲೆ,
ಬೀಳದಿವೆ ಬಗೆಗಣ್ಣೆ ; ನಿನ್ನ ಕಾಣುವ ಆಸೆ
ಮೃಗಮರೀಚಿಕೆಯಂತೆ ಮುಂದುಮುಂದೋಡುತಿದೆ:
ಬೆಂಬತ್ತಿರಲು ಅದನು, ಎಂದಾದರೊಂದು ದಿನ
ಅದರ ತಿಳಿನೀರ ಎದೆತಣಿಯ ಹೀರಲೆಬೇಕು
ಎಂಬ ಛಲದಲ್ಲಿರಲು, ಬಿರುಗಾಳಿಯೇಳುವುದು–
ನಿಷ್ಠುರ ಪ್ರಪಂಚದತ್ಯುಗ್ರ ಬಿರುಗಾಳಿ:
ಸುತ್ತಮುತ್ತೆಲ್ಲ ಮರಳಿನ ಮೋಡಗಳ ತಂಡ
ತಿಂತಿಣಿಸಿ, ಕಣ್ಣು ಕಿವಿ ಬಾಯ್ ಮೂಗುಗಳಿಗೆಲ್ಲ
ಮರಳಡಸಿದಂತಾಗಿ, ಆಸೆಗೀಸೆಗಳೆಲ್ಲ
ಎತ್ತೆತ್ತಲೋ ತೂರಿ ಮರಳೊಡನೆ ಮರಳೆನಿಸಿ
ನನ್ನ ನಾವರಿಸುತಿರೆ, ಬಿರುಗಾಳಿ ಮೊರೆಯುವುದು :
‘ಆಸೆ ಮರಳಿನ ಗೋರಿ, ಬಾಳ ಮರುಭೂಮಿಯಲಿ’

೧೯೪೧]

# ನಾ ಕೋದಿಹ ಮಾಲೆ

ನಾ ಕರೆದೆನು; ಕರೆಯುತಲಿಹೆ; – ಬಾ ಬಾ ಬಾ ಬಾಲೆ !
ಸ್ವೀಕರಿಸಿದೊ, ನಿನಗಾಗಿಯೆ ನಾ ಕೋದಿಹ ಮಾಲೆ !
ಹಿಂದಿನ ಸವಿದಿನಗಳ ಸೊಗ
ನೆನಪುಗಳನು ಕೊಯ್ದು,
ಕುಂದದೆ ಉಕ್ಕುವ ಒಲವಿನ
ಪನಿ ನೀರನು ಹೊಯ್ದು,

ನಲ್ನುಡಿಗಳ ನಾರಿಂದದ–
ನೆಲ್ಲವ ನಾ ಕಟ್ಟಿ

ಇಲ್ಲಿರಿಸಿಹೆ, ನೋಡಿಲ್ಲಿ:
ಹೃದಯದ ಹೂಬುಟ್ಟಿ.

ಬಾರೆನ್ನುತ ಕರೆಯುವೆನು–ಬಾ ಬಾ ಬಾ ಬಾಲೆ !
ಹೃದಯವು ಹಾತೊರೆಯುತಲಿದೆ–ನೀನಾ ದನಿ ಕೇಳೆ.

ನಿನ್ನಯ ಮೌನದ ನುಡಿಗಳ
ನಾ ಕೇಳುವೆನಿಲ್ಲಿ ;
ನನ್ನಯ ಈ ಕರೆ ಕೂಗನು
ನೀ ಕೇಳೆಯ ಅಲ್ಲಿ ?

ನಿನ್ನಯ ಕಿರಿ ಹೃದಯದ 'ಪಟ
ಪಟ' ಕೇಳುವೆನಿಲ್ಲಿ ;
ನನ್ನಯ ಬಿರಿಯುವ ಹೃದಯದ
ಮೊರೆ ಕೇಳದೆ ಅಲ್ಲಿ?

## ಮಡಿದ ಇನಿಯಳ ಮಾತು

ಮಡಿದ ಇನಿಯಳು ಮತ್ತೆ ಬಂದಿಂತು ಉಸಿರಿದಳು :
'ಇಳೆಯಲ್ಲಿ ನಿನ್ನೊಡನೆ ಇರಲು ನನಗೆ
ಒಡೆಯ ದಯಪಾಲಿಸಿ ಹನೊಂದು ಗಂಟೆಯ ಬಿಡುವ ;
ಎಂತದನು ಕಳೆಯುವುದೊ, ನೀನೆ ಹೇಳು.'

'ಮೊದಲಿನಂತೆಯೆ, ರಮಣಿ' ಎಂದೊರೆದೆ; ಒಡನೆಯೇ
ಜಗಳವಾಡಿದೆವಂದು ಮೊದಲಿನಂತೆ.
ಕದನವನು ಕೊನೆಮಾಡಿ ಸಂಧಿಗೆಳಸುತ್ತಿರಲು,
ದೊರೆತ ಗಂಟೆಯ ಕಾಲ ದಾಟಿಹೋಯ್ತು !

೧೯೩೩]

*-Stephen Philips*

## ಜಯವಾಗಲಿ ಇಳೆಗೆಲ್ಲ ಜಯ

ಸ್ವತಂತ್ರ ಭಾರತದರುಣೋದಯದ
ಮುಂಗಿರಣವದೋ ಮೂಡುತಿದೆ ;
ಶತಮಾನದ ಮೇಲಿನ ಕಡು ದಾಸ್ಯವ
ಭಂಗಗೈದ ತಮವೋಡುತಿದೆ.

ಸ್ವಾತಂತ್ರ್ಯದ ಹರಿಕಾರರು ಮಲಗಿದ
ಜನರನೆಚ್ಚರಿಸ ಬಂದಿಹರು;
ಜಾತಕದೊಲು ಬಾಯ್ ಬಿಡುತಿಹ ಜನಕೆ
ಒಸಗೆ ಭರವಸೆಯ ತಂದಿಹರು.

ಇನ್ನೂ ಮಲಗಿರಲೇನು ಚೆಂದ? ಮೈ
ಜಡತೆಯ ಕೊಡಹುತ ಎದ್ದೇಳಿ;
ತನ್ನ ಪಾಲಿಗಿಹ ನಾಡಿನ ಸೇವೆಯ
ಭಾಗವ ಸಲಿಸುವ ಮನ ತಾಳಿ.

ಯಾರೋ ಬಿಡುಗಡೆ ನೀಡುವರೆಂದು
ಬೇಡುತಲಿರೆ ಎಂದಿಗೆ ಮುಕುತಿ?
ಸಾರಿಬರುವುದು ತಾನೇ ಬಿಡುಗಡೆ
ಹೂಡಲೆಮ್ಮ ಆತ್ಮದ ಶಕುತಿ.

ಇಂದಿನ ಜಯ ಹೊರಶಕ್ತಿಯ ಹುಸಿಜಯ
ಹಿಂಗಲಿಲ್ಲ ಲೋಕದೊಳು ಭಯ;
ಮುಂದೆ ಭಾರತವು ತೋರುವ ಆತ್ಮದ
ಜಯವಾಗಲಿ ಇಳೆಗೆಲ್ಲ ಜಯ.

## ತೋರಣ ಕಟ್ಟೋಣ !

ಹಬ್ಬ ಬಂತು, ಓ ಹಬ್ಬ ! ಕೆಳೆಯರೇ,
ತೋರಣ ಕಟ್ಟೋಣ !
ಹಬ್ಬ ಹಬ್ಬಕೂ ಮನೆಯ ಬಾಗಿಲಿಗೆ
ತೋರಣ ಕಟ್ಟೋಣ !

ಮಾವಿನ ತೋಪಿಗೆ ಬನ್ನಿರಿ, ಕೆಳೆಯರೆ,
ತೋರಣ ಕಟ್ಟೋಣ ;
ಬೆಳಗಿನ ಜಾವ ಮುಗಿಯುವ ಮುನ್ನ
ತೋರಣ ಕಟ್ಟೋಣ !

ಚುಕ್ಕಿಯಾಗಸದೆ ಮಾಸುವ ಮುನ್ನ
ತೋರಣ ಕಟ್ಟೋಣ !
ಹಕ್ಕಿ ಗೂಡಿನಲಿ ಎಚ್ಚರುವ ವೇಳೆ
ತೋರಣ ಕಟ್ಟೋಣ !

ಕೆಂಪು ಮೂಡಲಲಿ ಹುಟ್ಟುವ ಹೊತ್ತಿಗೆ
ತೋರಣ ಕಟ್ಟೋಣ !
ತಂಪು ಹೊತ್ತಿನಲೆ ಸೊಂಪು ತಳಿರಿನ
ತೋರಣ ಕಟ್ಟೋಣ !

ಎಲ್ಲರೊಂದಾಗಿ ಉಲ್ಲಸದಿಂದ
ತೋರಣ ಕಟ್ಟೋಣ ;
ನಲ್ಲ ನಲ್ಲೆಂಪುರು ಏಳುವ ಮೊದಲೆ
ತೋರಣ ಕಟ್ಟೋಣ !

ಅಕ್ಕ ರಂಗೋಲಿಯಿಕ್ಕುವ ಮೊದಲೆ
ತೋರಣ ಕಟ್ಟೋಣ ;
ಚಿಕ್ಕ ಮಕ್ಕಳೇಳುವ ಹೊತ್ತಿಗೆ ಹೊಸ
ತೋರಣ ಕಟ್ಟೋಣ !

ಸುಂದರಾಂಗಿಯರ ಚೆಂದದ ಹಬ್ಬಕೆ
ತೋರಣ ಕಟ್ಟೋಣ ;
ನಂದಗೋಕುಲನ ಹೋಲುವ ಮನೆಗೆ
ತೋರಣ ಕಟ್ಟೋಣ !

ದೇವ ದೇವನಾನಂದದ ಹಬ್ಬಕೆ
ತೋರಣ ಕಟ್ಟೋಣ ;
ಪಾವನಮೂರ್ತಿ ಮನೆಗೆ ಬರುವನು
ತೋರಣ ಕಟ್ಟೋಣ !

ಹೊಸತು ಹಬ್ಬವಿದೊ ಕನ್ನಡ ಹಬ್ಬಕೆ
ತೋರಣ ಕಟ್ಟೋಣ ;
ಒಸಗೆಯಾಗಲಿದೆ ನಾಡು ನಾಡಿಗೇ
ತೋರಣ ಕಟ್ಟೋಣ !

ಸಾಲು ಹಬ್ಬದಲಿ ಸಾಲು ಸಾಲಾಗಿ
ತೋರಣ ಕಟ್ಟೋಣ ;
ಸಾಲ ಸೋಲಗಳು ಇರಲಿ
ತೋರಣ ಕಟ್ಟೋಣ !

ಪಂಚ ಭಕ್ಷ್ಯ ಇಲ್ಲಾ ಎನಲೇತಕೆ?
ತೋರಣ ಕಟ್ಟೋಣ !

ವಂಚನೆಯಿಲ್ಲದ ಬದುಕಿನ ಹಬ್ಬಕೆ
ತೋರಣ ಕಟ್ಟೋಣ !

ಮನೋಮಂದಿರಕೆ ನಿಚ್ಚಹಸುರಿನಾ
ತೋರಣ ಕಟ್ಟೋಣ !

ಹೃದಯ ಕಲಶದಾ ಮುಂಗಡೆ ಹರುಷದ
ತೋರಣ ಕಟ್ಟೋಣ !

ಬಂದಿತು ಬಿಡುಗಡೆ ! ಬಿಡುಗಡೆ ಹಬ್ಬಕೆ
ತೋರಣ ಕಟ್ಟೋಣ !

ನಾಡು ನಗುತಿರಲಿ ! ಅಶೋಕ ತಳಿರಿನ
ತೋರಣ ಕಟ್ಟೋಣ !

# ಭೂತದಯೆ

ಶ್ರಾವಣದ ಶನಿವಾರ ನಮ್ಮ ತಂದೆಯು ನಾವು
ಅಣ್ಣ ತಮ್ಮದಿರೆಲ್ಲ ಹಣೆಗೆ ನಾಮವ ತಿದ್ದಿ,
ತಾಳ ತಂಬೂರಿ ಮದ್ದಲೆ ವಾದ್ಯಗಳ ಜೊತೆಗೆ
ಎಲ್ಲ ದೇವರ ನಾಮುಗಳ ಬಲ್ಲ ರೀತಿಯಲಿ
ಹಾಡುತ್ತ, 'ಸಂಚಾರಿ' ಹೊರಟು, ಮನೆ ಮನೆಗೂ
ಹೋಗಿ ಬಿಕ್ಕೆಯ ಬೇಡಿ ತಂದ ಬೀಯವನೆಲ್ಲ
ಕಡೆಯ ಶನಿವಾರ ಬ್ರಾಹ್ಮಣ ಸುಮಂಗಲಿಯರಿಗೆ
ಸಂತರ್ಪಣೆಯ ಗೈದು, ಮನೆತನದ ಪದ್ಧತಿಯ
ಪರಿಪಾಲಿಸುವ ಕಾಲವೊಂದಿತ್ತು. ಆಗೊಮ್ಮೆ
ನಡೆದ ಅತ್ಯಲ್ಪ ಸಂಗತಿಯು ಈ ಶನಿವಾರ
ನೆನಪಾಯ್ತು, 'ಚೆಲ್ಲಿದಾ ಹಾಲನ್ನು ತುಳಿಯದಿರಿ'
ಎಂದೆನ್ನ ಮನೆಯಾಕೆ ಮಕ್ಕಳಿಗೆ ನುಡಿದಂದು.
ಕಿರಿದು ಸಂಗತಿ, ಅದರದರ ತತ್ತ್ವವು ಹಿರಿದು
ಎಂದೆನಗೆ ತೋರುವುದು : ಅದಕಾಗಿ ಈ ಲೇಖ.

ತಿರುಮಲಾಚಾರ್ಯರೆಂಬವರು ಶ್ರೀವೈಷ್ಣವರು ;
ನಮ್ಮ ಮನೆಯೆದುರಿನೊಳೆ ಅವರ ಮನೆ; ಎಪ್ಪತ್ತು
ವರ್ಷಗಳ ಮುಪ್ಪಿನಲ್ಲಿಯು ಮುಖದಿ ತೇಜಸ್ಸು
ನೆಲಸಿತ್ತು; ಕುಗ್ಗಿದ್ದೊಡೇನೊಡಲು, ಅಂತೆಯೇ
ಬಾಗಿದ್ದೊಡೇಂ ಬೆನ್ನು? ಕುಗ್ಗಿದ್ದುದಿಲ್ಲ ಬಲ,
ಬಾಗಿದ್ದುದಿಲ್ಲ ಛಲ: ತಮ್ಮ ಮಹಡಿಯ ಮನೆಯ
ಬಾಡಿಗೆಗೆ ಕೊಟ್ಟು, ತಾವೊಂದು ಕೋಣೆಯಲಿದ್ದು
ಒಂಟಿ ಬಾಳನು ಬಾಳುತಿದ್ದರವರನುದಿನವು;
ಹೋದ ಹೆಂಡತಿಗಾಗಿ ಕೊರಗುವರು ಒಮ್ಮೊಮ್ಮೆ;
ಎಲ್ಲೋ ಕಣ್ಮರೆಯಾದ ದತ್ತಪುತ್ರನ ನೆನೆದು
ಮರುಗುವರು ಮತ್ತೊಮ್ಮೆ. 'ಬಹು ಧನಿಕ, ಬಹು ಜಿಪುಣ;
ಯಾರಿಗಾಗನಿತು ಧನವನು ಕೂಡಿ ಕಾಪಿಡುವ,

ಏತಕಾಗೊಂಟಿಯಲಿ ದೇಹವನು ತೇಯುವನು?
ಬುದ್ಧಿಯಿಲ್ಲದ ಮುದುಕ' –ಎನ್ನುವರು ಬೀದಿಜನ.
ಅದರಾತನ ದೈವಭಕ್ತಿ, ಮಡಿ, ಆಚಾರ,
ನಿತ್ಯನೇಮಗಳು–ಇವು ಎಲ್ಲರಿಗೆ ಬಹು ಮೆಚ್ಚು.
ಜಿಪುಣನೆನಿಸಿದ್ದರೂ ತಿರುಕರಿಗೆ ಕೊಡುವ ಕೈ.

ಈ ಹಿರಿಯರಿಗೆ ನಮ್ಮ ತಂದೆಯಲಿ ವಿಶ್ವಾಸ,
ಬಹಳ ಗೌರವ; ನಾವು ಸಂಚಾರ ಹೊರಟಂದು,
ನಮಗಾಗಿ ನೇಮದಲಿ ಭಕ್ತಿಯಲಿ ಕಾದಿದ್ದು,
ಹಿರಿಯರಾದರು ತಾವು, ನಾವು ಹೋದೊಡನೆಯೇ
ನಮ್ಮ ತಂದೆಯ ಕಾಲಿಗೆರಗುವರು–ಹರಿದಾಸ
ಎಲ್ಲರಿಗು ಹಿರಿಯನೆಂದವರೆಣಿಕೆ; ಅಂತೆರಗಿ,
ಸೇರಿನಳತೆಯ ಬಿದಿರಿನಂಡೆ ಗೋಪುರ ತುಂಬೆ
ತುಂಬಿ ಸಣ್ಣಕ್ಕಿಯನು ತಂದೆಮ್ಮ ಜೋಳಿಗೆಗೆ
ಬಲು ಎಚ್ಚರಿಕೆಯಿಂದ ಸುರಿಯುವು; ಅದೊಡೇಂ,
ನಾಲ್ಕು ಅಕ್ಕಿಯ ಕಾಳು ನೆಲದಮೇಲುದುರುವುದು;
ಅದನವರು ಇಮ್ಮಡಿಯ ಎಚ್ಚರಿಕೆಯಿಂದಾಯ್ದು
ನಮ್ಮ ಜೋಳಿಗೆಗೋ ತಮ್ಮ ಬಿದಿರಂಡೆಗೋ
ಹಾಕುವರು: ಇದ ನೋಡನೋಡುತ್ತ ನಮ್ಮಲ್ಲಿ
ಅವರು ಜಿಪುಣರೆ ಅಹುದು ಎಂಬೆಣಿಕೆ ಬಲವಾಯ್ತು.

ಸಂಚಾರಕೆಮ್ಮೊಡನೆ ಸುಬ್ಬಣ್ಣನವರೆಂಬ
ನಮ್ಮ ತಂದೆಯ ಗೆಳೆಯರೊಮ್ಮೆಯೂ ತಪ್ಪದೆಯೆ
ಬರುತಲಿದ್ದರು; ಅವರ ಪ್ರಕೃತಿ ಹಾಸ್ಯದ ಪ್ರಕೃತಿ ;
ಹೋದ ಮನೆಯಲ್ಲೆಲ್ಲ ಹಾಡುವರು, ಇಲ್ಲದಿರೆ
ಏನಾದರೂ ಹಾಸ್ಯ ಮಾಡುವರು. ಅವರೊಮ್ಮೆ.
ತಿರುಮಲಾಚಾರ್ಯರಾ ಅಕ್ಕಿ ಆಯುವ ಕೆಲಸ
ಕಂಡು–'ಸ್ವಾಮೀ, ತಿರುಮಲಾಚಾರ್ಯರೇ, ನೀವು
ದಾನದಲಿ ಧಾರಾಳ ತೋರುವಿರಿ: ಅದು ಸರಿಯೇ;

ನಮಗೆ ಸೇರಕ್ಕಿಯನು ನೀಡುವಿರಿ: ಸಂತೋಷ ;
ಇರುವೆಗಳ ವಿಷಯದಲಿ ಭೂತದಯೆಯನು ತೋರೆದು,
ಅವಕ್ಕಿಲ್ಲದಂತೇಕೆ ಬಿದ್ದ ಅಕ್ಕಿಯನಾಯ್ದು
ನಮಗಿಕ್ಕುವಿರಿ ? ನನಗೆ ಸಾಕು ಮೂರೇ ಪಾವು.
ಮೂರು ಕಾಳವಕಿರಲಿ.'

ಈ ಕೊಂಕುನುಡಿಗೇಳಿ
ಮುದುಕ ಕೋಪಿಸಿಲಿಲ್ಲ; ಇಂತು ನುಡಿದರು ನಗುತ:
'ಭೂತದಯೆ ತೋರುವುದು ಬಹು ಕಷ್ಟ, ಸುಬ್ಬಣ್ಣ.
ನಾವು ಹಾಕಲಿ ಬಿಡಲಿ, ಅಡಿಗೆಮನೆಯುಗ್ರಾಣ
ಮೊದಲಾಗಿ ಎಲ್ಲೆಲ್ಲು ಇರುವೆಗಳೆ ತುಂಬಿಹವು,
ತಮ್ಮ ಪಾಲಿನ ತಿನಿಸ ಕೇಳದೆಯೆ ಕೊಳ್ಳುವುವು.
ಹುಟ್ಟಿಸಿದ ಹರಿ ಇರುವೆಗಾಹಾರ ತೋರದೆಯೆ
ಹೋಗುವನೆ? ನಮ್ಮಿಂದ ಇರುವೆಗಳು ಬದುಕುವುವು
ಎಂಬೆಣಿಕೆ ಬರಿ ಹಮ್ಮು. ಅಂತವಕೆ ಆಹಾರ
ನೀಡಬೇಕೆಂಬೆಯೋ? ಇರುವೆಗೂಡಿನ ಬಳಿಗೆ
ಹೋಗಿ, ಹಿಡಿ ನುಚ್ಚೊ ಸಕ್ಕರೆಯೊ ಏನಾದರೂ
ಚೆಲ್ಲಿ ಬಾ. ನಡೆವ ಕಡೆ ನಾಲ್ಕಕ್ಕಿ ಕಾಳುಳಿಸಿ,
ಅದಕಾಗಿ ಹರಿದು ಬಹ ಹತ್ತಿರುವೆಗಳ ನಾವು
ಕಂಡೊ ಕಾಣದೆಯೊ ತುಳಿದವನು ಕೊಂದೂ ಕೂಡ
ಅರಿಯುದಿರುವುದೆ ಭೂತದಯೆಯೇನು, ಸುಬ್ಬಣ್ಣ?'

ಸುಬ್ಬಣ್ಣನವರಿದಕೆ ಉತ್ತರವ ಕೊಡಲಿಲ್ಲ:
ಅಂದಿನಿಂ, ಶನಿವಾರ ಸಂಚಾರ ಕಾರ್ಯದಲಿ
ಉದುರಿದಕ್ಕಿಯ ಕಾಳನಾಯ್ವ ಹೊಸ ಕೆಲಸವನು
ಕೈಕೊಂಡು ನಡಸುತ್ತ ಬರತೊಡಗೆ, 'ಸುಬ್ಬಣ್ಣ
ಬಲು ಜಿಪುಣ' ಎಂಬ ಹೊಸ ಬಿರುದವರಿಗಾಯ್ತು. ಆ
ಬಿರುದುನುಡಿ ಕೇಳಿ ನಸುನಗುತ್ತಿದ್ದರವರು.

# ಬಿಡುವು*

ಎಂಥ ಬಾಳಿದು ಬಾಳು, ಚಿಂತೆಯೇ ತುಂಬಿ
ನಿಂತು ನಿಟ್ಟಿಸೆ ವೇಳೆಯಿಲ್ಲದಿರೆ ನಮಗೆ

ಮರದ ಅಡಿಯಲಿ ನಿಂತು ಕುರಿ ಹಸುಗಳಂತೆ
ಮರೆತು ಮೈಯನು, ನೋಡಲೆಮಗೆ ಹೊತ್ತಿಲ್ಲ.

ಕಾಡಿನೆಡೆ ಸುಳಿದಂದು, ತಾವಾಯ್ದ ತಿನಿಸುಗಳ
ಗೂಡಿಗೊಯ್ಯುವ ಅಳಿಲ ನೋಡೆ ಹೊತ್ತಿಲ್ಲ.

ಇರುಳ ಮೀನುಗಳಂತೆ ಮೀನುಗಳು ತುಂಬಿರುವ
ತೊರೆಗಳನು ತಿಳಿಹಗಲಿನಲಿ ನೋಡೆ ಹೊತ್ತಿಲ್ಲ.

ಚೆಲುವುವೆಣ್ಣಿನ ನೋಟ, ಅವಳ ಅಡಿಗಳ ಮಾಟ,
ಒಲೆವ ಕುಣಿಯುವ ಬೆಡಗು–ಇವ ನೋಡೆ ಹೊತ್ತಿಲ್ಲ.

ಚಿಗುತು ಕಣ್ಣಲಿ ಅವಳ ನಗೆಯ ಕುಡಿ ಬಾಯಲ್ಲಿ
ಮುಗುಳೊಡೆವವರೆಗೆ ಕಾದಿರಲು ಹೊತ್ತಿಲ್ಲ.

ಇಂಥ ಬಾಳ್ ಬಡ ಬಾಳು : ಚಿಂತೆಯೇ ತುಂಬಿ
ನಿಂತು ನಿಟ್ಟಿಸೆ ವೇಳೆಯಿಲ್ಲದಿರೆ ನಮಗೆ.

---

* ಭಾವಾನುವಾದ : William H. Davies ಅವರ 'Leisure'.

# ಹಸಿವು

ಹಸಿವು ಹಸಿವೆಲ್ಲೆಲ್ಲು ಹಸಿವು ಹಸಿವು
ಎಲ್ಲರನು ಅಡಸಿ ಪೀಡಿಸುತಿಹುದು ಹಸಿವು.

ರಾಷ್ಟ್ರನಾಯಕರಿಗೆ ರಾಜ್ಯಗಳಿಕೆಯ ಹಸಿವು
ಸೇನಾಧಿಪತಿಗಳಿಗೆ ಸಮರಕೀರ್ತಿಯ ಹಸಿವು
ವಣಿಕರಾಜರಿಗೆಲ್ಲ ಲಾಭಕೊಳ್ಳೆಯ ಹಸಿವು:
        –ಅದರಿಂದ ನಮಗೆ ಹಸಿವು !

ಮಲಗಿದ್ದ ರಣಮಾರಿಯೆಚ್ಚತ್ತಳೆಂದೊ:
ನರಮಾಂಸ ನೆಣ ನೆತ್ತರುಣುವವಳ ಹಸಿವು
        ತೀರಿಲ್ಲವಿನ್ನೂ:
        ತಣಿಸಲವಳನ್ನು,
ಅವಳ ಪೂಜಾರಿಗಳು ಇಕ್ಕುತಿಹರಿಂದು
        ಅವಳಿಗೌತಣವ;
ಅದಕಾಗೆ ಮಾಡುತಿಹರೆಲ್ಲ ಕೂಡಿ
        ಮಂದಿ ಮಾರಣವ,
        ನೆರಹಿ ರಣವ.
ಅವರ ಹಸಿವೆಮ್ಮಹಸಿವೆಲ್ಲಕ್ಕು ನಾವೆ ಬರಲಿ ಕಟ್ಟಕಡೆಗೆ !
ಬವರವೇ ಇಳೆ ಬಾಳು, ಬರವೆ ಬಡವರ ಪಾಲು,
                ಎಂದಿನಿಂದಿಲ್ಲಿವರೆಗೆ !

## ಅಸ್ಪೃಶ್ಯನಾರು?

'ಅಸ್ಪೃಶ್ಯ ಚಂಡಾಲ ಪಂಚಮ ಹೊಲೆಯ'ರೆಂದು
ದೂರವಿಟ್ಟಹೆವಲ್ಲ ನಮ್ಮ ಸಮ ಸೋದರರ?
ಅನ್ಯತ್ರವಿಲ್ಲದಿಹ ಹೊಲೆಯದೇನವರ ?
ನಾವೆ ಮಾಡಲು ಹೇಸುವೆಮ್ಮ ಸೇವೆಯನಿಂದು
ಅವರು ಮಾಡುತಲಿಹುದೆ ಅವರಿಗಂಟದ ಹೊಲೆಯೆ?
ಸಲ್ಲದಿಲ್ಲದ ಸತ್ತ ಶಾಸ್ತ್ರದಾಧಾರವನು
ಕೊಟ್ಟು, ಅವರಿಗೆ ಹುಟ್ಟು ಹೊಲೆಯ ಭಾರವನು
ಹೇರೆ ನಾವೊಪ್ಪಿಹೆವು : ಇದುವೆ ಧರ್ಮದ ನೆಲೆಯೆ?
ಎನಿತೊ ಶತಮಾನಂಗಳಿಂದವರ ನಾವ್ ತುಳಿದು
ಗೈದ ಪಾಪದ ಫಲವೆ ನಮ್ಮ ಇಂದಿನ ದಾಸ್ಯ:
ನಮ್ಮೊಳೊಬ್ಬೊಬ್ಬನೂ ಇಂದು ತಾನಸ್ಪೃಶ್ಯ
ಆ ದೇವನಿದಿರಿನಲಿ : ನಮಗವನು ಕಡುಮುಳಿದು
ನಮ್ಮನಿರಿಸಿಹ ದೂರ, ಬಯಸಿ ನಮ್ಮಯ ಆತ್ಮಶುದ್ಧಿ;
ನಾವ್ ಶುದ್ಧರಾಗಲೊಲಿವನು : ಅಂದು ಬಿಡುಗಡೆಯ ಸಿದ್ಧಿ.

## ಅಣುಶಕ್ತಿ

ಅಂದು – ಋಷಿಗಳ್ ಯೋಗಿಗಳ್ ಪರಮ ದಾರ್ಶನಿಕರ್
ಭಕ್ತರ್ ವಿರಕ್ತರ್ ಕವೀಂದ್ರರ್
ದಿವ್ಯಚಕ್ಷುವಿನಿಂ
ಅಣುವನೊಡೆದರ್
ಜಗದ
ಗುಟ್ಟನೊಡೆದರ್:
ಒಡೆದು

ಕಂಡರದ್ಭುತಮಮಂ,
ಪೂರ್ಣ ದರ್ಶನಮಮಂ:
ವ್ಯೋಮ ಭೂಮಿಗಳೊಳ್
ರವಿಯಾಗಿ ಶಶಿಯಾಗಿ ತಾರಾನಿಕರಮಾಗಿ
ಸಿಡಿಲಾಗಿ ಮಿಂಚಾಗಿ ವೃಷ್ಟಿಯೆನಿಸಿ
ಕಡಲಾಗಿ ಭೂಮಿಯೊಡಲಾಗಿ
ತಾನ್ ಸರ್ವ ಸೃಷ್ಟಿಯೆನಿಸಿ
ಕಡಲಾಗಿ ಭೂಮಿಯೊಡಲಾಗಿ
ತಾನ್ ಸರ್ವ ಸೃಷ್ಟಿಯೆನಿಸಿ
ಮೆರೆವ
ಪರಮ ತೇಜಸ್ವಿಯನ್
ಅಣುವಿಗಣುವಾದನನ್
ಮಹತೋಮಹೀಯನನ್
ಸರ್ವಶಕ್ತನನ್
ಸರ್ವಕಾರಣನನ್.
ಪರಮಾತ್ಮನನ್
ಲೋಕತಾರಕನನ್.
ಇಂದು – ಹಿರಿ ವಿಜ್ಞಾನಿಗಳ್ ಪರಮ ಶಕ್ತರ್
ಪ್ರತ್ಯಕ್ಷತಾ ತತ್ತ್ವದತಿವೀರ ಭಕ್ತರ್
ಯಂತ್ರ ಚಕ್ಷುವಿನಿಂ
ಅಣುವನೊಡೆದರ್
ಜಗದ
ಕಟ್ಟಿನೊಡೆಯರ್ :
ಒಡೆದು
ಕಂಡರದ್ಭುತಮಮಂ,
ಖಂಡ ದರ್ಶನಮಮಂ :
ವ್ಯೋಮ ಜಲ ಭುವಿಗಳೊಳ್
ರವಿ ಶಶಿಗಳಂ ನೊಣೆವ ರಾಹು ಸಮನಾಗಿ
ತಾರೆಗಳ ಮುಕ್ಕುಳಿಪ ತಮದ ರಕ್ಕಸನೆನಿಸಿ

ಸಿಡಿಲಾಗಿ ಸಿಡಿದು ಸೀಳ್ ಮಿಂಚಾಗಿ ಇಳಿದು
ಸುರಿದಗ್ನಿವೃಷ್ಟಿಯಗಿ
ಕಡಲನೇ ಕುಡಿದು ನೆಲಮೆಲ್ಲಮನ್ ಒಡೆದು
ಸೃಷ್ಟಿಸರ್ವಸ್ವಮಂ ಬಿಡದೆ ತೊಡೆದು
ಅತಿ ರೌದ್ರದೆಸಕದಿಂ
ಉರಿದು ಮಾಮಸಕದಿಂ
ಪ್ರಲಯ ರುದ್ರಂ ತಾನೆ ಎನಿಸಿ
ಮೆರೆವ
ಪರಮ ಪ್ರಕಾಶಮಂ
ಸೃಷ್ಟಿಯ ವಿನಾಶಮಂ
ಅಣುವಿನೊಳಶಕ್ತಿಯಂ
ಲೋಕ ಮಾರಕಮಂ

ಅದು ಶಾಂತಿದರ್ಶನಂ
ಲೋಕತಾರಕ ಶಾಂತಿ;
ಇದು ಕ್ರಾಂತಿ ದರ್ಶನಂ,
ಲೋಕಮಾರಕ ಕ್ರಾಂತಿ.

ವಿಜ್ಞಾನಿಗಳ್ ಧರ್ಮಜ್ಞಾನಿಗಳ್ ತಾವಾಗಿ
ವಿಜ್ಞಾನದ ಸಿಡಿಲ್ ಬಾವವರ ಹೂವಾಗಿ
ಮಾನವರಿಗೊಸಗೆಯಾಗೆ
ಕ್ರಾಂತಿ 'ಸಂಕ್ರಾಂತಿ'ಯಾಗೆ
ಶುಭವರಳೆ ಕ್ರಾಂತಿಯೊಳಗೆ
ನಿಶ್ಚಯಂ ಕಾಂತಿ ಇಳೆಗೆ.

## ಮಹಾತ್ಮರ ಸೆರೆ

ಓ, ಮಹಾತ್ಮರೆ, ನಿನ್ನ ಬಂಧಿಸಿಟ್ಟಹರೆಂದು
ಹಲರು ತಿಳಿದಿಹರು, ದಿಟ; ಅದರದು ತಪ್ಪೆಣಿಕೆ:

ಬಂಧನವ ಬಯಸಿ ಬರಮಾಡಿಕೊಂಡಿಹೆ; ಜನಕೆ
ಬಂಧನವೆ ಬಿಡುಗಡೆಗೆ ಹೆದ್ದಾರಿಯೊಂದೆಂದು
ತೋರಿಸಲು. ಜಗ ಜನಾಂಗಗಳೆಲ್ಲ ತಾವಿಂದು
ತಮ್ಮ ನಾಯಕರಿತ್ತ ಕುರುಡಾಣತಿಯ ಪಿಡಿದು
ತಾವಣ್ಣ ತಮ್ಮಂದಿರೊಬ್ಬರೊಬ್ಬರ ಕಡಿದು
ನಿರಪರಾಧಿಗಳಾದ ತಾಯ್ ಮಕ್ಕಳನು ಕೊಂದು
ಈ ಹೊಲ್ಲ ಯುದ್ಧ ನಡಸುತಿರೆ, ಪಾಪದ ಫಲಕೆ
ನಮ್ಮನೂ ಭಾಗಿ ಮಾಡಲು ಬಂದ ಭಾರತದ
ಅಣ್ಮರಿಗೆ ನೀನೊರೆದೆ: "ಸಲ್ಲದೀ ಭ್ರಾತೃವಧ;
ನಮ್ಮ ನೆರವಿದಕಿಲ್ಲ."–ಇದನು ಸಾರುವ ಹಕ್ಕೆ
ನಾಡ ಬಿಡುಗಡೆಯೆಂದೆ.–ಇದಕಾಯ್ತು ನಿನಗೆ ಸೆರೆ !
ಸತ್ಯದ ಅಹಿಂಸೆಯಾ ಸಂಗ್ರಾಮಕದುವೆ ಕರೆ !

(೧೯೪೨ರ ಆಗಸ್ಟಿನಲ್ಲಿ ಮಹಾತ್ಮ ಗಾಂಧಿಯವರು ಬಂಧನಕ್ಕೆ ಗುರಿಯಾದಾಗ]*

## ಮಹಾತ್ಮರ ಶ್ರೇಯಃಪ್ರಾರ್ಥನೆ

ದೇವ ಕರುಣಿಸು ಜಯವ ನಾಡ ನಾಯಕಗೆ
ಜೀವದಿಂದುಳುಹೆಮಗೆ ನಾಡ ಬಿಡುಗಡೆಗೆ
ಹಿಂಸೆಯನ್ನಡಗಿಸಲು, ಹಿಂಸಕರನೆದುರಿಸೆ, ಅ–
ಹಿಂಸೆಯೆನ್ನುವ ಹಿರಿಯ ತತ್ತ್ವವನು ಸಾರಿ,
ಧ್ವಂಸಕರ ಲೋಕದಲಿ ಶಾಂತಿ ಮೂಡಿಸೆ, ಪರಮ–
ಹಂಸ ಸಂದೇಶವಾಚರಿಸುತಿಹ ಗಾಂಧಿಗೆ.

[೬–೫–೧೯೪೪ : ಮಹಾತ್ಮರನ್ನು ಅನಾರೋಗ್ಯದ ಪ್ರಯುಕ್ತ ಸೆರೆಯಿಂದ ಬಿಡುಗಡೆ ಮಾಡಿದಾಗ, ಅವರ ಆರೋಗ್ಯ ಕೋರಿ]*

---

*'ಗಾಂಧೀಜಿಗೆ ನಮನ 'ಸಂಕಲನದಲ್ಲಿಯೂ ಈ ಕವನಗಳು ಕಾಣಿಸಿಕೊಂಡ ಕಾರಣ ಅಲ್ಲಿ ಕೈಬಿಡಲಾಗಿದೆ–ಸಂ.

# ಕೊಲ್ಲದ ಕಾಳೆಗ

ಬನ್ನಿರಿ ಬಾಲರೆ ನಡೆಯಿರಿ ಗೆಳೆಯರೆ
ನಾಡಿನ ಬಿಡುಗಡೆ ಕಾಳೆಗಕೆ
ತನ್ನಿರಿ ನಿಮ್ಮ ಕಪ್ಪ ಕಾಣಿಕೆಯ
ಭಾರತ ಮಾತೆಯ ಓಲಗಕೆ !

ಸತ್ಯದ ಕುದುರೆಯನೆಲ್ಲರು ಹತ್ತಿ
ಹಿಡಿದು ಝಳಪಿಸಿರಿ ಅಹಿಂಸೆ ಕತ್ತಿ
ತಿರುಗಿಸಿ ಗಿರ್ರನೆ ನೂಲುವ ಚರಕ
ಹುಟ್ಟಡಗಲಿ ದಾರಿದ್ರ್ಯದ ನರಕ.

ಹಿಂದೂ ಮುಸ್ಲಿಮ ಸಿಕ್ಕ ಪಾರಸಿಕ
ಜೈನ ಬೌದ್ಧ ಈಸಾಯಿ ಯೆಹೂದ್ಯ
ಉಚ್ಚ ನೀಚ ಕುಲ ಸ್ಪೃಶ್ಯಾಸ್ಪೃಶ್ಯ
ಎಂಬೀ ಭೇದಗಳನು ಮರೆದು
ಒಂದೇ ಮನದಲಿ ನುಗ್ಗಿರಿ ಮುಂದಕೆ
ದ್ವೇಷಭಾವನೆಯ ತೊರೆದು !
ವೈರಿಗಳೆಲ್ಲರು ಮಿತ್ರರೆ ಅಂದು
ಅವರೆಲ್ಲರ ರಣರಂಗದಿ ಕೊಂದು
ಪಾಪವ ಗೈಯುವ ಉದ್ಯೋಗ
ಇಲ್ಲ : ನಮ್ಮದಾತ್ಮತ್ಯಾಗ
ಮೂಡಿದಂದು ಸ್ವಾತಂತ್ರ್ಯದ ಸೂರ್ಯ
ಮುಗಿವುದು ನಮ್ಮ ಯುದ್ಧದ ಕಾರ್ಯ;
ಅದಕಾಗಿಯೆ ನಾವ್ ದುಡಿಯೋಣ,
ಅವಶ್ಯಬಿದ್ದರೆ ಮಡಿಯೋಣ !

# ನಾಡಹಬ್ಬ

ಎಂದಿನಂತೆಯೆ ಬಂದಿತೇ ನಾಡ ಹಬ್ಬ ?
ನಮ್ಮ ನಾಯಕರೆಮ್ಮನಾಳುವುದೆ ಹಬ್ಬ !
ಅದು ಹೊರತು, ಹಸಿದವನೆ ಕೈಗಿತ್ತು ಕಬ್ಬ,
‘ಓದಿ ತಣಿ’ ಎಂದಂತೆ ನಾಡಹಬ್ಬ !

ಬಣಜಿಗನ ಬೊಕ್ಕಸವು ತುಂಬುತಿದೆ ಗಿಡಿದು ;
ಕಾರ್ಮಿಕರು ಕೆರಳಿಹರು ತಮ್ಮ ಕನಸೊಡೆದು;
ಕ್ಷಾಮಮಾರಿಯ ಮುಂದೆ ಬಡಜನರು ಮಡಿದು
ಬಲಿಯಾಗುತಿಹರಿದುವೆ ನಾಡಹಬ್ಬ !

ಒಬ್ಬ ತಾಯಿಯ ಮಕ್ಕಳೆಂಬರಿವ ತೊರೆದು
ಸೇಡು ಮರುಸೇಡಿನಲಿ ಮತದ ಬಾಳ್ ಹಿರಿದು
ಹೇಡಿತನದಲಿ ಒಬ್ಬರನ್ನೊಬ್ಬರಿಂದು
ಕೊಂದು ಕಾಳಿಗೆ ಬಿರ್ದು : ಇದುವೆ ಹಬ್ಬ!

ಸ್ನೇಹ ಸೌಹಾರ್ದ ನೆಲೆಗೊಳಲಿ : ಅದೆ ಹಬ್ಬ !
ಇಳೆ ಶಾಂತಿ ಪುಷ್ಟಿ ತುಷ್ಟಿಗಳೊಂದೆ ಹಬ್ಬ !
ನಾಡೆಲ್ಲ ನಲಿಯುತಿರಲಂದದುವೆ ಹಬ್ಬ !
ವರುಷಕೊಮ್ಮೆಯೆ? ನಿತ್ಯ ನಾಡಹಬ್ಬ !

## ಜನತೆಯೊಂದೆ

ಚರಿತೆಯ ಚಮತ್ಕಾರದಿಂದೊಡೆಯಿತೆಮ್ಮ ಜನ
ಎರಡಾಗಿ : ಅದರೊಂದೇ, ನಿಜಕು ಜನತೆಯೊಂದೆ:
ಹೊರಗಣಿನಿಸಿನ ಭೇದ ಭೇದವೇ ? ಆ ತಂದೆ
ಇಬ್ಬರಿಗು ದೈವವೆನೆ, ಒಪ್ಪದಿದೆ ಮೂಢ ಮನ.
ಹಿಂದು ಮುಸ್ಲಿಮರೊಂದೆ : ಇದನರಿಯಬೇಕು ಜನ:
ಮೇಲಿನಾ ಬಾನೊಂದೆ : ನಡೆವ ನೆಲ ತಾನೊಂದೆ ;
ಕುಡಿಯುವಾ ನೀರೊಂದೆ ;–ಬಸಿರೊಂದೆ, ಉಸಿರೊಂದೆ:
ಅರ್ತಿಯಿಂದಾರಯ್ಯೆ ಅರಿವುದೀ ಒಂದುತನ.
ಇಂತಿರಲು, ಪುಟ್ಟ ಭೇದವ ಬೆಟ್ಟದನಿತೆಣಿಸಿ,
ತಾವಣ್ಣ ತಮ್ಮದಿರು ಎಂಬ ನಂಟನು ಮರೆದು,
ತಾಯ ಸೆರೆಯನು ಬಿಡಿಪ ಕರ್ತವ್ಯವನು ತೊರೆದು,
ಆತ್ಮವನು ಮಿಸುಕಿ ಮಮಕಾರಭೂತವ ತಣಿಸಿ
ಭ್ರಾತೃವಧ ಗೈದು ಕೆನ್ನೀರಿನಲಿ ಕೈತೊಳೆಯೆ
ಫಲವೇನು? 'ಛೀ!' ಎನದೆ ಭಾರತವ ಇಳೆಗೆ ಇಳೆಯೆ?

## ಅಪೂರ್ವ ಸಂಧ್ಯಾಚಿತ್ರ

ನಾಗರಿಕ ಜೀವನದ ಗರ್ಭದೊಳಗಡೆ ಸಿಲುಕಿ
ಕತ್ತಲೆಯ ಬೆಳಕೆನಿಸಿ, ಬೆಳಗು ಬೈಗುಗಳೆಂಬ
ಭೇದ ಬರಿ ನೆನಪಾಗಿ, ಗಾಣದೆತ್ತಿನ ದುಡಿತ
ಹವಣಿಸುವ ಬೇಸರದ ಜೊತೆಗೆ, ನಿತ್ಯವು ಹೊಟ್ಟೆ
ಬಟ್ಟೆಗಳ ಹಂಚಿಕೆಯ ಹೊಂಚಿಕೆಯ ಹುಸಿ ಬಾಳ
ಲಂಚ ಪ್ರಪಂಚದಲಿ ಸತ್ಯನಿಷ್ಠನ ಸಾವು–
ಬದುಕಿನಾ ಧಗೆಯ ಬಿರು ಹೊಯ್ಲಿನಲಿ, ಭಾರತದ
ಯಾವುದೋ ಮೂಲೆಯಲಿ ಹೊತ್ತಿ ಹಬ್ಬಿದ ಮತ–
ದ್ವೇಷದನಿರೀಕ್ಷಿತದ ಕಾಳ್ಕಿಚ್ಚಿನಿಂದೊಗೆದ

ಹೊಗೆಯ ಹಬ್ಬುಗೆಯ ಮಬ್ಬಿನ ನಿರಾಶೆಯ ಸರ್ವ
ಶೂನ್ಯದಲಿ – ಕಂಡಿದ್ದುದಿಲ್ಲೆನಗೆ ಒಮ್ಮೆಯುಂ
ಸಂಜೆವೆಣ್ಣಿನ ರಾಗಪೂರ್ಣ ಮುಖ ಸರಸಿಜವು.
ಇದ್ದಕಿದ್ದಂತೆಯೇ ಕಂಡಿತೆನಗಿಂದು, ಹಾ !
ದೂರ ಪ್ರತೀಚಿ ದಿಙ್ಮಂಡಲದ ರಾಜ್ಯದಲಿ –
ಕೆಂಪು ಕಡುಗೆಂಪು ಕೆಂಗೆಂಪು ಕಗ್ಗೆಂಪು, ಬರಿ
ಕೆಂಪು – ಹೋಲಿಕೆಗಾಗಿ ಕಲ್ಪನೆಯೆ ಕಂಗೆಟ್ಟು
ಬೇಸತ್ತು ಬಸವಳಿದು ಬಿದ್ದು ರಕ್ತವ ಕಾರೆ,
ಒಡನೆಯೇ ಕಲ್ಪನೆಗೆ ಹೊಳೆಯಿತ್ತು–ಆದೊಡೇಂ,
ಹೋಲಿಕೆಯದಲ್ಲ: ಸಂಧ್ಯಾರಮಣಿ ತಲೆಯಲ್ಲಿ
ತಳೆದ ಬಯ್ತಲೆಯ ಮಹ ಮಾಣಿಕದ ಕೆಂಬೆಳಕೂ,
ದಿಗ್ವಧುವಿನಧರ ರಾಗದ ಹರಹೊ–ಎಂಬಿವೇ
ಮೊದಲಪ್ಪ ಕಾವ್ಯದುತ್ಪ್ರೇಕ್ಷೆಗಳ ಹೊಸ ರೂಪ
ತಾನಲ್ಲ : ಅಲ್ಲಲ್ಲಿ ಎಲ್ಲೆಲ್ಲು ನಡೆಯುತಿಹ,
ಯುದ್ಧ ಅಂತಃಕಲಹ ಹಗಲುಕೊಲೆ ಮೊದಲಪ್ಪ
ಘಟನೆಗಳ ಘೋರ ವಾಸ್ತವ ವರ್ಣಚಿತ್ರವದು :
ದಿಕ್ಕು ದಿಕ್ಕುಗಳಿಂದ ಕೆನ್ನೀರ ಕಾಲ್ವೆಗಳು
ಹರಿದು ಬಂದಿಲ್ಲಿ ಹೆಮ್ಮಡುವಾಗಿ ಕೂಡಿಕೊಳೆ,
ಕೆನ್ನೀರ ಕೋಡಿಯಲಿ ತೇಲಿಬಂದಟ್ಟೆಗಳು
ಒಟ್ಟೈಸಿ ನಿಂದಿಹವು : ಇದುವೆ ಪಶ್ಚಿಮ ದಿಶಾ
ಪಟದ ಮೇಲಣ ರಕ್ತವರ್ಣ ಚಿತ್ರವದು.
ಇರಲಿರಲು, ನೆತ್ತರ ಸರೋವರದ ನೈದಿಲೆಯೊ
ಎಂಬಂತೆ ಮೂಡಿದನು ಬಾಲ ಶಶಿ : ಮೂಡಿ, ತಾನ್
ನಕ್ಕು ನುಡಿದನು ಇಂತು : "ಧೈರ್ಯಗೆಡದಿರು ಗೆಳೆಯ :
ನಂಜುನೆತ್ತರು ಹೊರಗೆ ಬಂದಿತೆಂದೆಂದುಕೊಳು;
ಶಾಂತಿ ಮೂಡುವುದು ; ಭರವಸೆಯಾಶೆಗಳ ತಾಳು."
ಬಾಲಚಂದ್ರನ ಶಾಂತಿ ಕಿರಣಗಳು ಸನು ಬೆಳಗಿ
ಕೆಂಬಣ್ಣ ಮಾಸುತಿರೆ,–'ಹುಣ್ಣಿಮೆಯು ಬರದಿಹುದೆ?
ಪೂರ್ಣಚಂದ್ರನು ಪೂರ್ಣ ಶಾಂತಿ ಚಂದ್ರಿಕೆಯನ್ನು

ಚೆಲ್ಲಿ ಸೂಸನೆ?'–ಎಂಬ ಮಾರ್ದನಿಯು ಮನದಲ್ಲಿ
ಮೊರೆಯುತಿರೆ, ಮರೆಯಾಯ್ತುಪೂರ್ವ ಸಂಧ್ಯಾಚಿತ್ರ

## ಹರಸು, ಹೇ! ಭಾರತದ ಭಾಗ್ಯದೈವ

ಸ್ವಾತಂತ್ರ್ಯ ಸೌಧವನು ರಚಿಸತೊಡಗಿಹರದೋ
ನಾಡ ನಾಯಕರೆಲ್ಲರೊಂದುಗೂಡಿ;
ಸೌಧವನ್ನಾಗಿಸುತ ಅದಕೆ ಕಲಶವನಿಟ್ಟು
ಹರಸು, ಹೇ ! ಭಾರತದ ಭಾಗ್ಯದೈವ !

ಮತದ ಮೈಲಿಗೆ ಕಳೆದು ಒಮ್ಮತದ ಮಡಿಯುಟ್ಟು
ಸ್ವಾತಂತ್ರ್ಯ ಮಂದಿರದೊಳೆಲ್ಲ ನೆರೆದು
ಭಾರತಾಂಬೆಯನೇಕನಿಷ್ಠೆಯಲಿ ಭಜಿಪಂತೆ
ಹರಸು, ಹೇ ! ಭಾರತದ ಭಾಗ್ಯದೈವ !

ಮೇಲು ಕೀಳುಗಳೆಂಬ ಬಡವ ಬಲ್ಲಿದನೆಂಬ
ಭೇದಭಾವನೆಯ ಮೋಡಗಳು ಚೆದರಿ
ಸ್ವಾತಂತ್ರ್ಯ ಸೂರ್ಯನೆಲ್ಲೆಡೆಯು ಬೆಳಗುವ ತೆರದಿ
ಹರಸು, ಹೇ ! ಭಾರತದ ಭಾಗ್ಯದೈವ !

ಮನೆಯೊಳಗೆ ಇರವೆ ಹಲವಾರು ವಾಸದ ಕೋಣೆ ?
ಬಾರತದ ಹೊಸಮನೆಯೊಳಿರಲಿ ನೂರು.
ಮನೆಯೊಂದೆ, ಮನೆದೇವರೊಂದೆ ತಾನಪ್ಪಂತೆ
ಹರಸು, ಹೇ ! ಭಾರತದ ಭಾಗ್ಯದೈವ !

ಸತ್ಯ ಸರ್ವಪ್ರೇಮ ಸಮಭಾವನೆ ಅಹಿಂಸೆ–
ಇವೆ ನಮ್ಮ ಭಾರತದ ಮನೆ ದೇವರು ;
ಮನೆ ದೇವರನ್ನೊಲಿದು ಎಲ್ಲರರ್ಚಿಸುವಂತೆ

ಹರಸು, ಹೇ ! ಭಾರತದ ಭಾಗ್ಯದೈವ !

ಸ್ವಾತಂತ್ರ್ಯದರಮನೆಯ ಸಮ್ರಾಜ್ಞಿ ತಾನೆನಿಸಿ
ಮಾತೆ ಮಕ್ಕಳ ಏಳ್ಗೆ ಕಂಡು ನಲಿದು,
ಅವಳ ಮನೆ ಮಂಗಳದ ಮನೆಯಾಗಿ ಮೆರೆವಂತೆ
ಹರಸು, ಹೇ ! ಭಾರತದ ಭಾಗ್ಯದೈವ !

## ಮನೆಯು ಪಾಲಾಯ್ತು

"ಮನೆಯು ಪಾಲಾಯ್ತು
ಒರ್‌ಬಾಳ್ವೆ ಹೋಳಾಯ್ತು
ಕರುಳೆರಡು ಸೀಳಾಯ್ತು
ಅಯ್ಯೊ ! ಅಕಟಕಟಾ !
ಎರಡಾಯ್ತು ಬಾವುಟ"
ಎಂದು ಗೋಳಾಡದಿರು
ಓ, ಗೆಳೆಯನೇ !
ಕಲಹ ಪಾಲಿಗೆ ಮೊದಲು :
ಹೊಗೆಯಿತಸಮಾಧಾನ,
ಉರಿಯಿತು ದುರಭಿಮಾನ.
ತಮ್ಮ, ಪಸುಗೆಯ ಬಯಸಿ
ಕೈಮಾಡಿದನು, ಮುನಿದು;
ಒಬ್ಬಣ್ಣ ಸುಮ್ಮನಿರೆ
ಉಳಿದರಂತಿಹರೆ?
ಹೊಡೆತಕ್ಕೆ ಮರುಹೊಡೆತ;
ಮತದ ಮದ್ದಿನ ಸಿಡಿತ !
ಮಾರಿಗಾಯ್ತೌತಣ:
ನಾಡೆಲ್ಲ ರಣ ರಣ !
ತಡವೆ ರೋಗನಿದಾನ !

ಒಳಗೆಲ್ಲೊ ವಿಷದ ಸೆಲೆ
ಉಪಚಾರ ಮೇಲ್ಮೇಲೆ !
ಅರಿವು ಮೂಡಿದ ಮೇಲೆ
        ನಿಜದ ಸಂಧಾನ.
ನಮ್ಮ ಮನೆ ಪಾಲಾಗೆ
ಬೇಕಾಯ್ತು ಕಡೆಗೆಮಗೆ
        ಹೆರರ ತೀರ್ಮಾನ !
ಎಲ್ಲವೂ ಆಯ್ತು, ದಿಟ !
ಪಾಲಾಯ್ತು ಮನೆ ಮಠ,
ಹಣಕಾಸು ಆಳು ಭಟ;
ಒಂದೆಸೆದ ಬಾವುಟ !
ಗೆದ್ದಿತೆಲ್ಲರ ಹಟ !
ಇನ್ನೇತಕಾ ಗೋಳು ?
ನೋಡು ನಾಳಿನ ಬಾಳು :
ನಗುತಿರಲಿ ಆ ಮನೆ,
ನಗುತಿರಲಿ ಈ ಮನೆ !
ಅವರ ಬಾವುಟವರು
ನಮ್ಮ ಬಾವುಟ ನಾವು
ಏರಿಸುವ ! ಹಾರಿಸುವ !
ಒಲುಮೆ ತೋರಿಸುವ !
ನಮ್ಮ ಕರುಳಿನ ನಂಟು
ಬಿಡಿಸಲಾಗದ ಗಂಟು:
ಈ ನಂಬಿಕೆಯ ಬೆಳಕೆ
ಒಡೆದ ಮನಕಂಟು !
ಬೇರೆಯಿಹ ಕೈಗಳನು
ಮುಗಿದು ವಂದಿಸಿದಂತೆ ;
ಎರಡು ಕಣ್ಣಿನ ಕವಲು–
ನೋಟ ಸಂಧಿಸಿದಂತೆ ;
ಇಬ್ಬಗೆಯ ಹೂಗಳನು

ಹಾರಕೊಂದಿಸಿದಂತೆ;
ಗಂಡು ಹೆಣ್ಣಿನ ಬಾಳ-
ನೊಲುಮೆ ಬಂಧಿಸಿದಂತೆ;
ಕವಲೊಡೆದ ಕಾವೇರಿ
ಮತ್ತೆ ಕೂಡಿದ ತೆರದಿ;
ಬೇಡನಾವನೊ ಬಂದು
ಎರಡು ಗೂಡಿನಲಿಟ್ಟ
ಜೊತೆಯ ಹಕ್ಕಿಗೆ ಕಟ್ಟಿ-
ಕಡೆಗೆ ಬಿಡುಗಡೆ ದೊರೆಯೆ
ಅವು ಹಾರಿ ನೆರೆವಂತೆ;
ಹುಟ್ಟು ಧರಿಸಿದ ಆತ್ಮ
ಪರಮಾತ್ಮನಲಿ ಕಡೆಗೆ
ಬೆರೆಗೈಕ್ಯವಪ್ಪಂತೆ;
ನಾವು ಸೋದರರಿಂದು
ಬೇರಾದರೇನಂತೆ,-
ಮನವೊಡೆಯದಂತೆ
ಮನೆಯೊಡೆಯದಂತೆ
ಮತ್ತೆ ಬೆರೆಯೋಣ,
ಹೊಸ ಬಾಳ ತೆರೆಯೋಣ,
ಶಾಂತಿ ಸೌಹಾರ್ದಗಳ
ಅಮೃತವರ್ಷದ ಧಾರೆ
ಇಳೆಗೆಲ್ಲ ಕರೆಯೋಣ !

# ಅಮೃತ ಸ್ವಾತಂತ್ರ್ಯ

ಗಳಿಸಿಕೊಂಡಿಹೆವಿಂದು ಸ್ವಾತಂತ್ರ್ಯಭಾಗ್ಯವನು
ಉಳಿಸಿಕೊಳ್ಳುವೆವೇನು ಅದನು ಮುಂದಿನ್ನು ?

ಜಾತಿ ಮತ ಪಂಥಗಳ ಭೇದಗಳನೇ ಹಿಡಿದು,
ರೀತಿ ನೀತಿಯ ತೊರೆದು, ಗುಣಕೆ ಮನ್ನಣೆ ತಡೆದು,

ಭೀತಿಯನ್ನೊಡ್ಡಿ ಜನತೆಯ ಹಕ್ಕುಗಳ ಕಡಿವ
ಸರ್ವಾಧಿಕಾರ ಬರೆ ಸ್ವಾತಂತ್ರ್ಯವೆ?

ಬಡವ ಬಲ್ಲಿದನೆಂಬ ಭೇದಗಳು ಇನ್ನುಳಿಯೆ
ಅವರಿಬ್ಬರೊಳದ್ವೇಷದುರಿ ಹೊತ್ತಿ ಬಲ್‌ಬೆಳೆಯೆ
ನಾಡೊಳು ಅಶಾಂತಿ ಅಂತಃಕಲಹಗಳು ಮೊಳೆಯೆ–
ಕಾದಾಡುವ ಹಕ್ಕೆ ಸ್ವಾತಂತ್ರ್ಯವೆ?

ಅರೆಹೊಟ್ಟೆ ತಿನ್ನುವುದೆ ನಿತ್ಯನಿಯಮವದಾಗ
ಇನ್ನು ಮಾರದೆ ಉಳಿಯೆ ಬಡತನದ ಬಿರುಬೇಗೆ
ಊರು ಕೇರಿಗಳೆಲ್ಲ ಭಿಕ್ಷುಕರ ಬೀಡಾಗೆ
ಸಾವು ಬದುಕಿನ ನರಕ ಸ್ವಾತಂತ್ರ್ಯವೆ?

ನಾಡ ಮಕ್ಕಳು ಮಂದಿ ಅಜ್ಞಾನದಲಿ ಮುಳುಗಿ
ಎಲ್ಲೊ ಹಲಕೆಲರು ಪಂಡಿತರೆನಿಸಿ ಬೆಳಗಿ
ಸ್ವಾರ್ಥಸಾಧಕರ ಪಡೆ ನಾಡೆಲ್ಲ ತಿರುಗುತಿರೆ
ಅವರ ತಾಳಕೆ ಕುಣಿಯೆ ಸ್ವಾತಂತ್ರ್ಯವೆ?

ಸಾಮ್ಯವಾದದ ಹೆಸರ ಹಲಗೆಯನು ಮುಂದಿಟ್ಟು
ವಿಜ್ಞಾನ ಯುಗವೆಂದು ಧರ್ಮವನು ಕಟ್ಟಿಟ್ಟು
ಪ್ರಾಚೀನ ಸಂಸ್ಕೃತಿಯ ಸುಟ್ಟು ಕರಿಬೊಟ್ಟಿಟ್ಟು

ಮುಂದುವರಿಯುವೆವೆನಲು ಸ್ವಾತಂತ್ರ್ಯವೆ?

ನಮ್ಮ ನಡೆ ನುಡಿ ನೋಟ ನಮ್ಮ ನಯ ನೀತಿ ನೆಲೆ
ನಮ್ಮ ನಾಡಿನ ಜ್ಞಾನ ಭಂಡಾರದತುಳ ಬೆಲೆ
ಧರ್ಮಬಾಹಿರ ಯಂತ್ರಜೀವನದಿನಾಗೆ ಕೊಲೆ
'ನಾವು ನಾವಲ್ಲದಿಹ' ಬದುಕು ಸ್ವಾತಂತ್ರ್ಯವೆ?

ತನ್ನ ನಂಬಿದ ಬೆಳಕ ಹಿಡಿದು ನಿಲಲಾಗದಿರೆ
ತನ್ನ ಕಾಣ್ಕೆಯ ಸತ್ಯ ನುಡಿಯಲನುವಿಲ್ಲದಿರೆ
ತನ್ನ ಇಚ್ಛೆಯ ಬಾಳ್ಕೆ ನಡಸಲೆಯಿಲ್ಲದಿರೆ
ದೊರೆತ ಸ್ವಾತಂತ್ರ್ಯವದು ಸ್ವಾತಂತ್ರ್ಯವೆ?
ದೇವನೆದುರಿನಲೆಲ್ಲ ಸರ್ವಸಮರೆನಿಸುತ್ತ
ಧರ್ಮ ನೆಲೆ ತಪ್ಪದೊಲು ಸಮತೆಯನು ಸಾಧಿಸುತ
ಇಹದ ಹಲಿಗೆ ಪರದ ಸಕ್ಕರೆಯ ಬೆರಸುತ್ತ
ಬಾಳಲಪ್ಪುದೆ ಅಮೃತ ಸ್ವಾತಂತ್ರ್ಯವಲ್ತೆ?

## ಭಾರತ ಭವಿಷ್ಯವನು ಬರೆವನಾರು?

ಅದೊ ನೋಡು ! ಹೊಲದಲ್ಲಿ ನೇಗಿಲನು ಬಲ್ವಿಡಿದು
ಮೈಬೆವರಿನಿಂದುತ್ತ ಮಣ್ ನೆನೆವರಂ ದುಡಿದು
ಹೆರವರಿಗೆ ಹೊನ್ ಬೆಳೆಯ ತೆಗೆಯೆ ಜೀವನ ತೇದು
ನೇಗಿಲಿನ ರೇಖೆಯಿಂ ದುಡಿವ ಬಾಳ್ ನೆತ್ತರಿಂ
ಭಾರತ ಭವಿಷ್ಯವನು ಬರೆವನವನು
ನೆಲತಾಯ ನಲ್ಲುಗವರ-ಬಡ ರೈತನು.

ಮತ್ತದೋ ನೋಡಲ್ಲಿ ! ಯಂತ್ರಕಾಲೆಗಳಲ್ಲಿ-
ಯಂತ್ರಗಳ ನಡುವೆ ತಾನೊಂದು ಯಂತ್ರವೆ ಆಗಿ
ಹೆರರ ಸೌಖ್ಯಕೆ ತನ್ನ ಬಾಳ ಸವಿಯನೆ ನೀಗಿ

ಮೌನವೇ ಮಸಿಯಾಗೆ ಗೈಮೆ ಲೇಖನಿಯಾಗೆ
ಭಾರತ ಭವಿಷ್ಯವನು ಬರೆವನವನು
ಕರ್ಮಯೋಗಕೆ ಕಲಶವಿಡುವ ಕಾರ್ಮಿಕನು.

ಇತ್ತ ನಿರುಕಿಸು ! ಶಸ್ತ್ರಸನ್ನದ್ಧನಾಗಿಯುಂ
ತಾನಹಿಂಸಾ ಸತ್ಯ ತತ್ತ್ವಕ್ಕೆ ತಲೆಬಾಗಿ
ಹೆರರ ನೆಲಕಾಶಿಸದೆ ತಾಯ್ ನೆಲಕೆ ಮುಡಿಪಾಗಿ
ತನ್ನ ಬಾಳನ್ನಿರಿಸಿ, ಇಳೆ ಮೆಚ್ಚುವದಟನಿಂ
ಭಾರತ ಭವಿಷ್ಯವನು ಬರೆವನವನು
ಧರ್ಮಯುದ್ಧಕ್ಕಳುಕದಿಹ ವೀರಭಟನು.

ಮೇಣದೋ ! ವಿಜ್ಞಾನಶಾಲೆಯಲಿ ಭೇದಿಸುತ
ಪ್ರಕೃತಿಯ ರಹಸ್ಯವನು, ಸತ್ಯವನು ಶೋಧಿಸುತ,
ನಾಡ ಮಣ್ಣನು ಚಿನ್ನ ಮಾಳ್ಪ ಕಲೆ ಸಾಧಿಸುತ
ವಿಜ್ಞಾನಸಿದ್ಧಿಯನು ಯುದ್ಧಕೆ ನಿರೋಧಿಸುತ
ಭಾರತ ಭವಿಷ್ಯವನು ಬರೆವನವನು
ಸತ್ಯ–ಪರಮೇಶ್ವರನ ಭಕ್ತ, ವಿಜ್ಞಾನಿ.

ಮೇಣಿದೋ ! ಜನರೊಡನೆ ನಲವಿನಿಂ ಬೆರೆಯುತ್ತ
ಅನ್ಯಾಯವಸಮತೆ ಅಧರ್ಮಗಳ ಜರೆಯುತ್ತ
ಕಾವ್ಯಕಹಳೆಯನೂದಿ ಜನರನೆಚ್ಚರಿಸುತ್ತ
ಸತ್ಯ ಸೌಂದರ್ಯಗಳ ಮಂತ್ರವುಚ್ಚರಿಸುತ್ತ
ಭಾರತ ಭವಿಷ್ಯವನು ಬರೆವನವನು
ಭಾರತೀಯ ವರಪುತ್ರ ಕವಿವರ್ಯನು.

ಅದೊ! ವಿಶಾಲಪ್ರಪಂಚಕೆ ಭಾರತದ ಕೀರ್ತಿ
ಹರಡಿ, ಮೇಣ್ ಗಳಿಸುತ್ತ ಹೊರದೇಶಗಳ ಅರ್ತಿ
ದೇಶ ದೇಶಕೆ ನಂಟುನೇಹಗಳ ಬಲಿಸುತ್ತ
ಯುದ್ಧವನು ನಿಲಿಸಿ ಶಾಂತಿ ಧ್ವಜವ ನಿಲಿಸುತ್ತ

ಭಾರತ ಭವಿಷ್ಯವನು ಬರೆವನವನು
ಸ್ವಾತಂತ್ರ್ಯ ಪಡೆದ ಭಾರತದ ನಾಯಕರು.

ಅಹ ! ನೋಡು ! ಕೊಂಡಾಡು ಭಕ್ತಿಯಿಂ ಪೊಡಮಡು
ಸತ್ಯ ಧರ್ಮ ಅಹಿಂಸೆಗಳಿಗಾಗಿ ಜೀವವನು
ಮುಡಿಪಿರಿಸಿ, ಬುದ್ಧದೇವನ ಧರ್ಮ ಚಕ್ರವನು
ಅಂತು ಚರಕವಗೈದು ನಡೆನುಡಿಯ ನೂಲಿನಿಂ
ಭಾರತ ಭವಿಷ್ಯವನು ಬರೆಯ ಕಲಿಸಿಹನವನು
ಜನತಾ ಜನಾರ್ದನನ ಭಕ್ತ ಗಾಂಧಿ ಮಹಾತ್ಮ
ಕ್ರಿಸ್ತ ಬುದ್ಧರ ಪಂತಿಯೊಳು ನಿಲುವ ಪೂತಾತ್ಮ
ಪ್ರತ್ಯಕ್ಷದೈವ ಪಾಮರರ ಪರಮಾತ್ಮ !

## ಅಶೋಕ ಚಕ್ರ

ನೋಡದೊ ಸ್ವಾತಂತ್ರ್ಯಾಕಾಶದಲಿ
ಹಾರುತ್ತಿದೆ ನವ ರಾಷ್ಟ್ರಧ್ವಜವು !
ಹಾರಲಿ ! ಏರಲಿ ! ಈ ಹೊಸ ಬಾವುಟ !
ಚಿರ ಬಾಳಲಿ ನವ ಭಾರತ ಕೂಟ !–

ಹಿಂದೂ ಮುಸ್ಲಿಮ ಸಿಕ್ಕರು ಒಂದು
ಹಿಂದೆ ಇಂದು ಮುಂದೆಂದೆಂದೂ–
ಇಂತು ಸಾರುತಿದೆ ಈ ಹೊಸ ಬಾವುಟ:
ಗೆಲ್ಲಲಿ ಎಲ್ಲರು ಒಂದೆನುವೀ ದಿಟ!–

ಬಾರ ಬಾರ ಹರಿಕಾರ ಸಮೀರ
ತಾರ ತಾರ ಬಾವುಟಕೆ ವಿಹಾರ
ತೋರ ತೋರ ಬಾವುಟದಾಕಾರ :
ಹಾಡಲಿ ಹರಸಲಿ ಲೋಕವಪಾರ !
ನಿಲ್ಗೆ ಚಂದ್ರತಾರಂಬರಮೀ ಧ್ವಜ

ಪುಣ್ಯಭೂಮಿಯಲಿ ನವ ಕಲ್ಪ ಕುಜ!
ತುಂಬಿ ಬಿಡುತಿರಲಿ ಫಲಪುಷ್ಪವ್ರಜ,
ಆಶ್ರಯಹೊಂದಲಿ ಸರ್ವಪ್ರಜಾ

ಹಸುರು ಬಿಳಿಪು ಕೇಸರಿಗಳು ಕೂಡಿದ
ಮೂಬಣ್ಣದ ನಡುವೆಯಲದೊ ನೋಡು :
'ಅಶೋಕ ಚಕ್ರ'ವು ಮೆರೆಯುತಿದೆ,
ಕಾಂತಿಯ ಯುಗವನು ತೆರೆಯುತಿದೆ.

ಅಂದು ಅಶೋಕನು ಧರಿಸಿದ ಚಕ್ರ
ಯುದ್ಧವ ನಿಲಿಸಿದ ಕಾಂತಿಯ ಚಕ್ರ ;
ಕಾಂತಿ ಪುಷ್ಟಿ ತುಷ್ಟಿಗಳನು ತುಂಬುವ,
ಭಗವಾನ್ ಬುದ್ಧನ ಧರ್ಮದ ಚಕ್ರ

ಹಿಂದೆ ಕೃಷ್ಣನೇ ತೋರಿದ ದಾರಿ–
ಗಾಂಧಿ ಮಹಾತ್ಮರು ಎತ್ತಿಹಿಡಿದ ಗುರಿ–
ಸತ್ಯ ಅಹಿಂಸೆ ದಾನ ಧರ್ಮ ದಯೆ:
ಶೋಕವ ಹರಿಸುವ 'ಅಶೋಕ' ಚಕ್ರ

ಯುದ್ಧವನೆಸಗದೆ, ಯಾರನು ಕೊಲ್ಲದೆ,
ಕೊಲ್ಲಬಂದವರ ರಕ್ತವ ಚೆಲ್ಲದೆ,
ಅಳರಸರ ಹೃದಯವ ಮಾರ್ಪಡಿಸಿದ
ದಿವ್ಯಮಂತ್ರವಿದು: ಅಶೋಕ ಚಕ್ರ

ನಾಡಿನ ದಾಸ್ಯದ ಶೋಕವ ಕಳೆದು
ಹೆರರಿಗೆ ಶೋಕವ ತರುವುದನುಳಿದು
ಕಾಂತಿಯ ಬೆಳಸುವ ಧ್ಯೇಯವ ತಳೆದು
ತಿರುಗುತ ಬೆಳಗುತಲಿಹುದೀ ಚಕ್ರ
ಭಾರತೀಯ ಸಂಸ್ಕೃತಿಗಿದೆ ಗುರುತು:

ಭೇದಭಾವಗಳನೆಲ್ಲರು ಮರೆತು
ಕೂಡಿ ಬಾಳಿ ಶೋಕವೆ ಹೊರತು :
ಆ ಬಾಳ ತರಲಿ ಈ ಶುಭ ಚಕ್ರ!

ಸತ್ಯ ಅಹಿಂಸೆಗಳಡಿಗಲ್ ಮೇಲೆ
ಸಮತೆಯ ಸೌಧವ ಕಟ್ಟಲಿ ನಾಳೆ
ಜನತೆಯ ಶೋಕವು ನೀಗುವುದಾಗಳೆ :
ಅದರ ಮುಂಗುರುಳು ಅಶೋಕ ಚಕ್ರ !

ಭಾರತ ಮಾತೆಗೆ ಕಿರೀಟವಿಟ್ಟು
ನಾಡಿಗೆ ನಲ್‌ನಗು ಮುಖವನು ಕೊಟ್ಟು
ವಿಶ್ವಕೆ ಶಾಂತಿಯ ಹರಕೆಯನಿಟ್ಟು
ತಿರುಗುತ್ತಿರಲಿ ಸನಾತನ ಚಕ್ರ !

ಎನಿತು ಸೂಳು ತಿರುಗಿದುದೀ ಚಕ್ರ,
ಎನಿತು ಸೂಳು ನಿಂತುದೋ ಈ ಚಕ್ರ !
ನಿಲ್ಲದೆ ತಿರುಗಲಿ ಅಶೋಕ ಚಕ್ರ,
ಗೆಲ್ಲಲಿ ಜಗವನೆ ಧರ್ಮದ ಚಕ್ರ !

ಶ್ರೀಕೃಷ್ಣ ಬುದ್ಧ ಅಶೋಕ ಗಾಂಧೀ
ಪ್ರಭೃತಿಪ್ರವರ್ತಿತ ಚಕ್ರಕೆ ನಮೋ
ಧರ್ಮದ ಚಕ್ರಕೆ ನಮೋ ನಮೋ
ಅಶೋಕ ಚಕ್ರಕೆ ನಮೋ ನಮೋ

ಅಶೋಕ ಚಕ್ರಾಂಕಿತ ಧ್ವಜಕೆ ನಮೋ
ಭಾರತ ಮಾತೆಗೆ ನಮೋ ನಮೋ
ಭಾರತ ಜನತೆಗೆ ತೇಜವನೆರೆದು
ಸಲಹುವ ದೇವಗೆ ನಮೋ ನಮೋ

**ಅರ್ಪಣೆ**

ಮುಂಬೈ ದಾಳಿಯಲ್ಲಿ ನಿಧನರಾದ ಪೊಲೀಸ್ ಅಧಿಕಾರಿಗಳ
ನೆನಪಿಗಾಗಿ ಈ ಸಣ್ಣ ಕೃತಿ ಅರ್ಪಣೆ
ಹೇಮಂತ ಕರ್ಕರೆ
ಅಶೋಕ್ ಕಾಮ್ಟೆ
ವಿಜಯ ಸಾಲಸ್ಕರ್
ಸಂದೀಪ್ ಉನ್ನಿಕೃಷ್ಣನ್

# ಗಾಂಧೀಜಿಗೆ ನಮನ

## ಬಿನ್ನಹ

ನಾಡಿನ ಬಾಪು, ಇಳೆಯ ಬಾಪು. ಗಾಂಧಿ ಮಹಾತ್ಮನ ಪಾರ್ಥಿವದೇಹಕ್ಕೆ ಇದೇ ಸರ್ವಜಿನ್ನಾಮ ಸಂವತ್ಸರ ಪುಷ್ಯ ಬಹುಳ ಪಂಚಮಿ ಶುಕ್ರವಾರ (೩೦–೧–೧೯೪೮) ವಿಷಾದಕರ ರೀತಿಯಲ್ಲಿ ಮುಡಿವು ಸಮನಿಸಿತು : ದೇಹಗೇಹದಿಂದ ಬಿಡುಗಡೆಪಡೆದ ಆತ್ಮ ಯಥಾರ್ಥವಾಗಿ ಮಹಾತ್ಮ ಎನಿಸಿ ವಿಶ್ವವಾಸಿಯಾಯಿತು. ಅ ಪುಣ್ಯಕಾಲ ಮೊದಲ್ಗೊಂಡು ಈ ಹೊತ್ತಿನವರೆಗೆ ವಿಶ್ವವಾಣಿ ಸಾವಿರ ಕಂಠವಾಗಿ ಶೋಕದ ಉದ್ಗಾರ ತೆಗೆದಿದೆ. ಆ ಅನುಪಮವಾಣಿಯ ಕೆಲವು ನುಡಿಗಳನ್ನು ಬಲ್ಲ ರೀತಿಯಲ್ಲಿ ಪಡಿನುಡಿಯುವ ಬಹಳ ಅಲ್ಪ ಪ್ರಯತ್ನ ಇಲ್ಲಿ ನಡೆದಿದೆ: ಅದರ ತುಂಬುಚೆಲುವು (ಶೋಕದ ವಚನದಲ್ಲೂ ಚೆಲುವುಂಟು) ತಕ್ಕಮಟ್ಟಿಗಾದರೂ ಪಡಿಮೂಡಬೇಕಾದರೆ ಇನ್ನೂ ವ್ಯಾಪಕವಾದ ಪ್ರಯತ್ನ ಅಗತ್ಯ. ಆ ಪ್ರಯತ್ನ ಕೈಕೊಳ್ಳಲು ಸಂಕಲ್ಪವೇನೋ ಇದೆ. ಮಹಾತ್ಮರ ಮಾಮರಣದ ಹದಿಮೂರನೆಯ ದಿನದ ಹೊತ್ತಿಗೆ ವಿಶ್ವದ ಬಾಷ್ಪಾಂಜಲಿಯನ್ನು ಒಂದು ವಿಶಿಷ್ಟ ರೂಪದಲ್ಲಿ ಪ್ರಕಾಶಪಡಿಸುವ ಅವಸರದ ಕೆಲಸವಿಟ್ಟುಕೊಂಡದ್ದರಿಂದ ಅನಿವಾರ್ಯವಾಗಿ ಪ್ರಯತ್ನ ಪರಿಮಿತವಾಗಬೇಕಾಯಿತು. ಜೊತೆಗೆ, ಶೋಕಭರದಲ್ಲಿ ನಡುಗುವ ಕೈ, ಕುಂಟುವ ಲೇಖನಿ. ತಪ್ಪುಗಳು ಹಲವಾರು ಹಣಕಿರಬಹುದು. ಬಲ್ಲವರು ಮನ್ನಿಸಬೇಕಾಗಿ ಬಿನ್ನಹ.

–ರಾಘವ

# ವಿಶ್ವಜ್ಯೋತಿ ಬಾಪೂಜಿ

## 'ವಾಣಿ'ಯ ವಾಣಿ

ಬಾರಮ್ಮ ಭಾರತಿ,
ಬಾರಮ್ಮನುಡಿತಾಯಿ;
ನುಡಿಯಮ್ಮ, ನುಡಿ, ತಾಯಿ
ಏಕಿಂತು ಸುಮ್ಮನಿಹೆ ?
ಏಕಿಂತು ಬಿಮ್ಮನಿಹೆ ?
ಪುತ್ರರತ್ನವ ಕಳೆದುಕೊಂಡು ದುಃಖದೊಳಿರುವ
ಭಾರತಾಂಬೆಗೆ ನಿನ್ನ ಸಾಂತ್ವವಚನವ ಪೇಳ :
ಪ್ರೇಮಮಯಿ ತಾಯಿ ಕಸ್ತೂರಿ ಕಣ್ಮುಚ್ಚಿದಳು :
ಬುದ್ದಿ ಹೇಳುವ ತಂದೆ ಕಳದನಿಂದು.
ಭಾರತೀಯರು ನಾವು ತಬ್ಬಲಿಗಳಾಗಿಹೆವು:
ಮುಂದುಗಾಣದೆ ಮನವು ಮುಗ್ಗರಿಸುತಿಹುದಮ್ಮ.
ನಿನ್ನ ನುಡಿ ಸುಧೆಗರೆದು
ಕಣ್ಣು ಕಾಣದ ನಮಗೆ
ದಾರಿ ತೋರಮ್ಮ.
ಶುಭವ ಕೋರಮ್ಮ
ಓ, ಭಾರತಿ !
ಓ, ಭಾರತಿ !
ನಿನ್ನ ಮಣಿಗಣ ವಿಭೂಷಿತ ಮಕುಟವೆಲ್ಲಮ್ಮ?
ನಿತ್ಯ ನುಡಿಯುವ ನಿನ್ನ ದಿವ್ಯವೀಣೆಯದೆಲ್ಲಿ ?
ವೀಣಾರಿಸವಿತಾನಕ್ಕೆ ಜೋಡಿ ನರ್ತಿಸುವ
ನಿನ್ನ ನವಿಲೆಲ್ಲಿ ?
ಕರದ ಪುಸ್ತಕವೆಲ್ಲಿ ?
ಜಪಮಾಲೆಯೆಲ್ಲಿ ?

ಕೊರಲು ಕಟ್ಟಿಹುದೇಕೆ, ಪೇಳಮ್ಮ ತಾಯಿ?
ನಿನ್ನ ಕೊರಲೇ ಕಟ್ಟೆ ನಮಗುಂಟೆ ಬಾಯಿ ?
        ತಡೆ ಕಂದ
        ತಡೆ ಕಂದ
ಮೌನವೆ ಮಹಾಗೀತೆ ನಾಡಿನಲ್ಲಿಂದು ;
ಮೌನಮುದ್ರಿತವಾಗಿ ತಲೆಬಾಗಿಸಿದೆ ನಾಡು
ತಗದು ತಗದೆನಗಿಂದು ಎಂದಿನಾ ನಲಿವು. ಹಾಡು
ಭಾರತಾಂಬೆಯ ಮಕುಟ ಕಳಚಿ ಬಿದ್ದಿರಲಿಂದು
ನನಗೆಲ್ಲಿ ಮಕುಟ ?
ಭಾರತದ ವಾಣಿ ತಾ ನುಡಿಯ ನಿಲ್ಲಿಸಿತಿಂದು,
ನನ್ನ ವೀಣಾವಾಣಿ ನುಡಿವುದೆಂತು ?
ಸ್ವಾತಂತ್ರ್ಯ ವರ್ಷದಾಗಮನದುತ್ಸಾಹದಲಿ
ಕುಣಿದ ನಲಿವಿನ ನವಿಲು ನಡೆಗೆಟ್ಟು ನಿಂತಿರಲು
ನನ್ನ ನವಿಲಿಗೆ ಕುಣಿವ ಹಿಗ್ಗದಿನ್ನೆಲ್ಲಿ?
ದೇವತೆಗಳೇ ನನ್ನ ಕಳುಹಿದರು, ಓ ಕಂದ :
ಲೋಕದ ಮಹಾತ್ಮನನು ಹೊಗಳಿ ಬಾರೆಂದು.

ಶೋಕಗೀತೆಗೆ ಶ್ರುತಿಯೆ, ಬೆಡಗು ಬಿನ್ನಣವೆ ?
ನುಡಿಯಲೊಲ್ಲದ ವೀಣೆ, ಕುಣಿಯಲೊಲ್ಲದ ನವಿಲು,
ಇವನು ಹಿಂದೆಯೆ ಬಿಟ್ಟು, ಮಕುಟವನು ತೆಗೆದಿರಿಸಿ,
ಧವಳಚಾರಿತ್ರನಿಗೆ ಮುದಮಪ್ಪುದೆಂದೆನ್ನ
ಧವಳವಸ್ತ್ರವನೊಂದ ಮರೆಯದೆಯೆ ತೆಗೆದುಟ್ಟು,
ಕಂಬನಿಯ ವರ್ಷವನು ಸುರಿಸುತ್ತ ಕಾಲ್ಗೆಟ್ಟ
ಕಾಲಮೇಘವನೇರಿ, ಮುಗಿಲ ಬಟ್ಟೆಯಲೆಲ್ಲ
ಮಂದೈಸಿ ನಿಂತಿರುವ ದೇವತೆಗಳೊಗ್ಗಿನಲಿ
ನಡೆಯಲಾರದೆ ನಡೆದು ಪವನ ಮುಂಗಡೆ ಬರಲು
ದಾರಿಯನು ಬಿಡಿಸುತ್ತ, ಬಾಂಬಟ್ಟೆಯಂಬಿಡಿದು
ಚರಿಸಿ ಬಂದೆನು, ಕಂದ : ಲೋಕಕ್ಕೆ ಲೋಕವೇ
ಮರುಗುತಿದೆ, ಕೊರಗುತಿದೆ; ಮುಳುಗಿರ್ಪುದಳಲಿನಲಿ.

ಅಳಲಿನುಲಿ ಚಿಮ್ಮುತಲೆಯಲೆಯಾಗಿ ಹೊಮ್ಮುತ್ತ
ಬಾನ್‌ಬಯಲನೆಲ್ಲ ತುಂಬಿದೆ ಅಳಲುವಾಡಾಗಿ.
ವಿಶ್ವವಾಣಿಯ ಮುಂದೆ ನಾನೆ, ಬಡವಾಣಿ ?
ಆಲಿಸಾಲಿಸು, ಕಂದ : ಕೇಳಿದುದ ನಿನಗೊರವೆ :
ಹಲನುಡಿಗಳಲ್ಲೊಗೆದ ವಿಶ್ವವಾಣಿಯ ಕೇಳು :
ಶೋಕಭಾರವನಿಳುಹು, ಧೃತಿಯ ತಾಳು.

# ಭಾರತದ ವಾಣಿ

## ಪಂಡಿತ ಜವಹರಲಾಲ್ ನೆಹರು

ಭಾರತದ ಪುತ್ರನೊರ್ವಂ ನುಡಿದನಿಂತು :
ಗದ್ಗರಿಸುತಿರೆ ಕಂಠ, ಹೃದಯ ಬಿರಿಯುತಿರೆ :
ಮಡಿದಿಹ ಮಹಾತ್ಮನಿಗೆ ಪಟ್ಟಶಿಷ್ಯಂ : ಮೇಣ್
ಇರುಳು ಕವಿದಿಹ ಭಾರತದ ಪೂರ್ವದಿಶೆಯಲ್ಲಿ
ಮೂಡಿ ಮನಕುತ್ಸಾಹ ತುಂಬುತಿಹ ಕಿರಣಂ :

"ಓ ಗೆಳೆಯರೇ, ನಮ್ಮ ಜೀವನದ ಬೆಳಕಿಂದು
ಕಾಣದಂತಾಗಿಹುದು. ನಮ್ಮ ನಚ್ಚಿನ ಬಾಪು.
ನಮ್ಮ ನಾಡಿನ ತಂದೆ, ಇನ್ನಿಲ್ಲ, ಇನ್ನಿಲ್ಲ.
ಇನ್ನಿಲ್ಲವೆಂದೆನೇ, ತಪ್ಪು ತಪ್ಪಹುದಹುದು.
ಈ ನಾಡ ಬೆಳಗಿದಾ ಬೆಳಕು ದೀಪದ ಬೆಳಕೆ?
ಅಲ್ಲ, ಈ ನಾಡನೀ ಹಲವು ವರ್ಷಗಳಿಂದ
ಬೆಳಗಿದಾ ಬೆಳಕು ಸಾವಿರಕಾಲ ಬೆಳಗುವುದು
ಲೋಕ ಕಾಣವುದದನು : ನೂರಾರು ಜೀವಗಳು
ಹಿಗ್ಗುವುದು ಬೆಳಕಿನಲಿ. ಆ ಬೆಳಕು ಜೀವಂತ
ಸತ್ಯದ, ಸನಾತನದ ಸತ್ಯಗಳ, ತನಿವೆಳಗು.
ನೇರನಡೆಯನು ಕಲಿಸಿ, ತಪ್ಪಿದೆಡೆಯಲಿ ತಿದ್ದಿ,
ಈ ಪುರಾತನ ಪುಣ್ಯ ಭೂಮಿನ್ನೊಯ್ದಿತ್ತು
ಸ್ವಾತಂತ್ರ್ಯದೆಡೆಗೆ. ಆ ಬೆಳಕು, ಆ ಜೀವ,
ಹುಚ್ಚನೊಬ್ಬನ ಹತಿಗೆ ಬಲಿಯಾಯ್ತುಲಾ ಕಡೆಗೆ !
ಹುಚ್ಚನೇ ಸರಿಯವನು. ಆದೊಡಂ, ನಾಡಿನಲಿ
ವಿಷವೊಂದು ಒಳಗೊಳಗೆ ಹಬ್ಬಿ ಹರಡುತಲಿಹುದು ;
ಕಂಟಕಗಳೆನಿತೊ ಮುನ್ನಡೆಯ ತಡೆಹಿಡಿದಿಹುವು :

ನಮ್ಮ ಮುಂದಿನ ಕಜ್ಜ, ಇವುಗಳನ್ನೆದುರಿಸುತೆ
ನಿರ್ಮೂಲಗೈಯುವುದು : ಗೈವಂದು, ಕೆರಳದೆಯೆ
ಋಜುಮಾರ್ಗವನ್ನುಳಿದು ಅತ್ತಿತ್ತಹೊರಳದೆಯೆ,
ಬಲದಲ್ಲಿ ಛಲದಲ್ಲಿ ಐಕ್ಯತೆಯೊಳೆಲ್ಲರುಂ
ನಮ್ಮ ಗುರು ತೋರಿಸಿಹ ರೀತಿ ನಡೆಯುವುದು
ಬಾಳಿನ ಮಹದ್ವಿಷಯಗಳ ಪಿಡಿದು ಕ್ಷುದ್ರಗಳ
ತೊರೆವಂತೆ ಸಾರುತಿದೆ ಆತನೀ ಮರಣಂ:
ಕೇಳಿ, ಭಾರತಕೊಳ್ಳಿತೀ ಸತ್ಯ ಸ್ಮರಣಂ !!"

## ಸರ್ ರಾಧಾಕೃಷ್ಣನ್

ನಂಬಲಾಗದ್ದು, ಅಚಿಂತ್ಯವಾದದ್ದು, ಸಂಭವಿಸಿತು.
ನಮ್ಮ ಯುಗದ ಅತ್ಯಂತ ನಿರ್ಮಲನಾದ,
ಸ್ಫೂರ್ತಿದಾಯಕನಾದ, ಅಭ್ಯುತ್ಥಾನಕಾರಿಯಾದ ವ್ಯಕ್ತಿ
ಉನ್ಮತ್ತನೊಬ್ಬನ ಕ್ರೋಧಕ್ಕೆ ತುತ್ತಾದುದು ತೋರಿಪುದು :
ವಿಷವ ಕುಡಿಯಬೇಕಾದ ಸಾಕ್ರಟೀಸನ,
ಶಿಲುಬೆಗೇರಿಸಿದ ಯೇಸುವಿನ, ಕಾಲದಿಂದಲೂ
ನಾವು ಮೇಲಾಗಿಲ್ಲವೆಂಬುದನು.

ಕಣ್ಮರೆಯಾಗುತ್ತಿರುವ ಗತಕಾಲದ
ಏಕಮಾತ್ರ ಸಂಕೇತವೀ ಮಹಾತ್ಮ. ಅವನಿನ್ನಿಲ್ಲ.
ಆತನ ಕಾಯವ ಕೊಂದಿಹೆವು ; ಆದರೆ, ಸತ್ಯಪ್ರೇಮಗಳ
ದಿವ್ಯಜ್ಯೋತಿಯಿಂದ ಹೊತ್ತಿ ಬೆಳಗುತ್ತಿರುವ
ಆತನೊಳಗಣ ಜ್ಯೋತಿಯನಾರಿಸಲಾಗದು.

ಈ ಲೋಕದಲ್ಲಿ ಅದರ ಸಾಧು ಸಂತರು
ಸುರಕ್ಷಿತರಾಗಿರುವದೆಂದು?

ಹಿಂಸೆ, ಕ್ರೌರ್ಯ, ಕ್ಷೋಭೆಗಳ ಮಹಾ ನರಕ ಕೂಪಕ್ಕೆ
ನಾವು ಜಾರದಿರಬೇಕಾದಡೆ,
ಮಹಾತ್ಮಗಾಂಧಿ ಯಾವುದಕ್ಕಾಗಿ ಬದುಕಿದನೋ
ಯಾವುದಕ್ಕಾಗಿ ಮಡಿದನೊ
ಆ ಮಾರ್ಗವುಳಿದು ಬೇರೊಂದಿಲ್ಲ.

## ಶ್ರೀಮತಿ ಸರೋಜಿನಿದೇವಿ

ಮೊನ್ನೆತಾನೆ ಮಾಡಿದನುಪವಾಸ
ಹಿಂದೂ ಮುಸ್ಲಿಮರೈಕ್ಯತೆಗೆ
ಆಹಾ! ಏನಿದು ಈ ಪರಿಹಾಸ ?
ಹಿಂದುವೆ ಕಾರಣ ನಮ್ಮೀ ವೆತೆಗೆ !

ಹಾಸುಹೊಕ್ಕಿನೊಲು ಅವನ ಬಾಳಿನಲಿ
ನಮ್ಮ ಕೆಲರ ಬಾಳ್ ಬೆರೆತಿಹುದು:
ಮಡಿಯಲವನು ನಾವಂ ಕೆಲರು ಮಡಿದಂತೆ.
ಕೆಲವರೊಡಲ ಕಡಿಕಡಿದಂತೆ.

'ಬಾಪು ಮಡಿದಿಹನು' ಎಂದು ನಂಬಿದೊಡೆ
ಈಗ ನಿರಾಶೆಯ ಹೊಂದಿದೊಡೆ
ಅವನೊಂದಿಗೆ ಹೋಯ್ತೆಲ್ಲವೆನುವೊಡೆ
ತೊರೆದುದೆನಿಸುವುದು ನಮ್ಮಪಡೆ.

ಕಣ್ಮರೆಯಾಯಿತೆ ಪಾರ್ಥಿವ ದೇಹ?
ಆತ್ಮಬಂಧುಗಳು ನಾವಿಹೆವು;
ಅವನ ಸಿದ್ಧಿ ಸಾಧನೆ ಆದರ್ಶ
ನಿಧಿಯಾಗಿಂದೆಮಗುಳಿದಿಹವು.

ಕಂಬನಿಗರೆಯುತ ಕುಳ್ಳಿರಲೇಕೆ ?
ಕಾಲವಿಲ್ಲಶೋಕಿಸಲಿನ್ನು.
ಗಾಂಧಿ ಮಹಾತ್ಮನ ಎದುರಿಸಿ ನಿಂತರ
ಕರೆಗುತ್ತರ ಕೊಡುವುದೆ ಚೆನ್ನು.

ನಾವಾತನ ಜೀವಂತ ಕುರುಹುಗಳು;
ನಾವಾತನ ಪಡೆಯಾಳುಗಳು :
ಯುದ್ಧಕಲುಷಿತ ಕ್ಷೋಣಿಯಲಿಂದು
ನಾವಾತನ ಧ್ವಜಧಾರಿಗಳು ;
ಸತ್ಯವೆಮ್ಮ ಮುಂಚೂಣಿಯ ಧ್ವಜವು,
ಅಹಿಂಸೆಯೇ ಎದೆಗಾಪು ಗುರಾಣಿ,
ರಕ್ತವ ಚೆಲ್ಲದೆ ವೈರಿಯ ಗೆಲ್ಲುವ
ಆತ್ಮಶಕ್ತಿ ಹೊಳೆಹೊಳೆಯುವ ಕತ್ತಿ.

ಗುರುವಿನ ಪಥವನು ಹಿಡಿಯದಿರ್ಪೆವೆ?
ಪಿತನಾಜ್ಞೆಗಳನು ನಡೆಸದಿರ್ಪೆವೆ ?
ಆತನ ನಚ್ಚಿನ ಬಂಟರೆನಿಸುತ
ಗೆಲವ ಗಳಿಸವೇ ಕಾಳೆಗ ಮುಗಿಸುತ ?
ಗಾಂಧಿ ಮಹಾತ್ಮನ ಸಂದೇಶವನು
ವಿಶ್ವಪೀಠದಲಿ ಮಂಡಿಸದಿರ್ಪೆವೆ?
ಅವನ ವಾಣಿ ನುಡಿಯದೆ ನಿಲಲೇನು ?
ಕೋಟಿಕೋಟಿ ಕಂಠಸ್ಥವಾಗಿ ಚಿರ–
ಕಾಲವವನ ಸಂದೇಶವನಿಳೆಗೆ,
ಮುಂದಿನಿಳೆಗೆ, ಆ ನಾಳಿನ ನಾಳೆಗೆ,
ಸಾರದಿರುವುದೆ?
ಬೀರದಿರುವುದೆ ?

ಗಾಂಧಿ ಮಹಾತ್ಮನ ಗಳಿತ ಶರೀರವು
ಅಗ್ನಿದಗ್ಧವಾಯಿತು ನಿನ್ನೆ:

ಕ್ರಿಸ್ತನಂತೆ ಮೂರನೆ ದಿನ ಕಾಂಬ
ಜಗದ ಮೊರೆಯ ಕೇಳುತ ತಾನೆ.

ದೆಹಲಿಯ ನಗರದ ದೊರೆಗಳ ನಡುವೆ
ಆಗಿಹುದಾತನ ಕಡೆ ಸಂಸ್ಕಾರ :
ದೊರೆಗಳ ದೊರೆಯಾಗಿಹನವನಲ್ಲವೆ,
ಇಲ್ಲದಿದ್ದೊರ್ಡೇಂ ದೊರೆಯಾಕಾರ?

ಶಾಂತಿ ಪ್ರವರ್ತಕನೀ ಕಿರುಮನುಜಗೆ
ಪಡೆವಳನಿಗೆ ಸಲ್ಲುವ ಸನ್ಮಾನ
ಸಂದುದುಚಿತವಾಯ್ತೀ ಮಹವೀರನು
ಹರಹಿದ ನಾಡಿಗೆ ಕೀರ್ತಿವಿತಾನ.

ಕ್ರಾಂತಿಕಾರ ; ಪರಕೀಯ ಪ್ರಭುತ್ವದ
ನೊಗದಿಂ ಬಿಡಿಸಿದ ಭಾರತವ :
ಮಾತೆಯ ಕೂರಿಸಿ, ಬಾವುಟ ಹಾರಿಸಿ.
ಎಳೆದನು ಸ್ವಾತಂತ್ರ್ಯದ ರಥವ.

## ಶ್ರೀ ಅರವಿಂದ ಘೋಷರು

"ಇನ್ನೂ ಐಕ್ಯತೆಯೆಡೆಗಲ್ಲದಿದ್ದರೂ ಸ್ವಾತಂತ್ರ್ಯದೆಡೆಗೊಯ್ದ ಆ ಬೆಳಕು ಈಗಲೂ ಬೆಳಗುತ್ತಿದೆ ; ಗೆಲವು ಪಡೆಯುವವರೆಗೂ ಬೆಳಗುತ್ತಲೇ ಇರುತ್ತದೆ."

## ಶ್ರೀ ಡಿ.ವಿ.ಜಿ. ಕೃತ

ಭಾರತಕುಲತಾತಪದಂ !
ಧಾರಿಣಿಯಾ ಸಕಲ ಕುಲ ಸಮಷ್ಟಿಯ ಮುಕುಟಂ ॥

ಶ್ರೀರಾಮರಾಜ್ಯವಿಹರಂ ।
ಪೌರುಷಸೌಜನ್ಯವೃದ್ಧಿಸೀಮಾಶಿಖರಂ ॥

ಬಲವೈಕಮತ್ಯವೆಂಬುದ ।
ಕಲಿಸಲವಂ ತನ್ನ ತಾನೆ ಬಲಿಯಾಗಿಸಿದಂ ॥
ತಲೆಯೆತ್ತೀ ನಾಡ ಜನಂ ।
ನಿಲುವವೊಲವನಿತ್ತನಾತ್ಮಗೌರವ ವರಮಂ ॥

ಜಗಮೀಶವಾಸಮದರಿಂ ।
ವಿಗತಾಹಂತೆಯಲಿ ವಿಶ್ವಜೀವನದೊಳ್ ತಾಂ ॥
ಪುಗುತಾತ್ಮವ ವಿಸ್ತರಿಸಲ್ ।
ಭಗವದ್ದರ್ಶನಮದೆಂದು ಬಾಳ್ದವನಾತಂ ॥

ಈಶ್ವರ ಪದದಿಂ ಬಂದಾ ।
ಭಾಸ್ವರ ಕಲೆ ಮರಳಿ ಸೇರ್ದುದಾ ಸನ್ನಿಧಿಯಂ ॥
ಶಾಶ್ವತಮೆಮ್ಮೊಳ್ ನಿಲುಗಾ ।
ವಿಶ್ವಪ್ರೀತಿಯ ವಿಶಾಲ ನೀತಿಯ ವಿಭವಂ ॥

ಆಗಾಗಳಾನುಮಾ ಗುರು ।
ವಾಗಸದಿಂದೆಮಗೆ ತೋರನೇಂ ಕೆಳೆನಗುವಂ ॥
ತ್ಯಾಗವ ತೋರ್ಪವೆ ಸತತೋ ।
ದ್ಯೋಗವ ನಾಂ ಬಂಧುಯೋಗಮಂ ಮೆಚ್ಚಹವೋಲ್ ॥

## ಶ್ರೀ ಗುಹ ಕೃತ

ಆವಂ ನಿರ್ಮಳಸತ್ತ್ವದೀಪ್ತಿವಿಭವ ಪ್ರಾಚುರ್ಯದಿಂದೆಲ್ಲರೊಳ್
ಭಾವಂ ಧರ್ಮವಿವೇಕದತ್ತಪರಿಯಲ್ ಸ್ವಾತ್ಯಾರ್ಪಣಂ ಗೈದನೋ
'ದೈವಂಮಾನುಷರೂಪ'ಮೆಂಬನುಡಿಗಂ ದೃಷ್ಟಾಂತಮಾವಾತನೋ
ಆ ವಂದ್ಯಾತ್ಮವಂಧ್ಯಸತ್ಯನನಘಂ ಜೀವಿಕ್ಕೆ ಕೀರ್ತ್ಯಂಶದಿಂ

## ರಾಘವ ಕೃತ

ಪರಮಧರ್ಮವಹಿಂಸೆಯೆನ್ನುವ
ಹಿರಿಯ ತತ್ತ್ವವ ನಡೆದು ತೋರಿಸಿ
ಕರುಣೆ ಶಮೆ ದಮೆ ಸತ್ಯಕಾಶ್ರಯವೆನಿಸಿ ಬಾಳ್ದೆಯಲಾ !
ಅರರೆ ! ಹಿಂಸೆಯ ಸಂಚು ಹೊಂಚಿನ
ಮರೆಯ ಹುತ್ತದ ಹಾವು ಹೆಡೆಯನು
ಹರಹಿ, ಕರವನು ಮುಗಿದು ನಗುತಿಹ ನಿನ್ನ ತಂದಿತಲಾ !

ಭಾರತ ಪಾರಾವಾರವ
ಘೋರಾಸುರ ದೈವಶಕ್ತಿಗಳ್ ಕಡೆಕಡೆಯಲ್
ನೇರದಿನುಕ್ಕಿದ ವಿಷಮಂ
ಪೀರಿ, ಜಗಕ್ಕೆರೆದೆಯಲ್ತೆ ಧರ್ಮಾಮೃತಮಂ.

## ಬೇಡಿಕೆ

ನಾಡ ನಾಯಕನೊಡನೆ ನಾವ್ ಬೇಡುತಿಹೆವು :
ನೀಡು ಬಿಡುಗಡೆ ನಾಡಿಗೆಲ್ಲರಿಗೆ ಶುಭವ.

ನೂರಾರು ಪಂಥಗಳ ನುಗ್ಗುನುರಿ ಮಾಡು
ಬೇರೆ ಬೇರಾದವರನೊಮ್ಮತಕೆ ಹೂಡು
ದಾರಿ ತಿಳಿಯದೆಹೋದ ಜನಕೆ ಮತಿ ನೀಡು
ಬೀರಿ ಶಾಂತಿಯನಿಳೆಗೆ, ದೇವ, ಕಾಪಾಡು.

(ಆಗಸ್ಟ್ ೯, ೧೯೪೪ : ಕ್ವಿಟ್ ಇಂಡಿಯಾ ನಿರ್ಣಯದ ದ್ವಿತೀಯ ವಾರ್ಷಿಕ ದಿನಾಚರಣೆಯ ದಿನ)

# ಬಿನ್ನಹ

'ಅಶೋಕಚಕ್ರ' ಎಂಬ ನನ್ನ ರಾಷ್ಟ್ರೀಯಭಾವನೆಯ ಕವನಗಳ ಸಂಗ್ರಹ ೧೯೪೭ರ ಆಗಸ್ಟ್ ೧೫ರಲ್ಲಿ ಪ್ರಕಟನವಾಯಿತು; ಅಂದಿನಿಂದ ಈಚೆಗೆ ರಚಿತವಾದ ಅದೇ ಜಾತಿಯ ಕವನಗಳನ್ನು ಈ ಸಂಗ್ರಹದಲ್ಲಿ ಒಟ್ಟು ಗೂಡಿಸಿದ್ದೇನೆ.

ಈ ಕವನದಲ್ಲಿ ಹಲವು ಈ ಮೊದಲೆ 'ಛಾಯಾ', 'ಕನ್ನಡನುಡಿ', 'ಆದರ್ಶ', 'ಚಿತ್ರಗುಪ್ತ', 'ಜೀವನ' ಈ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಈ ಪತ್ರಿಕೆಗಳ ಸಂಪಾದಕರುಗಳಿಗೆ ನಾನು ಕೃತಜ್ಞ.

ಈ ಪುಸ್ತಕವನ್ನು ಪ್ರಕಾಶಪಡಿಸುವ ಹೊಣೆ ಹೊತ್ತ ಸತ್ಯಶೋಧನ ಪ್ರಕಟನ ಮಂದಿರದ ಒಡೆಯರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ. ಅಂತೆಯೆ, ನಾನು ಕೊಟ್ಟ ತೊಂದರೆಯನ್ನೆಲ್ಲ ಸಹಿಸಿಕೊಂಡು ಇದನ್ನು ಅಂದವಾಗಿ ಅಚ್ಚುಮಾಡಿಕೊಟ್ಟಿರುವ ಓಂಕಾರ್ ಮುದ್ರಣಾಲಯದ ಒಡೆಯರಿಗೂ ಕೆಲಸಗಾರರಿಗೂ ನನ್ನ ವಂದನೆಗಳು ಸಲ್ಲಬೇಕಾಗಿದೆ.

೧೫-೮-೧೯೫೦
ಬೆಂಗಳೂರು

—ರಾಘವ

## ರಾಷ್ಟ್ರರಥ

೧

ಸಿದ್ಧವಾಯ್ತು ರಾಷ್ಟ್ರರಥ :
ಬನ್ನಿರೆಲ್ಲ ಭಾರತ ಜನ,
ಎಳೆಯಿರೀ ರಥ,
ಮಾಡಿರಿ ಶಪಥ :
"ಮಳೆ ಬಿಸಿಲಲಿ ಅನವರತ
ತನುಮನಧನವರ್ಪಿಸುತ
ಎಡರೆಲ್ಲವನೆದುರಿಸುತ
ಕಂಟಕರನು ಚೆದರಿಸುತ
ವಿಶಾಲ ವಿಶ್ವವೀಧಿಯಲಿ
ಭಾರತಾಂಬೆ ಸಲಿಸುವ ವರ
ಸಕಲ ಜನಕೆ ಲಭಿಸುವ ತೆರ
ಮಾಳ್ಪೆವೀ ರಥೋತ್ಸವ"
ಎನುತ ಶಪಥ ಮಾಡಿರಿ,
ರಥಕೆ ಕಯ್ಯ ಹೂಡಿರಿ.

೨

ಹಿಂದು ಸಿಕ್ಕ ಮುಸ್ಲಿಮರು
ಒಂದುಗೂಡುತೆಲ್ಲರೂ–
ಹಿಂದೆ ಮುಂದೆ ಮೊದಲು ಕಡೆ
ಎಂಬ ಕೃತಕಭೇದ ಕೆಡೆ
ಸಾಲುಗೂಡುತೊಕ್ಕಟ್ಟಿನ
ಹಗ್ಗ ಹಿಡಿದು, ಹೊಸಹುಟ್ಟಿನ
ಭಾರತ ರಥವೆಳೆಯಿರಿ,
ದೂರ ದೂರಕೆಳೆಯಿರಿ.

೩

ಯಾರೊಬ್ಬರು ಹಿಂದುಳಿಯದೆ
ಬನ್ನಿರೆಲ್ಲರೂ:
ಹುಡುಗ ಮುದುಕ ಗಂಡು ಹೆಣ್ಣು
ಹೊಲದ ರೈತ ಊರ ಕೂಲಿ
ಕಾರಕೂನ ಝಾಡಮಾಲಿ
ವರ್ತಕ ನಾವಿಕ ಸಿಪಾಯಿ
ಕವಿ ಗಾಯಕ ಕಲೆಗಾರ
ಬನ್ನಿರೆಲ್ಲರೂ :
ನಾಡಿನ ಸೇವೆಯ ಕಾಣಿಕೆ
ತನ್ನಿರೆಲ್ಲರೂ:
ಸೂಳುಗೊಂಡು ರಥದ ಹಗ್ಗ
ಹಿಡಿಯಿರೆಲ್ಲರೂ.

೪

ಸ್ವಾರ್ಥದ ಮೈಲಿಗೆ ಕಳೆದು
ನಾಡೊಲುಮೆಯ ಮಡಿ ತಳೆದು
ಹಾರಿಸಿ ರಾಷ್ಟ್ರದ ಬಾವುಟ;
ತೋರಿಸಿ ಮುನ್ನಡೆವ ಹಟ :
ಹಿಗ್ಗದೆ ಕುಗ್ಗದೆ ಜಗ್ಗದೆ
ಜಗದೊಳಗಾರಿಗು ತಗ್ಗದೆ
ಗುರಿಮುಟ್ಟುವ, ಗೆಲುವ ಹಟ.
ಹೃದಯದ ಹೊಂದಳಿಗೆಯಲಿ
ಪೂರ್ಣ ಭಕ್ತಿ ಫಲವದಿರಲಿ ;
ಮಾತೆಗಾಗಿ ಸರ್ವಸ್ವದ
ತ್ಯಾಗಕೆ ಮನ ಸಿದ್ಧವಿರಲಿ.

೫

ಏನು ನಮ್ಮ ರಥದ ಚೆಲುವು,
ಏನು ನಮ್ಮ ರಥದ ಗೆಲುವು!
ವೇದ ಉಪನಿಷತ್ತು ಕಾವ್ಯ
ಸಕಲ ಕಲಾ ಸಾರ ಸತ್ವ
ಸಮೆದ ದಿವ್ಯ ರಥವಿದು,
    ಪುರಾಣಪೂತ ರಥವಿದು
ರಥವನೆಳೆದ ಪೂರ್ವಜರೊ–
ಅಸಮರಸಂಖ್ಯಾತರು,
    ಪರಮ ಪೂಜ್ಯರು,
    ನಿತ್ಯವಂದ್ಯರು :
ಋಷಿವರ್ಯರು, ಕವಿವರ್ಯರು
ರಣಯೋಧರು, ದಾರ್ಶನಿಕರು:
ಸತ್ಪುತ್ರರು, ನಿರ್ಭೀತರು,
    ಧರ್ಮವೀರರು,
    ಕರ್ಮವೀರರು.

೬

ಆವುದೊ ದುರ್ದೈವದ ಬರ–
ಸಿಡಿಲೆರಗಿತು: ಪರಕೀಯರ
    ಪದಘಾತಕೆ ಹಿಮ್ಮೆಟ್ಟಿ
    ಕುಳಿತೆವು ಕೈಕಟ್ಟಿ !
ರಥ ನಿಂತಿತು ನಡೆಗೆಟ್ಟು :
ಮಕ್ಕಳ ಕ್ಲೈಬ್ಯಕೆ ಮರುಗುತ
ಮುಖ ತಗ್ಗಿಸಿ ಗೋಳಿಟ್ಟು
    ಭಾರತಮಾತೆ
    ಆದಳನಾಥೆ.
ದೈವ ಕರುಣೆಯಿಂದ ಮತ್ತೆ,
ನಾಡನಧೋಗತಿಯಿನೆತ್ತೆ

ಮಾತೆ ಹಡೆದಳೊರ್ವನ,
ಗಾಂಧಿ ಪುತ್ರ ರತ್ನನ.
ಅವನ ಮಹಿಮೆ ಗೈಮೆಯಿಂದ
ತಪೋಜ್ವಲಿತ ಸೇವೆಯಿಂದ
ಆತ್ಮಾರ್ಪಣದಿಂದ
ನಾಡ ಹೇಡಿತನದ ಹುಡಿ
ಆಯ್ತು ಮಿಂಚು ಸಿಡಿಲ ಕಿಡಿ;
ಅಜೇಯವಾಗೆ ರಾಷ್ಟ್ರಶಕ್ತಿ,
ಸತ್ಯಾಗ್ರಹ ಸಮರದಲಿ
ಅರ್ಪಿಸೆ ನೆತ್ತರಿನ ಬಲಿ,
ಮಾತೆ ಹರಸೆ ನಲ್ಮೆಯಲಿ–
ರಥವನಿನಿತು ಮುಕ್ಕು ಮಾಡಿ
ನಡೆಯದೆಂಬ ಎಣಿಕೆಗೂಡಿ
ನಲಿದೆ ನಮ್ಮ ಕೈಗೆ ಕೊಟ್ಟು
ಕಟ್ಟಿದ ರಾಜ್ಯವನು ಬಿಟ್ಟು
ಪರಕೀಯರು ಓಡಿದರು,
ಇನಿತೊಳ್ಳಿತೆ ಮಾಡಿದರು–
ಒಳ್ಳಿತು ಒಳ್ಳಿತಕೆ ನೆಲೆ
ಎಂಬುದಾಯ್ತು ನಮ್ಮಿಂದಲೆ

೭

ಮುಕ್ಕಾದರೇನು ರಥ?
ಮುಕ್ಕೆ ನಾಡ ಮನೋರಥ ?
ರಾಷ್ಟ್ರದ ಶಿಲ್ಪಿಗಳ ಮನ
ರಥಕೆರೆದಿದೆ ಹೊಸ ಹೊಸತನ.
ಕಂಗೊಳಿಸಿದೆ ದಿವ್ಯರಥ,
ನೂತ್ನ ಭಾವ ರತ್ನಖಚಿತ,
ಸ್ವತಂತ್ರತಾ ಸುಶಕ್ತಿ ರಚಿತ;
ಇದಕೆಹಿಂಸೆ ಸತ್ಯ ಗಾಲಿ ;

ಧರ್ಮಪಥದೆ ಸಾಗಲಿ.
ಅತ್ತ ಇತ್ತ ಹೊರಳದ ಪರಿ
ಹಾಕಿರಿ ಸಂಯಮದ ಬಿರಿ.
ಇಂತು ರಥವು ನಡೆಯಲು
ಯಾರಿಗೆ ಎದೆ ತಡೆಯಲು ?
ನಿಲ್ಲದೆ ನಡೆಯಲಿ ರಥ,
ನವ್ಯ ಭಾರತ.

ಅ

ಭರತಮಾತೆ ಅಭಿಜಾತೆ
ನವೋಲ್ಲಾಸ ಸುಸ್ಮಿತೆ
ಶಾಂತಿಭರಿತೆ ಅಭಯದಾತೆ
ಸಕಲ ಲೋಕವಂದಿತೆ
ವರದ ಹಸ್ತ ಶೋಭಿತೆ
ಭಾರತ ಹೃತ್ಕಮಲಾಸನೆ
ಸಸ್ಯಹರಿದ್ವರ್ಣವಸನೆ
ಹಿಮತುಷಾರ ಮಕುಟ ಭೂಷೆ
ವಿವಿಧ ವಿನುತ ಮಧುರ ಭಾಷೆ
ಮಂಡಿಸಿಹಳು ರಥದಲಿ,
ನಡೆದು ಮುಕ್ತಿ ಪಥದಲಿ.
ಬನ್ನಿ ಭಾರತೀಯರೆಲ್ಲ,
ತಾಯ ತೇರನೆಳೆಯಿರಿ :
ಮೊಳಗಲಿ ಉದ್ಘೋಷ,
ಕೇಳಲಿ ವಿಶ್ವ:
"ಜಯ ಜಯ ಭಾರತಮಾತೆ
ಜಯ ಜಯ ಭಾರತಮಾತೆ
ಜಯ ಭಾರತಮಾತೆ !"

# ಸುಭಾಸ ಗೀತೆ

೧

ನಡೆಯಿರಿ ಮುಂದೆ ! ನುಗ್ಗಿರಿ ಮುಂದೆ !
ಹೇಡಿತನವನೀಡಾಡಿರಿ ಹಿಂದೆ !
ನಾಡಿನ ಬಿಡುಗಡೆ ಪಡೆಯುವ ಇಂದೆ !
ಜೈಹಿಂದ್ ! ಜೈಹಿಂದ್ ! ಜೈ ಜೈ ಜೈ !

೨

ಅಹಿಂಸೆಕಾಳೆಗ ನಡೆಯಲಿ, ಇರಲಿ;
ಶೌರ್ಯಪರಾಕ್ರಮ ಭಾರತೀಯರಲಿ
ಉಂಟೆಂಬುದ ತೋರುವ ಕದನದಲಿ !
ಜೈಹಿಂದ್! ಜೈಹಿಂದ್! ಜೈ ಜೈ ಜೈ !

೩

ನಿಷ್ಫಲವಾಯಿತು ಅಹಿಂದೆ ಮಂತ್ರ
ಯುದ್ಧವೊಂದೆ ನಮಗುಳಿದಿಹ ತಂತ್ರ
ಯುದ್ಧದಿಂದಲೇ ನಾಡು ಸ್ವತಂತ್ರ
ಜೈಹಿಂದ್ ! ಜೈಹಿಂದ್ ! ಜೈ ಜೈ ಜೈ!

೪

ಯುದ್ಧವಲ್ಲ, ಶಾಂತಿಯೆ ನಮ್ಮ ಗುರಿ;
ಸದ್ಯಕೆ ಯುದ್ಧವೆ ಸಾಧನ, ನಂಬಿರಿ;
ಗುರಿಯ ಮುಟ್ಟೆ ನಮಗೀ ಮಾರ್ಗವೆ ಸರಿ!
ಜೈಹಿಂದ್! ಜೈಹಿಂದ್! ಜೈ ಜೈ ಜೈ!

೫

ಆಗಲು ಭಾರತ ತಾನು ಸ್ವತಂತ್ರ
ಇರದು ಎಲ್ಲಿಯೂ ಇನ್ನು ಪರತಂತ್ರ;
ವಿಶ್ವಶಾಂತಿಗಿದುವೇ ಮೂಲಮಂತ್ರ,
ಜೈಹಿಂದ್ ! ಜೈ ಹಿಂದ್ ! ಜೈ ಜೈ ಜೈ!

೬

ನಮ್ಮದಲಾ ಭಾರತವೀರರ ಪಡೆ
ನಮ್ಮದಲಾ ನಿಜದಲಿ ನಾಡ ಪಡೆ
ನಮ್ಮಿಂದಲಲಾ ತಾಯ ಬಿಡುಗಡೆ
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೭

ಸೆರೆಮನೆಯೆಂದಿಗೆ ಬಿಡುಗಡೆ ತಹುದು?
ಭಾರತವೇ ಸೆರೆಮನೆಯಾಗಿಹುದು;
ಅದನೊಡೆವುದೆ ಇಂದೆಮ್ಮ ಗುರಿಯಹುದು
ಜೈಹಿಂದ್ ! ಜೈ ಹಿಂದ್! ಜೈ ಜೈ ಜೈ !

೮

ಕೂಗಿರಿ : ನಮ್ಮದು ಹಿಂದೂಸ್ಥಾನ್ !
ಮೊಳಗಲಿ ಈ ನುಡಿ ತಾನೇ ತಾನ್ !
ನಮ್ಮ ನಾಡುಳಿಯೆ ನಮಗಿಹುದೇನ್ ?
ಜೈಹಿಂದ್! ಜೈಹಿಂದ್! ಜೈ ಜೈ ಜೈ!

೯

ರಾಷ್ಟ್ರಧ್ವಜದಡಿಯಲಿ ಒಗ್ಗೂಡಿ
ಭೇದಭಾವಗಳ ಪುಡಿಪುಡಿ ಮಾಡಿ
ನಾಡಿನ ಬಿಡುಗಡೆ ಹಾಡನು ಹಾಡಿ
ಜೈಹಿಂದ್! ಜೈಹಿಂದ್! ಜೈ ಜೈ ಜೈ!

೧೦

ಹಿಂದೂ ಮುಸ್ಲಿಮ ಸಿಕ್ಕ ಬಂಗಾಳಿ
ತೆಲುಗ ತಮಿಳ ಕನ್ನಡಿಗ ಮಲೆಯಾಳಿ
ಗುಜರಾಥಿ ಮರಾಠರ ಎದ್ದೇಳಿ
ಜೈಹಿಂದ್ ! ಜೈ ಹಿಂದ್! ಜೈ ಜೈ ಜೈ !

೧೧

ನೆನೆಯಿರಿ ಝಾನ್ಸಿಯ ಲಕ್ಷ್ಮೀರಾಣಿ
ನೆನೆಯಿರಿ ತಾಂತ್ಯಾಟೋಪಿಯ ವಾಣಿ
ನೆನೆಯಿರಿ ಬಹದೂರ್‌ಷಹನ : ಹೂಣಿ
ಜೈಹಿಂದ್ ! ಜೈ ಹಿಂದ್! ಜೈ ಜೈ ಜೈ !

೧೨

ಇಂದೂ ಲಕ್ಷ್ಮಿಯೆ ಹೆಣ್‌ಪಡೆ ರಾಣಿ
ನಮ್ಮ ಸೈನ್ಯಕವರೇ ಮುನ್‌ಚೂಣಿ
ಗುಂಡಿನೇಟು ಬರೆ ಗಂಡು ಗುರಾಣಿ
ಜೈಹಿಂದ್ ! ಜೈಹಿಂದ್ ! ಜೈ ಜೈ ಜೈ !

೧೩

ಎತ್ತಿರಿ ಕೋವಿ, ಹಾರಿಸಿ ಗುಂಡು !
ಕೆಳಗುರುಳಲಿ ವೈರಿಯ ತಲೆಚೆಂಡು !
ಹಿಮ್ಮೆಟ್ಟದೆ ಮಡಿದವನೇ ಗಂಡು !
ಜೈಹಿಂದ್ ! ಜೈಹಿಂದ್ ! ಜೈ ಜೈ ಜೈ !

೧೪

ಬ್ರಿಟನ್ ಅಮೇರಿಕ ರಷ್ಯ ಜಪಾನು
ಯಾವ ರಾಷ್ಟ್ರತಾನಾದರೆ ಏನು ?
ತಿಳಿಯಿರಿ, ಭಾರತ ಸಿಂಹಕೆ ಬೋನು
ಜೈಹಿಂದ್ ! ಜೈಹಿಂದ್! ಜೈ ಜೈ ಜೈ !

೧೫

ಅದೊ ಅದೊ ! ಅಗೊ ಅಗೊ! ಬಂದನರಿ
ನೀವು ಸಿಂಹ, ಅದ ಮರೆಯದಿರಿ
ಜೋಕೆ ! ಆಂಗ್ಲ ಕಾಳೆಗದಲ್ಲೊ ನರಿ !
ಜೈಹಿಂದ್! ಜೈಹಿಂದ್ ! ಜೈ ಜೈ ಜೈ!

೧೬

ನಮ್ಮ ನಾಡಿನಲಿ ಕಾಲನ್ನೂರಿ
ನಮ್ಮವರೆಲ್ಲರು ನಮ್ಮನು ಸೇರಿ
ಅರಿಯನಟ್ಟುವರು ನಮ್ಮೊಡಹೋರಿ
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೧೭

ಮರೆಯದಿರಿ ! ಮರೆಯದಿರಿ !
"ಚಲೋ ದಿಲ್ಲಿ !"–ಇದುವೇ ನಮ್ಮ ಗುರಿ
ಇದಕೆ ನಮ್ಮ ಹೋರಾಟ ತಿಳಿಯಿರಿ !
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೧೮

ಕಾಡನು ಸೀಳಿರಿ, ಬೆಟ್ಟವನೊಡೆಯಿರಿ !
ತಡೆಯ ಬಂದ ವೈರಿಯ ಪಡೆ ಹೊಡೆಯಿರಿ !
ನುಗ್ಗುತ ನುಗ್ಗುತ ಮುಂದಕೆ ನಡೆಯಿರಿ !
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೧೯

ಕಟ್ಟಕಡೆಯಲ್ಲಿ ನಮಗೆ ಜಯ ಸಿದ್ಧ
ಅಲ್ಲಿಯವರೆಗೂ ನಿಲ್ಲದು ಯುದ್ಧ
ಗೆಲವ ಪಡೆಯೆ ಮೇಣ್ ಮಡಿಯೆ ನಾವ್ ಬದ್ಧ
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೨೦

ಮೂಡಣಿಂದ ಸ್ವಾತಂತ್ರ್ಯ ಕಿರಣವನು
ತೂರಿ, ದಾಸ್ಯತಿಮಿರದಾ ಹರಣವನು
ಹೀರಿ, ಸೇವಿಸುವ ಮಾತೆ ಚರಣವನು
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೨೧

ಭಾರತಕೆಂದೆಂದಿಗು ಜಯ ಜಯ ಜಯ !
ಭಾರತ ನಾಯಕರಿಗೆ ಜಯ ಜಯ ಜಯ !
ಭಾರತ ರಾಷ್ಟ್ರದ ಸೈನ್ಯಕೆ ಜಯ ಜಯ ಜಯ !
ಜೈಹಿಂದ್ ! ಜೈಹಿಂದ್! ಜೈ ಜೈ ಜೈ!

೩೦-೧೧-೪೬]

[ಇದೊಂದು ಐತಿಹಾಸಿಕ ಘಟನೆಯೊಂದರ ಪ್ರಭಾವದಿಂದ ಮೂಡಿಬಂದ 'ಐತಿಹಾಸಿಕ' ಕವನವೆಂದು ಎಣಿಸಬೇಕೇ ಹೊರತು, ಇದರಲ್ಲಿ ಎತ್ತಿ ಹಿಡಿದಿರುವ ಧ್ಯೇಯಧೋರಣೆಗಳು ಅವಶ್ಯಕವಾಗಿ ಕವಿಗೆ ಸಮ್ಮತವಾದುವೆಂದಾಗಲಿ ಸರ್ವ ಕಾಲಕ್ಕೂ ಪರಿಗ್ರಾಹ್ಯವಾದವುಗಳೆಂದಾಗಲಿ ಭಾವಿಸಲಾಗದು. ಅಲ್ಲದೆ, ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸುಭಾಸರ ಸಾಹಸೋದ್ಯಮವೂ ಒಂದು ಮುಖ ಹಾಗೂ ಉತ್ಕಟ ದೇಶಾಭಿಮಾನದಿಂದ ಪ್ರೇರಿತವಾದುದು ಎಂಬುದನ್ನು ಮರೆಯಲಾಗದು.]

## ಬಿಡುಗಡೆ ಹಾಡು

೧

ಬಂತು ಬಂತು ಬಿಡುಗಡೆ!
ಜಯಭೇರಿಯ ಹೊಡೆ, ಹೊಡೆ!
ದಾಸ್ಯದ ತಮವೋಡೆ ಓಡೆ
ಸ್ವಾತಂತ್ರ್ಯದ ಭಾನು ಮೂಡೆ
ಹಿಗ್ಗುತಿಹುದು ನಾಡು ನಾಡೆ!
ಇನ್ನು ನಮಗೆ ಯಾರ ತಡೆ?

ಇನ್ನೇತಕೆ ಆ ಹಿನ್ನಡೆ?
ಮುಂದೆ ನಡೆ ! ಗೆಲವ ಪಡೆ !
ದೈವವಿಹುದು ನಮ್ಮ ಕಡೆ,
ರಕ್ಕೆಯಿಹುದು ಬೆಂಗಡೆ.

೨

ನೋಡು ನೋಡು ಮೇಲ್ಗಡೆ
ಸುತ್ತಮುತ್ತಲೆಲ್ಲೆಡೆ :
ಬಾನ ತುಂಬ ಮೋಹರಿಸಿಹ
ಮುಗಿಲತಂಡವದೋ, ಅಹಹ !
ಸಾರುತಿಹುದು ಬಿಡುಗಡೆ,
ತೋರುತಿಹುದು ಮುನ್ನಡೆ !

೩

ನಭೋಂಗಣದ ರಂಗದಲ್ಲಿ
ಹಿಡಿದು ಮಿಂಚುಗತ್ತಿ ಕೈಲಿ
ಮೇಘದ ಕುದುಳೋಳಿ ಕೈಲಿ
ಹೇಡಿಗಳನು ಕೂಗಿ ಗದರಿ
ತಕ್ಕಿಟ ಧಿಮಿಕಿಟಿ ತಾಕಿಟ

ತತ್ತಳಾಂಗು ತಧಿಗಿಣ ತೋಂ
ಎನೆ ಗುಡುಗುಡಿಸುವ ಕುಣಿತ
ನೆಲ ಪಳಂಚಲನುರಣಿತ
ಧೀಂಕಿಡುತ್ತ ದೆಸೆದೆಸೆಗೆ
“ಓಹೋ! ನಾಡಿಗೊಸಗೆಯೊಸಗೆ !”
ಎಂದು ಬೊಬ್ಬಿರಿಯುತ
ಹರ್ಷವರ್ಷ ಸುರಿಯುತ
ಸ್ವಾತಂತ್ರ್ಯದ ಘೋಷಕನದೊ
ಶ್ರಾವಣ ಪುರುಷ!

ತಂದನು ಹರುಷ!
ನಮಗೀ ವರುಷ!

೪

ಮತ್ತಿದೊ ಶ್ರಾವಣನ ಗೆಳೆಯ
ಪಾರತಂತ್ರ್ಯ ಸಹಿಸದೆಳೆಯ:
ಹೆಮ್ಮರಗಳನುರುಳಿಸುವ
ಹೂಗಳ ಚೆನ್ನರಳಿಸುವ
ಗಂಡರ ಮೈದೂಡುವ
ಹೆಂಗಳವೊಡನಾಡುವ
ತಾರೆಗಳನೆ ತೂಪಿರಿವ
ಬಾನಿನ ಬಸಿರನೆ ಇರಿವ
ಪ್ರಳಯ ರೂಪಿ
ಪ್ರಣಯ ರೂಪಿ
ಸ್ವಾತಂತ್ರ್ಯದ ಪರಮ ಮೂರ್ತಿ
ಸ್ವಾತಂತ್ರ್ಯದ ಸಾರುತ
ಬಂದ ಮಾರುತ.
ಬೀಸುತ್ತಿದೆ ಬೀಸುತ್ತಿದೆ
ಸ್ವಾತಂತ್ರ್ಯ ಸಮೀರ !
ಸ್ವಾತಂತ್ರ್ಯದ ಉಸಿರಲ್ತೆ
ಅಮೃತಾಹಾರ !

೫

ಇತ್ತ ನೆಲ, ಅತ್ತ ಹೊಲ
ಹಚ್ಚ ಹಸುರು ತುಂಬಿತಲಾ!
ಬಂದಿಹ ಬಿಡುಗಡೆಯ ಹರಹೊ
ಬರುವ ಸೊಗದ ಸುಗ್ಗಿ ಕುರುಹೊ
ಎನೆ ನಗುನಗುತಿಹುದು ತಿರೆ
ನಾಡಿಗೆ ಬಿಡುಗಡೆಯು ಬರೆ.

ಚೆನ್ನೆ ನಾವು ಸುಮ್ಮನಿರೆ?
ನಕ್ಕುನಲಿವ–ಎಲ್ಲರ ಕರೆ:
    ಹಬ್ಬ ಮಾಡುವ ;
    ಕುಣಿದು ಹಾಡುವ.

೬

ಶಾಂತಿಯ ಸಾಲ್‌ಬಾವುಟವೆನೆ
ಬಾನಿನ ಆ ಕೊನೆಯಿಕೊನೆ
ಮುಟ್ಟುವ ಪರಿ ಸಾಲ್ವಿಡಿದು
ಬಿಡುಗಡೆಯಾ ರೆಕ್ಕೆ ಬಡಿದು
ನಾಳಿನ ಬಿಡುಗಡೆಯುಳಿವಿಗೆ
ಒಕ್ಕಟ್ಟಿನ ಬಲವೆ ನಮಗೆ
ದಾರಿಯೆಂದು ತೋರುವ ಪರಿ
ಸಾಲ್ ಕೆಡದೊಲು ಕೂಡಿ ಹಾರಿ
ತೂಗಿ ತೊನೆದು ಒಲೆಯುತಿರುವ
ಬೆಳ್‌ವಕ್ಕಿಯ ಸಾಲ್ ನೋಡಿರಿ–
ಬರೆಯುತಿಹವು ಬಿಡುಗಡೆ,
ಬಾನ ಪಟದ ಮೇಲ್ಗಡೆ !
ಆಲಿಸಿರಾಲಿಸಿರಿ ಅದೋ!
ಘಣಘಣಿಸುವ ಘಂಟಾಧ್ವನಿ
ಮಂಗಲವಾದ್ಯಗಳ ಧುನಿ
ಪ್ರಾರ್ಥನೆ ಮಂತ್ರಗಳ ಘೋಷ:
ಗುಡಿ ಮಸೀತಿ ಚರ್ಚಿನಲ್ಲಿ
ಆಸ್ತಿಕ ಜನವೃಂದ ನೆರೆದು
ಬಿಡುಗಡೆಯನು ಕರುಣಿಸಿದಾ
ಪರದೈವವ ನೆನೆನೆನೆದು
ಹಾಡಿ ಹೊಗಳಿ ತೂಗಿ ತೊನೆದು
ಭಕ್ತಿಯಿಂದ ನುತಿಸಿ ಕುಣಿದು
ಹರ್ಷದಿಂದ ತಣಿದು ಮಣಿದು

ನಾಡಿಗೆ ಶುಭವಾಗಲೆಂದು
ಲೋಕದ ಜನ ಸುಖಿಸಲೆಂದು
    ಬೇಡುತಿರುವರು.

೭

ಈ ಮಂಗಲ ಸಮಯದಲ್ಲಿ
ನೆನೆ ವಂದಿಸು ಮೌನದಲ್ಲಿ
ಭಾರತ ಸ್ವಾತಂತ್ರ್ಯಕಾಗಿ
ಮನೆ ಮಠ ಅಸುವನ್ನೆ ನೀಗಿ
ಹೋರಾಡಿದ ಮಹಾತ್ಯಾಗಿ
    ಸತ್ಯಾಗ್ರಹ ವೀರನ,
    ಅಜ್ಞಾತ ಸುಭಟನ,
    ನಾಡಿನಮೃತ ಪುತ್ರನ.
ಮತ್ತೆ ನೆನೆಯ : ನಮ್ಮ ಬಾಪು !
ನಮ್ಮ ನಾಡಿಗವನೆ ಕಾಪು !
ವೈರಾಗ್ಯದ ಪರಮ ಮೂರ್ತಿ,
ಅವನ ಬಾಳ ಮಂತ್ರ ಪ್ರೀತಿ !
ನಾಡನೆಲ್ಲನೊಂದು ಬೆಸೆದು
ಅಹಿಂಸೆಯಾ ಕತ್ತಿ ಮಸೆದು
ಇತ್ತು ನಾಡಿಗದನು ಒಸೆದು
ವೈರಭಾವ ಗಾಳಿಗೆಸೆದು
ವೈರಿಯೆನಿಸಿಕೊಂಡವರನು
ಪ್ರೀತಿಯಿಂದ ಕೊಂದವನವ,
ಬಿಡುಗಡೆಯನು ತಂದವನವ:
ಹತ್ತನೆಯವತಾರವೆನಿಸಿ
ಬುದ್ಧನ ಸರಿ ನಿಂದವನವ !
    ಅವನ ವಂದಿಸು,
    ಅವನ ಪೂಜಿಸು !

೮

ಸ್ವಾತಂತ್ರ್ಯದ ಪಕ್ಷಿರಾಜ
ರೆಕ್ಕೆ ಬಡಿಯುತಿಹನೊ ಎನೆ
ತಪ್ಪದೆ ಮನೆಮನೆಯ ಮೇಲೆ
ಗೋಪುರ ಸೌಧಾಗ್ರಗಳಲಿ
ಅಲ್ಲಿ ಇಲ್ಲಿ ಎಲ್ಲೆಲ್ಲಿಯು
ಏನ್ ಬಾವುಟಗಳ ಲೀಲೆ !

೯

ಇತ್ತ ನೋಡು ಕನ್ನಡ ಗುಡಿ
ಎತ್ತಿರುವುದು ನಾಡ ಗುಡಿ
ಏರಿಸಿಹುದು ನುಡಿಯ ಗುಡಿ
ಹಾರಿಸಿಹುದು ದೊರೆಯ ಗುಡಿ:
ನೋಡಶೋಕ ಚಕ್ರಧ್ವಜ,
ನೋಡು ಗಂಡಭೇರುಂಡ,
ಕನ್ನಡನಾಡಿನ ಮುಖಂಡ-
ರೆಲ್ಲರೆಂದೊ ಕನಸು ಕಂಡ
ಕರ್ನಾಟಕದೊಕ್ಕೂಟ
ಕಾಣುವ ಕನ್ನಡ ಬಾವುಟ!
ಕೇಳಿದೊ ಕನ್ನಡದ ಕರೆ;
'ಚಿರ ಬಾಳಲಿ ನಮ್ಮ ದೊರೆ!
ಪ್ರಜೆಯ ದೈವವೆಂದು ನಂಬಿ
ಅವರ ಬಯಕೆಗಳನು ತುಂಬಿ
ನಲಿವ ಮಂದಿ ನಾಡ ಸಿರಿ
ಎಂಬರಿವಿನ ಹಿರಿಯ ಗುರಿ
ಅರಸುತನ ನಡಸುತಿರೆ,
ಕಾಂಬ ದೈವವಲಾ ದೊರೆ !
ಅಂತಹ ದೊರೆಯೆನಿಸಿಕೊಳುವ
ಮಾದರಿ ಮೈಸೂರ ದೊರೆ!

ಅವನ ಅರಸುತನದಲಕ್ಕೆ
ಕರ್ನಾಟಕಕೊಮದೆ ಟಕ್ಕೆ !
ಜಯ ರಾಷ್ಟ್ರಧ್ವಜಕೆ ಜಯ !
ಜಯ ಕನ್ನಡ ಬಾವುಟಕೆ !
ಜಯ ಮೈಸೂರಿನ ಧ್ವಜಕೆ!
ಜಯ ಜಯಚಾಮೇಂದ್ರಗೆ ಜಯ !
ಜಯ ಮಂಗಳವೆಲ್ಲರಿಗೆ !
ಭಾರತ ಚಿರ ಬಾಳ್ಗೆ !
ಕನ್ನಡ ಚಿರ ಬಾಳ್ಗೆ !
ಬಿಡುಗಡೆ ನಿಲ್ಗೆ !

೧೫-೮-೧೯೪೭]

## ಕರ್ಮವೀರನೆನಿಸಯ್ಯ !

ದುರ್ಬಲರಹಿಂಸೆಯನು ದೂರವಿರಿಸಯ್ಯ
ಕರ್ಬೊನ್ನ ಕಾಯವಂ ಪಡೆದು ಕೊಲ್ಲದಿರಯ್ಯ॥

ಕಯ್ಯಲಾಗದ ಹೇಡಿಯೆಂದೆನಿಸಿಕೊಳ್ಳದಿರು ;
ಮೆಯ್ಯೊಳಾರ್ಪಿಲ್ಲವೆಂದೆನಿಸಿಕೊಳ್ಳದಿರು;
ಬಯ್ಯಲವನಿಗೆ ಬಾಯೆ ಇಲ್ಲವೆನದಿರಲಿ;
ಸುಯ್ಯಲವನಿಗೆ ಉಸಿರೆ ಇಲ್ಲವೆನದಿರಲಿ.

ನಿನ್ನದಟನರಿತು ಅರಿ ಬೆದರುತಿರಲಿ;
ನಿನ್ನ ಪೌರುಷ ತೇಜ ಕೆದರುತಿರಲಿ :
"ಬನ್ನಪಡುವೆವು ನಾವು ಈ ನಾಡ ಕೆಣಕೆ" ಎಂ–
ದೆನ್ನುವಂತಿರಲಯ್ಯ ನಾಡು ನಿನ್ನಿಂದ.

ಕತ್ತಿಯೊರೆಯೊಳಗಿರಲಿ, ಕೆಚ್ಚು ಎದೆಯೊಳಗಿರಲಿ,
ಎತ್ತಿದಾ ಕೈ ತಾಳು ತಾಳೆನ್ನುತಿರಲಿ;
ಮುತ್ತಿನಂತಹ ನಯದ ನುಡಿ ನಲಿಗೆ ವದನದಲಿ;
ತೆತ್ತು ಜೀವನ ಹೋರೆ ಮನ ಸಿದ್ಧವಿರಲಿ.

ಹೇಡಿ ಹುಳುಬಾಳಿಗಿಂ ವೀರಮರಣವೆ ಮೇಲು;
ನಾಡಿಗಾತ್ಮಾರ್ಪಣವು ನಿನ್ನ ಸುಕೃತ ಫಲ:
ಬಾಡಿಸುವೆಯೇಕೆ ನಿನ್ನಾತ್ಮಕುಸುಮವ, ಬರಿದೆ?
ನೀಡಯ್ಯ, ಭಾರತಾಂಬೆಯ ಪೂಜೆ ಸಲಲಿ.

"ಅರಿಭಯಂಕರನಾದೊಡೇನಹಿಂಸೆಯ ಮೂರ್ತಿ;
ಸರುವರ ಸಹೃದಯನೀ ಭಾರತೀಯ;
ಧರೆಯ ಶಾಂತಿಯ ಕಾವ ಧರ್ಮಭಟನಿವನಯ್ಯ;
ಪರಮ ಸಾತ್ತ್ವಿಕನಾಗಿಯುಂ ಪುರುಷಸಿಂಹ!"–

ಎಂದೆಲ್ಲ ಲೋಕ ಕೊಂಡಾಡುವೊಲು ಧರ್ಮವನು
ಮುಂದಿಟ್ಟು, ಪಾಲಿಸುತ ಯೋಗವಹ ಕರ್ಮವನು
ಸಂದೇಹಕೆಡೆಯಿಲ್ಲದೊಲು ಬಾಳ ಮರ್ಮವನು
ಚೆಂದದೊಳು ಮೆರೆ, ಕರ್ಮವೀರನೆನಿಸಯ್ಯ !

೧೬–೮–೧೯೪೭

## ಹುಟ್ಟುಹಬ್ಬದ ದಿನದ ಹಲುಬುನುಡಿ

"ಸತ್ಯಧರ್ಮಗಳಿಂದ ಪಡೆದ ಸ್ವಾತಂತ್ರ್ಯವನು
    ಹೊಲೆಗೆಡಿಸುತಿಹೆವಕಟ ಹೀನಕೃತ್ಯಗಳಿಂದ;
    ಕೊಲೆಗಡಿಕರಾಗಿಹೆವು; ನನಗಿಲ್ಲವಾನಂದ;
ಹತ್ಯೆಯೇ ಹಾದಿಯಯ್ತೇ ನವ್ಯಭವನವನು
ಸ್ತುತ್ಯಮಪ್ಪಂತೆ ರಚಿಸಿಯದಂ ಪ್ರವೇಶಿಸಲು?

ನಿನ್ನೆ ನಾವಣ್ಣ ತಮ್ಮದಿರಿಂದು ವೈರಿಗಳೆ?
ಅಣ್ಣ ತಪ್ಪೆಸಗಿರುವ ತಮ್ಮನನು ಅಸುವ ಕಳೆ–
ದಿತ್ಯರ್ಥ ಮಾಡುವನೊ ದಾಯಾದ್ಯ, ದುಃಖ ಬಲು.
ಹಬ್ಬಿ ಹರಡುತ್ತಿರುವ ಈ ಮತದ್ವೇಷದುರಿ
ನಂದುವರಮೆನ್ನ ಮನವೆಂತೊಂದುವುದು ಶಾಂತಿ?
ಕುಂದುತ್ತಲಿಹುದಲಾ ನಾಡ ಕೀರ್ತಿಯ ಕಾಂತಿ!
ಹಬ್ಬ ಮಾಡುತಲಿಹಿರಿ, ಹಾಡಿ ಹರಸುತಲಿಹಿರಿ !
ಇಂದಿನೀ ಪಾಡ ನೋಡುವ ಬದುಕ ನಾನೊಲ್ಲೆ."–
ಕೇಳದೇ ಹಲುಬುನುಡಿ ? ನಾಡವರ ಎದೆ ಕಲ್ಲೆ ?

೪–೧೦–೧೯೪೭]

## ವಿಜಯದಶಮಿ

ವಿಜಯದಶಮಿ, ಅಹ ! ವಿಜಯದಶಮಿ, ದಿಟ !
ಹಾರಲಿ ವಿಜಯಪತಾಕೆ !
ಪ್ರಜೆಯ ಶಕ್ತಿ ಗಳಿಸಿರುವ ವಿಜಯವಿದು
ಶುಭವು ಶುಭವೊ ಕರ್ನಾಟಕಕೆ !

ಒಡೆದ ನಾಡನಿನ್ನೊಂದುಗೂಡಿಸುವ
ಕಜ್ಜ ನಮ್ಮ ಮುಂದೆ :
ತಡವ ಮಾಡದೆಯೆ ಕೈಯ ಕೂಡಿಸಿರೆ
ಶುಭದ ಘಳಿಗೆಯಿಂದೆ.

ಬಂದರೇನು ಬಿಡುಗಡೆ? ನಾಡೊಡೆದಿರೆ
ನಲಿವಳೇನು ನಾಡಿನ ತಾಯಿ ?
ಒಂದುಗೂಡಿ ನಾವೆಮ್ಮ ಮನೆ ನಿಲಿಸೆ
ನಿಂದು ಪೊರೆಯುವಳು ಆ ತಾಯಿ !

ಕನ್ನಡದರಮನೆ ಮೇಲ್ಗಡೆ ಹಾರಲಿ
ಕನ್ನಡ ವಿಜಯಪತಾಕೆ !
ಕನ್ನಡ ನಾಡಿನ ಕಣ್ಣಮಣಿಯೆನಿಸಿ
ಕನ್ನಡ ದೊರೆ ಚಿರ ಬಾಳ್ಗೆ !

೨೦-೧೦-೧೯೪೭]

## ಬಾಪೂಜಿಗೆ ಬಾಷ್ಪಾಂಜಲಿ

### 'ವಾಣಿ'ಯ ವಾಣಿ :

ಬಾರಮ್ಮ ಭಾರತಿ,
ಬಾರಮ್ಮ ನುಡಿತಾಯಿ;
ನುಡಿಸಮ್ಮ, ನುಡಿ, ತಾಯಿ.
ಏಕಿಂತು ಸುಮ್ಮನಿಹೆ?
ಏಕಿಂತು ಬಿಮ್ಮನಿದೆ ?
ಪುತ್ರರತ್ನವ ಕಳೆದುಕೊಂಡು ದುಃಖದೊಳಿರುವೆ
ಭಾರತಾಂಬೆಗೆ ನಿನ್ನ ಸಾಂತ್ವವಚನವ ಪೇಳ:
ಪ್ರೇಮಮಯಿ ತಾಯಿ ಕಸ್ತೂರಿ ಕಣ್ಮುಚ್ಚಿದಳು :
ಬುದ್ಧಿ ಹೇಳುವ ತಂದೆ ಕಳೆದನಿಂದು.
ಭಾರತೀಯರು ನಾವು ತಬ್ಬಲಿಗಳಾಗಿಹೆವು;
ಮುಂದುಗಾಣದೆ ಮನವು ಮುಗ್ಗರಿಸುತಿಹುದಮ್ಮ.
ನಿನ್ನ ನುಡಿ ಸುಧೆಗರೆದು
ಕಣ್ಣು ಕಾಣದ ನಮಗೆ
ದಾರಿ ತೋರಮ್ಮ,
ಶುಭವ ಕೋರಮ್ಮ

ಓ, ಭಾರತಿ !
ಓ, ತಾಯಿ !
ನಿನ್ನ ಮಣಿಗಣ ವಿಭೂಷಿತ ಮಕುಟವೆಲ್ಲಮ್ಮ?
ನಿತ್ಯ ನುಡಿಯುವ ನಿನ್ನ ದಿವ್ಯವೀಣೆಯದೆಲ್ಲಿ ?
ವೀಣಾ ವಿತಾನಕ್ಕೆ ಸರಿಜೋಡಿ ನರ್ತಿಸುವ
ನಿನ್ನ ವನಿಲೆಲ್ಲಿ ?
ಕರದ ಪುಸ್ತಕವೆಲ್ಲಿ ?
ಜಪಮಾಲೆಯೆಲ್ಲಿ ?
ಕೊರಲು ಕಟ್ಟಿಹುದೇಕೆ, ಪೇಳಮ್ಮ ತಾಯಿ?
ನಿನ್ನ ಕೊರಲೇ ಕಟ್ಟಿ ನಮಗುಂಟೆ ಬಾಯಿ ?

ತಡೆ ಕಂದ,
ತಡೆ ಕಂದ,
ಮೌನವೆ ಮಹಾಗೀತೆ ನಾಡಿನಲ್ಲಿಂದು:
ಮೌನಮುದ್ರಿತವಾಗಿ ತಲೆಬಾಗಿಸಿದೆ ನಾಡು.
ತಗದು ತಗದೆನಗಿಂದು ಎಂದಿನಾ ನಲಿವು, ಹಾಡು.
ಭಾರತಾಂಬೆಯ ಮಕುಟ ಕಳಚಿ ಬಿದ್ದಿರಲಿಂದು
ನನಗೆಲ್ಲಿ ಮಕುಟ ?
ಭಾರತದ ವಾಣಿ ತಾ ನುಡಿಯ ನಿಲ್ಲಿಸಿತಿಂದು,
ನನ್ನ ವೀಣಾವಾಣಿ ನುಡಿವುದೆಂತು ?
ಸ್ವಾತಂತ್ರ್ಯ ವರ್ಷದಾಗಮನದುತ್ಸಾಹದಲಿ
ಕುಣಿದ ನಲಿವಿನ ನವಿಲು ನಡೆಗೆಟ್ಟು ನಿಂತಿರಲು
ನನ್ನ ನವಿಲಿಗೆ ಕುಣಿವ ಹಿಗ್ಗದಿನ್ನೆಲ್ಲ?
ದೇವತೆಗಳೇ ನನ್ನ ಕಳುಹಿದರು, ಓ ಕಂದ :
ಲೋಕದ ಮಹಾತ್ಮನನು ಹೊಗಳಿ ಬಾರೆಂದು.
ಶೋಕಗೀತೆಗೆ ಶ್ರುತಿಯೆ, ಬೆಡಗು ಬಿನ್ನಣವೆ?
ನುಡಿಯಲೊಲ್ಲದ ವೀಣೆ, ಕುಣಿಯಲೊಲ್ಲದ ನವಿಲು,
ಇವನು ಹಿಂದೆಯೆ ಬಿಟ್ಟು, ಮಕುಟವನ್ನು ತೆಗೆದಿರಿಸಿ,
ಧವಳಚಾರಿತ್ರನಿಗೆ ಮುದಮಪ್ಪುದೆಂದೆನ್ನ

ಧವಳವಸ್ತ್ರವನೊಂದ ಮರೆಯದೆಯೆ ತೆಗೆದುಟ್ಟು,
ಕಂಬನಿಯ ವರ್ಷವನು ಸುರಿಸುತ್ತ ಕಾಲ್ಗೆಟ್ಟ
ಕಾಲಮೇಘವನೇರಿ, ಮುಗಿಲ ಬಟ್ಟೆಯಲೆಲ್ಲ
ಮಂದೈಸಿ ನಿಂತಿರುವ ದೇವತೆಗಳೊಗ್ಗಿನಲಿ
ನಡೆಯಲಾರದೆ ನಡೆದು ಪವನ ಮುಂಗಡೆ ಬರಲು
ದಾರಿಯನು ಬಿಡಿಸುತ್ತ, ಬಾಂಬಟ್ಟೆಯಂಬಿಡಿದು
ಚರಿಸಿ ಬಂದೆನು, ಕಂದ : ಲೋಕಕ್ಕೆ ಲೋಕವೇ
ಮರುಗುತಿದೆ, ಕೊರಗುತಿದೆ; ಮುಳುಗಿರ್ಪುದಳಲಿನಲಿ,
ಅಳಲಿನುಲಿ ಚಿಮ್ಮುತಲೆಯಲೆಯಾಗಿ ಹೊಮ್ಮುತ್ತ
ಬಾನ್‌ಬಯಲನೆಲ್ಲ ತುಂಬಿದೆ ಅಳಲುವಾಡಾಗಿ.
ವಿಶ್ವವಾಣಿಯ ಮುಂದೆ ನಾನೆ, ಬಡ ವಾಣಿ ?
ಆಲಿಸಾಲಿಸು, ಕಂದ : ವಿಶ್ವವಾಣಿಯ ಕೇಳು :
ಶೋಕಧಾರವನಿಳುಹು, ಧೃತಿಯ ತಾಳು.

೨

**ಪಂಡಿತ ಜವಹರಲಾಲ್ ನೆಹರು:**

ಭಾರತದ ಪುತ್ರನೊರ್ವಂ ನುಡಿದನಿಂತು :
ಗದ್ಗದಿಸುತಿರೆ ಕಂಠ, ಹೃದಯ ಬಿರಿಯುತಿರೆ:
ಮಡಿದಿಹ ಮಹಾತ್ಮನಿಗೆ ಪಟ್ಟಶಿಷ್ಯಂ ; ಮೇಣ್
ಇರುಳು ಕವಿದಿಹ ಭಾರತದ ಪೂರ್ವದಿಶೆಯಲ್ಲಿ
ಮೂಡಿ ಮನಕುತ್ಸಾಹ ತುಂಬುತಿಹ ಕಿರಣಂ:

"ಓ, ಗೆಳೆಯರೇ, ನಮ್ಮ ಜೀವನದ ಬೆಳಕಿಂದು
ಕಾಣದಂತಾಗಿಹುದು. ನಮ್ಮ ನಚ್ಚಿನ ಬಾಪು,
ನಮ್ಮ ನಾಡಿನ ತಂದೆ, ಇನ್ನಿಲ್ಲ, ಇನ್ನಿಲ್ಲ.
ಇನ್ನಿಲ್ಲವೆಂದೆನೇ, ತಪ್ಪು ತಪ್ಪಹುದದಹುದು.

ಈ ನಾಡ ಬೆಳಗಿದಾ ಬೆಳಕು ದೀಪದ ಬೆಳಕೆ?
ಅಲ್ಲ. ಈ ನಾಡನೀ ಹಲವು ವರ್ಷಗಳಿಂದ
ಬೆಳಗಿದಾ ಬೆಳಕು ಸಾವಿರಕಾಲ ಬೆಳಗುವುದು.
ಲೋಕ ಕಾಣುವುದದನು : ನೂರಾರು ಜೀವಗಳು
ಹಿಗ್ಗುವುವು ಬೆಳಕಿನಲಿ. ಆ ಬೆಳಕು ಜೀವಂತ
ಸತ್ಯದ, ಸನಾತನದ ಸತ್ಯಗಳ, ತನಿವೆಳಗು.
ನೇರನಡೆಯನು ಕಲಿಸಿ, ತಪ್ಪಿದೆಡೆಯಲಿ ತಿದ್ದಿ,
ಈ ಪುರಾತನ ಪುಣ್ಯಭೂಮಿಯನ್ನೊಯ್ದಿತ್ತು
ಸ್ವಾತಂತ್ರ್ಯದೆಡೆಗೆ. ಆ ಬೆಳಕು, ಆ ಜೀವ,
ಹುಚ್ಚನೊಬ್ಬನ ಹತಿಗೆ ಬಲಿಯಾಯ್ತಲಾ ಕಡೆಗೆ !
ಹುಚ್ಚನೇ ಸರಿಯುವನು. ಅದೊಡಂ, ನಾಡಿನಲಿ
ವಿಷವೊಂದು ಒಳಗೊಳಗೆ ಹಬ್ಬಿ ಹರಡುತಲಿಹುದು;
ಕಂಟಕಗಳೆನಿತೊ ಮುನ್ನಡೆಯ ತಡೆಹಿಡಿದಿಹುವು :
ನಮ್ಮ ಮುಂದಿನ ಕಜ್ಜ, ಇವುಗಳನ್ನೆದುರಿಸುತೆ
ನಿರ್ಮೂಲಗೈಯುವುದು : ಗೈವಂದು, ಕೆರಳದೆಯೆ
ಋಜುಮಾರ್ಗವನ್ನುಳಿದು ಅತ್ತಿತ್ತ ಹೊರಳದೆಯೆ,
ಬಲದಲ್ಲಿ ಛಲದಲ್ಲಿ ಐಕ್ಯತೆಯೊಳೆಲ್ಲರುಂ
ನಮ್ಮ ಗುರು ತೋರಿಸಿದ ರೀತಿ ನಡೆಯುವುದು.
ಬಾಳಿನ ಮಹದ್ವಿಷಯಗಳ ಪಿಡಿದು ಕ್ಷುದ್ರಗಳ
ತೊರೆವಂತೆ ಸಾರುತಿದೆ ಆತನೀ ಮರಣಂ :
ಕೇಳಿ, ಭಾರತಕೊಳ್ಳಿತೀ ಸತ್ಯ ಸ್ಮರಣಂ !"

೩

ಶ್ರೀಮತಿ ಸರೋಜಿನಿ ದೇವಿ :

ಮೊನ್ನೆ ತಾನೆ ಮಾಡಿದನುಪವಾಸ
    ಹಿಂದೂ ಮುಸ್ಲಿಮರೈಕ್ಯತೆಗೆ.
ಆಹಾ ! ಏನಿದು ಈ ಪರಿಹಾಸ?
    ಹಿಂದುವೆ ಕಾರಣ ನಮ್ಮೀ ವೆತೆಗೆ !

ಹಾಸುಹೊಕ್ಕಿನೊಲು ಅವನ ಬಾಳಿನಲಿ
ನಮ್ಮ ಕೆಲರ ಬಾಳ್ ಬೆರೆತಿಹುದು:
ಮಡಿಯಲವನು ನಾವ್ ಕೆಲರು ಮಡಿದಂತೆ,
ಕೆಲವರೊಡಲ ಕಡಿಕಡಿದಂತೆ.

'ಬಾಪು ಮಡಿದಿಹನು' ಎಂದು ನಂಬಿದೊಡೆ
ಈಗ ನಿರಾಶೆಯ ಹೊಂದಿದೊಡೆ
ಅವನೊಂದಿಗೆ ಹೋಯ್ತೆಲ್ಲವೆನುವೊಡೆ
ತೊರೆದುದೆನಿಸುವುದು ನಮ್ಮ ಪಡೆ.

ಕಣ್ಮರೆಯಾಯಿತೆ ಪಾರ್ಥಿವ ದೇಹ?
ಆತ್ಮಬಂಧುಗಳು ನಾವಿಹೆವು;
ಅವನ ಆದರ್ಶ ಸಾಧನೆ ಸಿದ್ಧಿ
ನಿಧಿಯಾಗಿಂದೆಮಗುಳಿದಿಹವು.

ಕಂಬನಿಗರೆಯುತ ಕುಳ್ಳಿರಲೇಕೆ?
ಕಾಲವಿಲ್ಲ ಶೋಕಿಸಲಿನ್ನು
ಗಾಂಧಿ ಮಹಾತ್ಮನ ಎದುರಿಸಿ ನಿಂತರ
ಕರೆಗುತ್ತರ ಕೊಡುವುದೆ ಚೆನ್ನು.

ನಾವಾತನ ಜೀವಂತ ಕುರುಹುಗಳು;
ನಾವಾತನ ಪಡೆಯಾಳುಗಳು :
ಯುದ್ಧ ಕಲುಷಿತ ಕ್ಷೋಣಿಯಲಿಂದು
ನಾವಾತನ ಧ್ವಜಧಾರಿಗಳು ;
ಸತ್ಯವೆಮ್ಮ ಮುಂಚೂಣಿಯ ಧ್ವಜವು,
ಅಹಿಂಸೆಯೇ ಎದೆಗಾಪು ಗುರಾಣಿ,
ರಕ್ತವ ಚೆಲ್ಲದೆ ವೈರಿಯ ಗೆಲ್ಲುವ
ಆತ್ಮಶಕ್ತಿ ಹೊಳೆಹೊಳೆಯುವ ಕತ್ತಿ.

ಗುರುವಿನ ಪಥವನು ಹಿಡಿಯದಿರ್ಪೆವೆ?
ಪಿತನಾಜ್ಞೆಗಳನು ನಡಸದಿರ್ಪೆವೆ?
ಆತನ ನಚ್ಚಿನ ಬಂಟರೆನಿಸುತ
ಗೆಲಲ ಗಳಿಸೆವೇ ಕಾಳೆಗ ಮುಗಿಸುತ?
ಗಾಂಧಿ ಮಹಾತ್ಮನ ಸಂದೇಶವನು
ವಿಶ್ವಪೀಠದಲಿ ಮಂಡಿಸದಿರ್ಪೆವೆ?
ಅವನ ವಾಣಿ ನುಡಿಯದೆ ನಿಲಲೇನು ?
ಕೋಟಿಕೋಟಿ ಕಂಠಸ್ಥವಾಗಿ ಚಿರ–
ಕಾಲವವನ ಸಂದೇಶವನಿಳೆಗೆ,
ಮುಂದಿನಿಳೆಗೆ, ಆ ನಾಳಿನ ನಾಳೆಗೆ,
ಸಾರದಿರುವುದೆ?
ಬೀರದಿರುವುದೆ ?

ಗಾಂಧಿ ಮಹಾತ್ಮನ ಗಳಿತ ಶರೀರವು
ಅಗ್ನಿದಗ್ಧವಾಯಿತು ನಿನ್ನೆ;
ಕ್ರಿಸ್ತನಂತೆ ಮೂರನೆ ದಿನ ಕಾಂಬ
ಜಗದ ಮೊರೆಯ ಕೇಳುತ ತಾನೆ.

ದೆಹಲಿಯ ನಗರದ ದೊರೆಗಳ ನಡುವೆ
ಅಗಿಹುದಾತನ ಕಡೆ ಸಂಸ್ಕಾರ;
ದೊರೆಗಳ ದೊರೆಯಾಗಿಹನವನಲ್ಲವೆ,
ಇಲ್ಲದಿರ್ದೊಡೇಂ ದೊರೆಯಾಕಾರ?

ಶಾಂತಿ ಪ್ರವರ್ತಕನೀ ಕಿರುಮನುಜಗೆ
ಪಡೆವಳನಿಗೆ ಸಲ್ಲುವ ಸನ್ಮಾನ
ಸಂದುದುಚಿತವಾಯ್ತೀ ಮಹವೀರನು
ಕರಹಿದ ನಾಡಿಗೆ ಕೀರ್ತಿವಿತಾನ.

ಕ್ರಾಂತಿಕಾರ; ಪರಕೀಯ ಪ್ರಭುತ್ವದ
ನೊಗದಿಂ ಬಿಡಿಸಿದ ಭಾರತವ;
ಮಾತೆಯ ಕೂರಿಸಿ, ಬಾವುಟ ಹಾರಿಸಿ,
ಎಳೆದನು ಸ್ವಾತಂತ್ರ್ಯ ರಥವ.

೪

**ರಾಘವ:**

ಪರಮಧರ್ಮವಹಿಂಸೆಯೆನ್ನುವ
ಹಿರಿಯ ತತ್ತ್ವ ನಡೆದು ತೋರಿಸಿ
ಕರುಣೆ ಶಮೆ ದಮೆ ಸತ್ಯಕಾಶ್ರಯವೆನಿಸಿ ಬಾಳ್ದೆಯಲಾ !
ಅರೆರೆ ! ಹಿಂಸೆಯ ಸಂಚು ಹೊಂಚಿನ
ಮರೆಯ ಹುತ್ತದ ಹಾವು ಹೆಡೆಯನು
ಹರಹಿ, ಕರವನು ಮುಗಿದು ನಗುತಿಹ ನಿನ್ನ ತಿಂದಿತಲಾ !

ಭಾರತ ಪಾರಾವಾರವ
ಘೋರಾಸುರ ದೈವಶಕ್ತಿಗಳ್ ಕಡೆಕಡೆಯಲ್
ನೇರದಿನುಕ್ಕಿದ ವಿಷಮಂ
ಪೀರಿ, ಜಗಕ್ಕೆರೆದೆಯಲ್ತೆ ಧರ್ಮಾಮೃತಮಂ

೮-೧-೧೯೪೮]

## ಸ್ವಾತಂತ್ರ್ಯ ಕಲ್ಪವೃಕ್ಷ

ಸತ್ಯ ಅಹಿಂಸೆಯ ಬೀಜಮಂತ್ರವನು
ಬಿತ್ತಿದನಾ ನಾಡಿನ ತಂದೆ;
ಹತ್ಯನಾದನಲ ಸ್ವಾತಂತ್ರ್ಯದ ಸಸಿ
ಬೆಳೆದುದ ತಾ ನೋಡುವ ಮುಂದೆ.

ವರ್ಷವಾಯ್ತು ಸಸಿ ನಟ್ಟಂದಿಗೆ: ಅದು
 ಚಿಗುರು ತಳೆದು ಕಂಗೊಳಿಸುತಿದೆ :
ಹರ್ಷ ಚಿಗುರಿನಲಿ, ಯಾತನೆ ಬೇರಲಿ ;
 ಬೆಳೆಯುವಂದೆ ತಳಮಳಿಸುತಿದೆ.

ನೋವು ಮಾದು ಬೇರೂರಿ ನಾಡಿನಲಿ
 ಬೆಳೆಯಲು ಸ್ವಾತಂತ್ರ್ಯದ ಸಸ್ಯ
ಸಾವು ನೋವಿಗಂಜದೆ ಅದ ಕಾಯುವ
 ಕೃಷಿಗೈಯುವ ಗೈಮೆಯವಶ್ಯ.

ಅರಿಗಳ ಕರುಬಿಗೆ ಬಲಿಯಾಗದ ತೆರ
 ಸುತ್ತಲಿರಲಿ ಸೇನೆಯ ಬೇಲಿ:
ಅರಿತು ನಮ್ಮ ಕರ್ತವ್ಯದ ಕೃಷಿಯನು
 ಮಾಡಲೆಲ್ಲ ತ್ವರೆಯಿಂದೇಳಿ.

ಜಾತಿಭೇದ ಧರ್ಮಾಂಧತೆ ಸ್ವಾರ್ಥದ
 ಮುಳ್ಳುಪೊದೆಯ ಕಡಿದಿಡಿ ಬೆಂಕೆ;
ನೀರಿ ಪ್ರೀತಿ ನಿಜ ಧರ್ಮಜ್ಞಾನವೆ
 ಬತ್ತದ ಹೊಯ್ನೀರಿನ ಹೊಯಿಕೆ

ಸುತ್ತಮುತ್ತ ಅಜ್ಞಾನ ದುರಾಶೆಯ
 ವಿಷವೃಕ್ಷದ ಹೆಗ್ಗಾಡಿಹುದು:
ಕತ್ತಿಹಿಡಿದು ಅದನೆಲ್ಲವ ಕಡಿಯಿರಿ,
 ಹೊಸಮರ ಬೆಳೆಯಲು ಹೊಲನಹದು.

ಇಂದೋ ನಾಳೆಯೊ ವರ್ಷವರ್ಷಗಳೊ
 ಶತಮಾನವೊ ಬಲ್ಲವರಾರು:
ಒಂದು ದಿನಕೆ ಫಲ ಬಿಡುವುದೆ ವೃಕ್ಷವು?
 ದುಡಿದು, ಫಲವ ನಾಳೆಗೆ ಹಾರು.

ನಮಗಿಲ್ಲದೊಡೇನುಂಬುದು ಫಲವನು
ಮಕ್ಕಳ ಮೊಮ್ಮಕ್ಕಳ ಸಂತಾನ:
ನಮಗೆ ಸಾಕು ನಿಷ್ಕಾಮ ಕರ್ಮವನು
ನೇರದಿ ನಡಸಿದ ಸುಮ್ಮಾನ.

ದೆಸೆದೆಸೆಗೂ ಶಾಖೋಪಶಾಖೆಯನು
ಹರಹಿ ನಿಲಲಿ ತರು ಚಿರಕಾಲ :
ಹಿಸೆದೀಯಲಿ ಬಯಸಿದರಿಗೆಲ್ಲರಿಗೆ
ಕಲ್ಪವೃಕ್ಷವೆನಿಸುತ್ತ ಫಲ.

೧೫-೮-೧೯೪೮]

## ಬಿಡುಗಡೆಯ ಹಬ್ಬದ ಪೂಣ್ಕೆ

ಬಿಡುಗಡೆಯ ಹಬ್ಬವನು ನಡಸುವೀ ದಿನದೆ
ಸಡಗರವದಿರಲಿ : ಪೂಣ್ಕೆಯ ಕೊಳ್ಳಿ ಮನದೆ

ಯಾರ ಬಲಿದಾನದಿಂದೀ ಭಾಗ್ಯ ನಮಗಾಯ್ತೊ
ಆ ಮಹಾತ್ಮನ ಪುಣ್ಯ ನಾಮ ನೆನೆದು
ಆತ ತೋರಿದ ಧರ್ಮಪಥದೆ ನಡೆಯುವ ಹಿರಿಯ
ಪೂಣ್ಕೆಯನು ಕೈಕೊಂಡು ನಡೆಯಿರಂತೆ.

ಧನಿಕರೇ ! ನಿಮ್ಮ ಧನ ದೇಶಸೇವೆಗೆ ದೈವ
ನಿಮ್ಮ ಬಳಿಯಿಟ್ಟಿರುವ ನ್ಯಾಸವೆಂದು
ಮನಗಂಡು ನಾಡ ಬಡತನವನ್ನು ಕಳೆವ ಹಿರಿ
ಪೂಣ್ಕೆಯನು ಕೈಕೊಂಡು ಬಿಡದೆ ನಡಸಿ.

ಬಡವರೇ ! ಬಡತನವ ಕೆಲಕಾಲ ಸಹಿಸುತ್ತ
ತನು ಮನವನರ್ಪಿಸುತ ನಾಡಿಗಾಗಿ
ಧನಕಿಂತ ಮಿಗಿಲಾದ ದೇಶಸೇವೆಯ ಮೆರೆವ
ಪೂಣ್ಕೆಯನು ತಲೆಯೊಳಾಂತದ ಪಾಲಿಸಿ.

ಅವರಿವರ ತಲೆಗಡಿಯದೊಲವನೊಂದನೆ ನೆಮ್ಮಿ
ಬಡವ ಬಲ್ಲಿದನೆಂಬ ಭೇದವಳಿಸಿ
ಸರ್ವ ಸಮತೆಯ ರಾಮರಾಜ್ಯವನು ನೆಲೆಗೊಳಿಪ
ಪೂಣ್ಕೆಯನು ಬಲ್ವಿಡಿದು ನೆರವೇರಿಸಿ.

ಬೇರೆಬೇರಾದೊಡೇನೆಮ್ಮ ನಡೆ ನುಡಿ ರೀತಿ?
ಬಗೆ ಬಗೆಯ ಹೂವ ಚೆಲು ಹಾರದಂತೆ,
ಭೇದದಲೆ ಭಾರತೀಯತೆಯ ಸೊಬಗನು ಮೆರೆವ
ಪೂಣ್ಕೆಯನು ಕೈಕೊಂಡು ತೋರಿ ಜಗಕೆ.

ಸ್ವಾತಂತ್ರ್ಯ ನೌಕೆ ತೀರವನು ಬಿಟ್ಟಿದೊ ತಾನೆ
ನಡುಗಡಲ ಕಡೆಗೆ ಸಾಗುತಲಿರುವುದು ;
ಅದೊ ನೆಮ್ಮದಿಯ ದ್ವೀಪದಲ್ಲಿ ಮೆರೆಯುತ್ತಿಹುದು
ನೌಕೆಗೆಮ್ಮಯ ನೆರವು ಬೇಕಿರುವುದು ;

ಬಿರುಗಾಳಿ ಪೆರ್ದೆರೆಗಳೆದ್ದೆದ್ದು ಮೊರೆಯುತಿವೆ,
ಶತ್ರುನೌಕೆಗಳಿವೆಯೊ ಬಲ್ಲರಾರು ?
ಬಂದೆಡರನೆದುರಿಸುತ, ಹಡಗ ಬಾವುಟ ಕಾದು,
ಗುರಿಯ ಮುಟ್ಟುವುದೆಮ್ಮ ಕರ್ತವ್ಯವು.

ಹಡಗು ನಡಸುವ ನಾಯಕಾದಿಗಳು ಬಲ್ಲಿದರು:
ನಮ್ಮೊಲವಿನೊತ್ತಾಸೆಯವರಿಗಿತ್ತು
ಬಿಡುಗಡೆಯ ಹಡಗ ಸುಸ್ಥಿತಿಯಲ್ಲಿ ಕಾಪಿಡುವ
ಪೂಣ್ಕೆಯನು ಮನದೆಕೊಂಡದ ನಡಸಿರಿ.

೧೫-೮-೧೯೪೮]

# ಸ್ವಾತಂತ್ರ್ಯಸಿದ್ಧಿ

ಬಂತು ಬಂತು ಸ್ವಾತಂತ್ರ್ಯವೆಂಬ ಸವಿ–
ಮಾತಿನ ಮಳೆಯಾಯ್ತು :
ಎಂತದನುಳಿಸುವುದೆನ್ನುವನಿತರೊಳೆ
ನಾಡೇ ಹೋಳಾಯ್ತು.

ಹೋಳಿನೊಳಗೆ ಹುಳು ನೂರು ಸೇರಿ ಕೊರೆ–
ಕೊರೆಯುತ್ತಿವೆ ನಾಡ :
ಹೋಲಿಕೆ ಚೆನ್ನೆ ? ಹೇಳದಿಹುದೆಂತು ?
ಕೊಳೆಯದಿಹುದೆ, ನೋಡ.

ಧನಿಕವೃಂದ ಧನ ಸಂಚಯ ನಿಮಗ್ನ,
ಬಡವರೊ ಭೀಕರ ನಗ್ನ :
ಸ್ವಾರ್ಥಿಗಳರ್ಥಾಕಾಂಕ್ಷಿಗಳೆತ್ತಲೊ
ಗಾಳಿಯತ್ತ ಕಡೆಗವರ ಮನ.

ಸತ್ಯ ಅಹಿಂಸೆಯು ಮಂತ್ರವಾಯ್ತು ಬರಿ
ತಂತ್ರವಾಯ್ತು ಜನಕೆ;
ನಿತ್ಯ ಜೀವನದೊಳದರ ಸುಳಿವ ಸೆಲೆ
ಸೋಕದಾಯ್ತು ಮನಕೆ.

ಅಶೋಕ ಚಕ್ರವನೊತ್ತಿತು ಜನತೆ
ಬಾವುಟ ಬಟ್ಟೆಯಲಿ ;
ವಿಶಾಲ ತತ್ತ್ವವನದ ದೂಡಿತ್ತು
ಬಾಳಿನ ಬಟ್ಟೆಯಲಿ.

ಮಂದಿರ ಮಂದಿರಗಳ ಮೇಲಾಧ್ವಜ
ಓಲಾಡುತ್ತಿದೆ ತೂಗಿ;
ಜನಮನೋಭವನಗಳ ಮೇಲಯ್ಯೋ
ಜೋಲಿದೆ ತೂತಾಗಿ !

ಮನೆಗೋಡೆಯ ಮೇಲಲಂಕರಿಸಿಹುದು
ಗಾಂಧಿ ಮಹಾತ್ಮನ ಚಿತ್ರ;
ಮನದ ಗೋಡೆ ಬರಿ ಶೂನ್ಯ ಶೂನ್ಯ, ಅಹ !
ತಂದೆಯ ಪೂಜೆ ವಿಚಿತ್ರ !

ತಲೆಯ ಮೇಲೆ ಬಿಳಿ ಖಾದಿಯ ಟೋಪಿ
ತಲೆಯೊಳಗಿನ ಮನ ಕೊಳಕು ಮಸಿ;
ತಳೆದರೇನು ಖಾದಿಯ ವಸನವನು
ಒಳಗಿರೆ ವಿಷಕೆಣೆಯಾದ ಹುಸಿ.

ಹೊಲಸು ಜೀವನವ ಮುಚ್ಚಲು ಕಾವಿಯ
ಧರಿಸಲಹನೆ ತಾ ಸಂನ್ಯಾಸಿ ?
ಹಲವು ನೀತಿಯನು ನುಡಿದು ನಡೆಯದಿರೆ
ಏತಕಹೆಯೊ ಬರಿ ಖಾದಿಯ ವೇಷಿ ?

ನೀತಿಯ ಬಿಡದಿಹ ಬಾಳಿನ ಹಾದಿ
ಲಾಂಛನವಲ್ಲದ ಪವಿತ್ರ ಖಾದಿ ;
ಕಾಯ್ದು ಬಿಡುಗಡೆಯ ನಾಡನು ಕಟ್ಟಲು
ಇದುವೇ ಅಡಿಗಟ್ಟಿಡದಾದಿ.

ಶತಚ್ಛಿದ್ರವಾಗಿಹುದು ನಾಡಿಂದು
ಬೇರೆ ಬೇರೆ ಮತ ನಂಬಿಕೆಗಳಲಿ;
ಸತತ ನಮ್ಮ ಸೇವಾ ಪೂಜೆಯೆಲ್ಲ
ಭಾರತ ಮಾತೆಗೆ ಸಲಲಿ.

ದೇಶಭಕ್ತಿ ಜಲವನ್ನು ಚಿಮುಕಿಸಲು
ಭಿನ್ನ ಭಾವ ಬಗೆ ಬಗೆ ಹೂವು;
ದ್ವೇಷಾಸೂಯೆಯ ಮದ್ದಿನೊಳರೆದರೆ
ಖಂಡಿತವೆಮಗದೆ ಸಾವು.

ಭೇದಗಳನ್ನು ಬದಿಗೊತ್ತುತ ಬದುಕಿನ
ದಾರಿಯನಿಂದೇ ಹಿಡಿದು
ಸಾಧಿಸೋಣ ಸ್ವಾತಂತ್ರ್ಯ ಸಿದ್ಧಿಯನು
ನಾಡಿಗಾಗಿ ದುಡಿದುಡಿದು.

ಸತ್ಯದ ಚರಕವ ತಿರುಗಿಸಿರಿ,
ನಿತ್ಯವಹಿಂಸೆಯ ನೂಲು ತೆಗೆಯಿರಿ,
ಶುದ್ಧ ಜೀವನದ ವಸವನ ಧರಿಸಿರಿ;
ಸಿದ್ಧಿ ಕಯ್ಯ ಫಲ : ನಂಬಿ ನಡೆಯಿರಿ.

ಮೇ ೧೯೪೧]

## ಕನ್ನಡ ತಾಯಿಗೆ ಮಣಿವ

ಕನ್ನಡ ತಾಯಿಗೆ ಮಣಿವ–ನಾವ್
ಕನ್ನಡಿಗರೆಂದು ಕುಣಿವ ॥ಪ॥

ಭಾರತೀಯ ಸ್ವಾತಂತ್ರ್ಯ ಭಾಗ್ಯದೊಳ–
ಪಾರ ಬಳುವಳಿಯ ಹೊಂದಿ ನಲಿಯುತಿಹ ॥ಅ.ಪ.॥

ಗಿರಿಪಂಕ್ತಿ ತೆವರ ಸುಂದರ ವನವೊ
ತರುರಾಜಿ ತವರ ಚೆಲು ಚಂದನವೊ
ಪರಿಮಳ ಪೊತ್ತಿಹ ಪಡುವ ಪವನವೊ
ನೆರೆ ಕಣ್ಮನಗಳಿಗಿವು ಔತಣವೊ

ಶಿಲೆಯೆಲ್ಲ ಕಲೆಯೆ ಈ ನಾಡಿನಲಿ
ಕಲೆಯೆಲ್ಲ ಚೆಲುವೆ ಹೊನ್ನಾಡಿನಲಿ
ಚೆಲುವೆ ಒಲವಿನಾ ನಡೆಯಲಿ ನುಡಿಯಲಿ
ಒಲವೆ ಮಂತ್ರವೀ ಧಮ್ಮ ಗುಡಿಯಲಿ

ಕಲೆಯ ಚೆಲುವೆ ಎದೆಯೊಲವ ನೀಡುತ
ಛಲವನುಳಿದು ಸೋದರ ಕೂಡುತ
ಬಲವ ಗಳಿಸಿ ತಾಯನು ಕಾಪಾಡುತ
ಗೆಲವು ಮಂಗಳವನಿಳೆಗೆ ಪಾಡುತ

೩೦–೧೧–೧೯೪೭]

## ಕನ್ನಡ ನಾಡೊಂದೇ

ಕನ್ನಡ ನಾಡೊಂದೇ !
ಒಂದೇ, ಒಂದೇ !
ಕನ್ನಡ ನಾಡೊಂದೇ !
ಎಂದಿನಿಂದ ಇಂದಿನವರಮಿಾ ನೆಲ,
ಹೊನ್ನುಬೆಳೆವ ನಮ್ಮೊಲುಮೆಯ ನಲ್ನೆಲ,
ಅದರೊಕ್ಕಲಾದ ಪೆರ್ಕನ್ನಡ ಕುಲ–
ಕೂಗಿರಿ, ಕೂಗಿರಿಮ ನೂರುನೂರು ಸಲ
ಹೊಳಲುಕೊಡುವವೊಲು ದಶದಿಙ್ಮಂಡಲ–
ಒಂದೇ, ಒಂದೇ–ಈ
ಕನ್ನಡ ನಾಡೊಂದೇ !

೨

ನುಡಿಯ ಗುಡಿಯೊಳಗೆ ತಾಯಿ ಕುಳ್ಳಿರಿಸಿ
ಕಾವ್ಯಕನ್ಯೆಯಿಂ ಪೂಜೆಯನೊಡರಿಸಿ
ಹೆಮ್ಮೆಯ ಕನ್ನಡ ಬಾವುಟ ಹಾರಿಸಿ
ನಾಡಿನ ಕೀರ್ತಿಯ ಡಂಗುರ ಸಾರಿಸಿ

ಕವಿಗಳು ಕಟ್ಟಿದರೀ ನಾಡ !
ಆದರೆ ನೋಡ:
ನಾಡಿನ ಪಾಡ !
ಅಂದು ಪರಕೀಯ ರಾಜಕ ತಂತ್ರ
ಸ್ವಾರ್ಥಕೆ ನಾಡನ್ನೊಡೆಯಿತ್ತು ;
ಇಂದು ಭಾರತವು ಸರ್ವಸ್ವತಂತ್ರ,
ನಾಡು ಕೂಡುವಾಸೆಯು ಮೂಡಿತ್ತು ;
ಅದೊಡಮಾವುದೊ ಕುತ್ಸಿತ ಮಂತ್ರ
ನಾಡನು ಮಾಡಿದೆ, ಅಕಟ, ಅತಂತ್ರ !
ಎಂದಿಗೆ ಕೂಡುವುದೀ ನಾಡು,
ಮೊಳಗುವುದೊಕ್ಕುಟದ ಹಾಡು ?

೩

ಸಂದೆಯ ಬಹುದಿದು ಬಲು ಸಾಜ?
ಆದೊಡಮೀ ಕರ್ನಾಟಕ ತೇಜ
ಅಡಗಿದೆ ನಾಡಿನ ಹುಡಿಯಲ್ಲಿ,
ಕವಿಗಳ ಸಿಡಿಲಿನ ನುಡಿಯಲ್ಲಿ !
ಎಚ್ಚತ್ತಿದೆ ಕವಿ ಕೋಕಿಲ ವಾಣಿ :
ಕೆರಳಿದರೆ ಕಾಳಿಂಗ ಫಣಿ !
ಕನ್ನಡತನದೊಳ್ನಿಧಿಗದೆ ಕಾವಲು ;
ಅವನಿಗೆದೆಯದನತ್ತ ಸೋವಲು ;
ಹಾಡುತ ನಾಡಿನ ಬಯಕೆಯ ಹಾಡ
ಕವಿಗಳು ಕಟ್ಟುವರೀ ನಾಡ–
ನುಡಿಯೊಲ್ಮೆಯ ನಲ್ಬೆಸುಗೆಯಲಿ,
ಕೂಡಿಸಿ ನಾಡನು ಒಸಗೆಯಲಿ.

೪

ಇರಲಿ ಇರಲಿ ಭೂಪಟಗಳ ಗೆರೆಬರೆ,
ರಾಜಕೀಯ ಡೊಂಬರ ಆಟದ ಕೆರೆ–

ಬೇಡ ಬೇಡ ನಮಗಾಗೊಡವೆ,
ಕನ್ನಡತನವೇ ನಮ್ಮೊಡವೆ !
ಓ, ನಾಡವರೇ !
ಓ, ನುಡಿಯವರೇ !
ನಮ್ಮೆಲ್ಲರ ಹೃತ್ಪಟದಲ್ಲಿ
ಹೇರಾಸೆಯ ದಿಕ್ತಟದಲ್ಲಿ–
"ಕನ್ನಡ ನಾಡೊಂದೇ,
ಕನ್ನಡ ನುಡಿಯೊಂದೇ,
ಒಂದೆ, ಒಂದೇ"–
ಎಂಬೀ ಮಂತ್ರವು ಅಚ್ಚೊತ್ತಿರಲು,
ಅಳಿಸಲಾಗದಿಹ ನಚ್ಚೊತ್ತಿರಲು,
ಕೂಡಿರುವುದಲ್ತೆ ನಮ್ಮೀ ನಾಡು,
ಕ್ಷುಲ್ಲಕ ವಿಘ್ನಗಳಾವುವೆ ಬರಲು?
ಕೃತಕ ಸೀಮೆಗಳ ಮೆಟ್ಟುವುದು
ಭೇದ ಭಾವವನು ಕುಟ್ಟುವುದು
ಒಡೆದಿಹ ನಾಡನು ಕಟ್ಟುವುದು
ನಮ್ಮೀ ಕನ್ನಡತನವು,
ನಾವೊಂದೆನ್ನುವ ಮನವು

೫

ಯಾರೇನಾದರುಮರಿಯದೆ ಒದರಲಿ,
ಭೇದ ಭಾವಗಳ ನಾಡೊಳು ಕೆದರಲಿ;
ಕನ್ನಡ ಜನ ನೀವ್ಮರೆಯದಿರಿ,
ಮರೆಯದಿರಿ, ಮರೆಯದಿರಿ–
ಕನ್ನಡ ನಾಡೊಂದೇ !
ಒಂದೇ, ಒಂದೇ !
ಕನ್ನಡ ನಾಡೊಂದೇ !

# ಹೊಸ ಯುಗ

೧

ಹೊಸ ಯುಗ ಹೊಸ ಯುಗ ಹೊಸ ಯುಗವೊ !
ಇಂದಿನಿಂದೆಮ್ಮ ಹೊಸ ಯುಗವೊ,
ಭಾರತವರ್ಷಕೆ ಹೊಸ ಯುಗವೊ !

ಶುಭ ಮಾಘದೆ ಉತ್ತರ ದಿಶೆ ಸಾರಿ
ಉತ್ತರೋತ್ತರವ ಗತಿಯಲಿ ತೋರಿ
ನಾಡಿಗೆಲ್ಲ ನವ ತೇಜವ ಬೀರಿ
ಸ್ವಾತಂತ್ರ್ಯಸೂರ್ಯ ಮೆರೆಯುತ್ತಿಹನು,
ಹೊಸ ಯುಗವನು ತೆರೆಯುತ್ತಿಹನು,
ಹೊಸ ಸುಗ್ಗಿಯ ಕರೆಯುತ್ತಿಹನು.

೨

ಅಹುದಿದು ಹೊಸ ಯುಗ ಹೊಸ ಯುಗ ಹೊಸ ಯುಗ,
ಮರೆಯ ಬೇಡ : ಇದೆ ಹೆಗಲಮೇಲೆ ನೊಗ :
ದಾಸ್ಯದ ಕಬ್ಬಿಣ ಮೊಗವನು ಕೊಡಹುತ
ನಾವೆ ಹೊತ್ತ ನಮ್ಮೊಲುಮೆ ನೊಗ :
ಹೊಸ ಹೊಸ ಹೊಣೆಗಳ ಹೊನ್ನ ನೊಗ.
ನೊಗವ ಹೊತ್ತು ಮೇಲೆತ್ತು ಮೊಗ.
ನೋಡುತ ಹರಸಲಿ ಸಕಲ ಜಗ.

೩

ಎಲ್ಲಿಯ ಹೊಸಯುಗ, ಎಂದಿಗೆ ಹೊಸಯುಗ,
    ಯಾರಿಗೆ ಹೊಸ ಯುಗವೊ ?
ಧನಿಕವೃಂದ ಸ್ವಾರ್ಥವ ಮೆರೆಯುತ್ತಿರೆ,
ಹೊಟ್ಟೆಗಾಗಿ ಜನ ಹಾತೊರೆಯುತ್ತಿರೆ,
ಬೆಳೆಯುವ ನಾಡಲಿ ಬರಗಾಲವಿರೆ,

ಭೋಗಭೂಮಿ ರೋಗದ ಮನೆಯಾಗಿರೆ,
ಅಜ್ಞಾನದ ಕಾರ್ಗತ್ತಲೆ ಕವಿದಿರೆ,
ನರರ ಕೋಟಿ ಕುರಿಮಂದೆಯಾಗಿರೆ ;
ಸ್ವಾತಂತ್ರ್ಯಸೂರ್ಯ ಮರುಭೂಮಿಯಲಿ
ಮೂಡಿ ತೊಳತೊಳಗೆ ವ್ಯರ್ಥದಲಿ–
ಬಂದುದೆ ಹೊಸ ಯುಗ, ನಿಲುವುದೆ ಹೊಸ ಯುಗ,
    ಯಾರಿಗೆ ಹೊಸ ಯುಗವೊ ?

೪

ನಿನ್ನ ಕೈಯೊಳಗೆ ನಿನ್ನ ಮೆಯ್ಯೊಳಗೆ
    ನಿನ್ನ ಕೆಚ್ಚಿನಲಿ ;
ನಿನ್ನ ದುಡಿಮೆಯಲಿ ನಿನ್ನ ಗೈಮೆಯಲಿ
    ನಿನ್ನ ನೆಚ್ಚಿನಲ್ಲಿ;
ನಿನ್ನ ಛಲದಲ್ಲಿ ನಿನ್ನ ಬಲದಲ್ಲಿ
    ನಿನ್ನ ನಿಷ್ಠೆಯಲ್ಲಿ;
ನಿನ್ನ ದೃಷ್ಟಿಯಲಿ ನಿನ್ನ ಸೃಷ್ಟಿಯಲಿ,
    ಪ್ರೇಮದೃಷ್ಟಿಯಲ್ಲಿ;
ನಾಡಿಗಾಗಿಯೇ ಬಾಳ ಮುಡಿಪಿಡುವ
    ಸರ್ವತ್ಯಾಗದಲ್ಲಿ–
ನೆಲಸಿಹುದೀ ಮುಂಬರುತಿಹ ಹೊಸ ಯುಗ,
ನವಭಾರತದ ಹೊನ್ನಿನ ಹೊಸಯುಗ:
ಹೊರಿಸಿ ನಿನ್ನ ಮೇಲೊಲವ ಹೊಣೆಯ ನೊಗ,
ಇಂದು ಮೂಡಿದಾ ನಾಳಿನ ಹೊಸ ಯುಗ,
    ನಿನಗಾಗಿಯೆ ಕಾದಿಹುದು,
    ನೀ ಸಾಧಿಸೆ ಕಾದಿಹುದು.

೬-೧-೧೯೫೦]

## ಬಾರ ಬಾರ ಭಾಗ್ಯವತಾರ

ಬಾರ ಬಾರ ಭಾಗ್ಯವತಾರ ನವಭಾರತ ಕೃತಿಕಾರ,
ತಾರ ತಾರ ನಾಡಿನ ನಾಡಿಗೆ ನವಚೇತನ ಸಂಚಾರ !
ಪ್ರಣದ ಗಂತಿಗಳ ಕೊಯ್ದು
ನವ ಪ್ರಾಣಧಾರೆ ಹೊಯ್ದು
ನವ ಜೀವತಂತು ನೆಯ್ದು
ರೋಗ ಹಿಡಿದ ಈ ರಾಷ್ಟ್ರಪುರುಷನಿಗೆ
ಭೈಷಜವನು ಮಾಡ,
ಹೊಸ ಬಾಳನು ನೀಡ.

ನೀನು ನಿಜದೆ ತ್ರಿಗುಣಾತ್ಮಕನಯ್ಯ–ಮೆರೆಯಲಿ
ತವ ಮಹಿಮೆ !
ರಕ್ಷಣ ಶಿಕ್ಷಣ ದಕ್ಷನೆನಿಸೊ ನೀ–ಬೆಳೆಯಲಿ ನಾಡೊಳುಮೆ:
ಸ್ವಾರ್ಥಸಾಧಕರ ತರಿದು
ಭೇದಭಾವಗಳ ಮುರಿದು
ದೀನದರಿದ್ರರ ಪೊರೆದು
ನೂತ್ನ ರಾಷ್ಟ್ರ ನಿರ್ಮಾಣಕಾರ್ಯಕ್ಕೆ
ನಿನ್ನ ಹರಕೆ ನೀಡು,
ಸರ್ವಶುಭವ ಮಾಡು,

೭–೧–೧೯೫೦]

## ನವಭಾರತ ಪ್ರಥಮ ಪುಣ್ಯದಿನ

(೨೬–೧–೧೯೫೦)

ನವಭಾರತ ಪ್ರಥಮ ಪುಣ್ಯದಿನಮೀದಿನಂ:
ಧರ್ಮದಿಂ ಸಾಧಿಸಿ ಸ್ವಾತಂತ್ರ್ಯ ಸಂಪದಂ
ಧರ್ಮವರ್ಧನಕಕ್ಕೆ ನಿತ್ಯ ಮಹಾದಾಸ್ಪದಂ,
ಭುವಿಯ ಮಂಗಳಕ್ಕೆ ಸುಪವಿತ್ರ ಸಾಧನಂ :

ನವನಾಗರಿಕತೆಯಿಂದ ಗಳಿಪ ಧನಮೇ ಧನಂ?
    ಸ್ವಾತಂತ್ರ್ಯ ಭಾಗ್ಯ ನೆಲಸೆ ಅಹಿಂಸೆ ಸತ್ಯದಿಂ
    ನಿತ್ಯನಿಧಿಯದು, ತವದು ಹೆರರ ದುಷ್ಕೃತ್ಯದಿಂ ;
ಶಿವನೊಲಿವ ಮಾರ್ಗಮಿದು: ನಾಡಹುದು ನಂದನಂ.
ದೈವಗತಿಯಿಂ ಧರ್ಮಚಕ್ರಪ್ರವರ್ತನಂ
    ಬುದ್ಧನುದಿಸಿದ ನಾಡಿನಿಂದಹ ಸುಯೋಗಮದು
    ಲಬ್ಧಮಾಗಿಹುದೆಮಗೆ, ನಮ್ಮ ಹಿರಿ ಹರಿಬಮದು;
ಸವನಿಸಲು ಧರ್ಮಸಾಮ್ರಾಜ್ಯ ಸಂಸ್ಥಾಪನಂ
    ಪೊಡವಿಯಲಿ, ಇಂದೆಮ್ಮ ಶುದ್ಧಸಂಕಲ್ಪನಂ
    ತೊಡಗವೇಳ್ಕುಂ: ಆದರೆ ಇದೆ ದಿನಂ ಶುಭದಿನಂ.

## ಗಾಂಧಿ ಯುಗಾದಿ

ಮತ್ತೆ ಬಾಳ್ಮಸೆಯುತಿಹರಿನ್ನೊಂದು ಸಮರಕ್ಕೆ :
    ಸಮರಗಳ ಪಂಕ್ತಿಯೊಳು ಶಾಂತಿಯಲ್ಪವಿರಾಮ–
    ವೆನುವಂತೆ ಕಾಣುತಿದೆ; ಸ್ವಾರ್ಥಸಾಧನೆ ಪರಮ
ಫಲವೆನಿಸಿ, ಯುದ್ಧವೇ ಮಾರ್ಗವಾಗಿಹುದದಕೆ.
ಮುಂದೆ ಕಾದಿಹುದೇನೊ ಆ ಭವಿಷ್ಯವ ಬೆದಕೆ
    ಫಲವೇನು ? ತಿಳಿಯುವುದೆ ? ನಮಗುಂಟೆ ಮುಂಗಾಣ್ಕೆ?
    ರಾಷ್ಟ್ರಗಳಿಗಿಂದು ರಣವೇ ಬಾಳಿನೊರ್ಪುಗಣ್ಕೆ-
ಯಾಗಿರಲು, ಎಂತು ಸಲ್ಲುವುದೆಮ್ಮ ಮನ ಮುದಕೆ?
ಹಿಂದೆ ಮಾನವ ಕೋಟಿ ಗೈದ ಕರ್ಮದ ಫಲವೆ
    ಮುನ್ನೂಕಿ ತಳ್ಳುತಿದೆ, ಯುದ್ಧಪ್ರಪಾತಕ್ಕೆ:
    ಸಲ್ಲುತಿದೆ, ಫಲಿಸುತಿದೆ, ನಮ್ಮ ಕರ್ಮವಿಪಾಕ ;
ಈ ಕರ್ಮ ಸವೆಯಿಸಲು ಜನದಿಚ್ಛೆ, ಪೇರೊಲವೆ,
    ಬೆಳೆಯಲೆಂದಾಶಿಸುವ, ನಾವ್ಮಣಿನ ದೈವಕ್ಕೆ
    ತೊಡಗಿ ಗಾಂಧಿಯುಗಾದಿ, ಇಳೆಯಕ್ಕೆ ಮಹನಾಕ.

ಏಪ್ರಿಲ್ ೧೯೪೮]

# ಜಯ ಜಯ ಗಾಂಧಿ ಮಹಾತ್ಮ

ಜಯ ಜಯ ಜಯ ಜಯ ಗಾಂಧಿ ಮಹಾತ್ಮ
ಜಯ ಜಯ ಪೂತಾತ್ಮ ॥ಪ॥

ಜಯ ಜಯ ಜಯ ಜಯ ಲೋಕಹಿತಾತ್ಮ
ಜಯ ಜಯ ದಿವ್ಯಾತ್ಮ ॥ಅ.ಪ.॥

ಜಯತು ಜಯತು ಜಯ ಭಾರತಪುತ್ರ
ಜಯ ಜಯ ರಾಷ್ಟ್ರಪಿತ
ಜಯತು ಜಯತು ಜಯ ವಿಗತಾಮಿತ್ರ
ಜಯ ಜಯ ಸತ್ಯವ್ರತ.

ಜಯ ಜಯ ಜಯ ಜಯ ಪರಾರ್ಥಚರಿತ
ಜಯತು ಸರ್ವತ್ಯಾಗಿ
ಜಯ ಜಯ ಜಯ ಜಯ ಕರುಣಾಭರಿತ
ಜಯತು ಕರ್ಮಯೋಗಿ

ಜಯ ಜಯ ಭಾರತ ಸ್ವಾತಂತ್ರ್ಯದಾತ
ಜಯತು ಅಹಿಂಸಾವೀರ
ಜಯ ಜಯ ವಿಶ್ವಪ್ರೇಮಸ್ರೋತ
ಜಯತು ಧರ್ಮಾವತಾರ.

ಜಯ ಜಯ ರಾಮಪ್ರೇಮಾರಾಮ
ಜಯ ಜಯ ಜಿತಕಾಮ
ಜಯತು ಲೋಕಕಲ್ಯಾಣ ವಿರಾಮ
ಜಯ ಧೃತ ಸದ್ಗುಣದಾಮ

ಜಯತು ಜಯತು ಸತ್ಯಾರ್ಥಪ್ರಕಾಶ
ಜಯ ಜಯ ಮಂಗಳಧಾಮ
ಜಯ ಭಾರತ ಜನನೀಮುಕುಟಭೂಷ
ಜಯ ಜಯ ಗಾಂಧಿ ಮಹಾತ್ಮ

೬-೧೦-೧೯೪೮]

# ಬಿನ್ನಹ

ಈ ಹಿಂದೆ ನಾನು ರಚಿಸಿದ ರಾಷ್ಟ್ರೀಯ ಭಾವನೆಯ ಕವಿತೆಗಳನ್ನು 'ಅಶೋಕ ಚಕ್ರ' ಮತ್ತು 'ರಾಷ್ಟ್ರರಥ' ಎಂಬೆರಡು ಸಂಕಲನಗಳಲ್ಲಿ ಪ್ರಕಟಿಸಿದ್ದೇನೆ. ಇದು ಅದೇ ಬಗೆಯ ಸಾಂದರ್ಭ ಪದ್ಯ ಜಾತಿಗೆ (Occasional Verse) ಸೇರಿದ ಇನ್ನೊಂದು ದೀರ್ಘ ಕವಿತೆ.

ಇದನ್ನು 'ಗೀತ'ವೆಂದು ಬರೆಯಲಾಗಿದೆ: ರಾಷ್ಟ್ರ ದಿನೋತ್ಸವದಂದು ಸಭೆಗಳಲ್ಲಿ ಸುಶ್ರಾವ್ಯವಾಗಿ ವಾಚನದಿಂದ ರಚಿಸಿದ್ದು. ಈ ಉದ್ದೇಶ ಸ್ವಲ್ಪಮಟ್ಟಿಗಾದರೂ ನೆರವೇರಿದರೆ ನಾನು ಧನ್ಯ. ಅಲ್ಲಿ ಇಲ್ಲಿ ಕವಿತೆಯ ಸವಿಕಟ್ಟೂ ಸಹೃದಯರಿಗೆ ಕಂಡುಬಂದರೆ ನನಗೆ ಹೆಚ್ಚಿನ ಸಂತುಷ್ಟಿ.

ಇದನ್ನು ಮೊದಲು 'ಕನ್ನಡ ನುಡಿ'ಯಲ್ಲಿ ಅಚ್ಚುಮಾಡಿ ಉಪಕರಿಸಿದ್ದಲ್ಲದೆ ಪುನರ್ಮುದ್ರಣಾವಕಾಶವನ್ನೂ ಕಲ್ಪಿಸಿಕೊಟ್ಟ ಅದರ ಮಾನ್ಯ ಸಂಪಾದಕರಿಗೂ, ಸಹ ಸಂಪಾದಕರಾದ ಆಸ್ಥಾನ ವಿದ್ವಾನ್ ಶ್ರೀ ಮೋ. ಶಂ. ಸುಬ್ರಹ್ಮಣ್ಯಶಾಸ್ತ್ರಿಗಳಿಗೂ, ಪ್ರಕಾಶನಲ್ಲಿ ನೆರವಾದ ಶ್ರೀ ಬಿ. ರಾಮಚಂದ್ರ ಅವರಿಗೂ ನಾನು ಕೃತಜ್ಞನಾಗಿದ್ದೇನೆ.

೨೬–೧–೧೯೫೪ ರಾಘವ

# ರಾಷ್ಟ್ರದಿನೋತ್ಸವ ಗೀತ

೧

ಓ ಭಾರತಿ ಬ್ರಹ್ಮನ ಮಾರಾಣಿ
ಬಹುಭಾಷಾತ್ಮಕ ವೀಣಾಪಾಣಿ
ಭಾವ ಮಯೂರ ಮನೋಹರ ವಾಹನೆ
ಸಾರಸ್ವತ ಸರಸಿಜ ದಿವ್ಯಾಸನೆ
ಸುಜ್ಞಾನಾಮೃತ ಸುವರ್ಷಕಾರಿಣಿ
ಕವಿಜನ ಚಿತ್ತ ಚಕೋರ ಚಂದ್ರಿಕೆ
ವಿಮಲ ಬ್ರಹ್ಮಾನಂದದಾಯಿಕೆ !
ಮೊದಲು ನಿನ್ನ ನಾ ನುತಿಪೆನು ತಾಯೆ,
ತೊದಲುನುಡಿಕ ಕಂದನ ನೀ ಕಾಯೆ;
ಹಾಡತೊಡಗಿದೀ ನಾಡಿನ ಗೀತಂ
ಅಕ್ಕೆ ನಿನ್ನ ದಯೆಯಿಂ ವಿಖ್ಯಾತಂ,
ನಾಡೊಲುಮೆಯ ಜನಮನದೊಳು ತುಂಬಿ
ನಿನ್ನಡಿದಾವರೆ ಕಳುಹಿದ ದುಂಬಿ.

ಸರಸ್ವತೀ ಭಗವತಿ ವಾಗ್ದೇವಿ
ನುಡಿಭಕ್ತರ ಪೊರೆಯೌ ನೀನೋವಿ

೨

ಈ ದಿನಂ ನವ್ಯ ಭಾರತ ರೂಪುಗೊಂಡ ಸುದಿನಂ;
ಸ್ವಾತಂತ್ರ್ಯ ನಿಘೋಷ ಮೊದಲು ಮೊಳಗಿದ ದಿನಂ;
ರಾಷ್ಟ್ರರಥಮಂ ಕಟ್ಟಿ ಮೊದಲೆಳೆದ ಶುಭದಿನಂ;
ಭಾರತಾಂಬೆಯ ಭಕ್ತಿಯಿಂ ನೆನೆವ ಪರ್ವದಿನಂ;
ಜನತಾ ಜನಾರ್ದನನ ಪೂಜಿಪ ಪವಿತ್ರ ದಿನಂ;

ಏಷ್ಯದೊಳ್ ನವಶಕ್ತಿ ಮೂಡಿದ ಮಹಾದಿನಂ;
ದೌಷ್ಟ್ಯಬಾಧಿತ ಧರ್ಮಚಕ್ರ ಪ್ರವರ್ತನಂ
ಮತ್ತುರುಳತೊಡಗಿದ ಚರಿತ್ರಾರ್ಹ ಶಿವದಿನಂ;
ನೂತನ ಪುರಾತನ ಸಮನ್ವಿತ ಸನಾತನಂ
ಹಳತರಿಂ ಹೊಸತಕ್ಕೆ ಕರೆವ ಸಂಕ್ರಾಂತಿ ದಿನಂ;
ತಾಯ್ಗೆ ಮಕ್ಕಳು ಮೀಸಲಿಟ್ಟು ತನುಮನಧನಂ
ನಿತ್ಯಸೇವಾದೀಕ್ಷೆ ಕೊಳುವ ಪೂಣ್ಕೆಯ ದಿನಂ;
ಶ್ರೀಗಾಂಧಿ ಕಂಡ ಹೊಂಗನಸ ನಸಿನ ದಿನಂ;
ಲೋಕಕಲ್ಯಾಣ ಸಾಧನ ಪೀಠಿಕಾದಿನಂ;
ಅಚಂದ್ರತಾರಂಬರಂ ಭಾರತದ ಜನಂ
ನೆರೆದಿಂತೆ ನೆನೆಯುತಿರ್ಕೀ ರಾಷ್ಟ್ರಘಟನಾ ದಿನಂ!

೩

ಮೇಲೆ ಹಿಮಗಿರಿಮಾಲೆ, ಸುತ್ತ ಕಡಲಿನ ವೇಲೆ,
ಪರ್ವತಾರಣ್ಯಗಳ ಸಾಲುಸಾಲೆ;
ಹಾಲು ಜೇನನು ಹರಿಸಿ, ತನ್ನ ಮಕ್ಕಳ ಹರಸಿ,
ಹಿಗ್ಗುತ್ತಿದ್ದಳು ಭರತಮಾತೆ ಲೋಕದಲೆ.

ಮಾತೆಗಾಗಿಯೆ ದುಡಿದ ಮಾತೆಗಾಗಿಯೆ ಮಡಿದ
ಸುತರ ಸುಪವಿತ್ರ ಸಂಸ್ಕರಣೆಯಿಂದು
ಸೇತುವೆಯು, ಸಂಪುಷ್ಟಿಗೊಳಿಸಲೆಮ್ಮಯ ಬಾಳ
ಅವರ ಲೋಕದ ನಿಧಿಯ ನಾವು ತಂದು.

ಹಿಮಪರ್ವತೋತ್ತುಂಗ ದಿವ್ಯದರ್ಶನವಡೆದ
ಋಷಿವರೇಣ್ಯರ ಹಡೆದಳೆಮ್ಮ ಮಾತೆ;
ವಿಮಲ ಗಂಗಾಸ್ರೋತ ಸುಜ್ಞಾನ ವಾಹಿನಿಯ
ಮಿಂದು ಮಡಿಯುಟ್ಟವಳು ನಿತ್ಯಪೂಜೆ

ರಾಮಾಯಣವ ರಚಿಸಿ ಭಾರತದ ಕಥೆಯೊರೆದು
ವಾಲ್ಮೀಕಿ ವ್ಯಾಸ ಕವಿಋಷಿವರ್ಯರು
ಶ್ರೀಮಂತ ಕಾವ್ಯರಚನಾ ರುಚಿರ ಮಾರ್ಗಕ್ಕೆ
ಶ್ರೀಕಾರವಿಟ್ಟಮರ ಕಾವ್ಯಕಲ್ಪತರು.

ಭಾರತದ ಕಣ್ಣೆರಡು ಈ ಮಹಾಕಾವ್ಯಗಳು
ಜೀವನೋತ್ಕರ್ಷ ಸಾಧನ ಮಾರ್ಗಸೂಚಿ
ಸಾರಭೂತಂಗಳಿವು ಭಾರತದ ಸಂಸ್ಕೃತಿಯ,
ಸಂಸಾರಸಾಗರೋತ್ತರಣ ದಿಕ್ಸೂಚಿ.

ಭಾಸ ಶೂದ್ರಕ ಕಾಳಿದಾಸ ಭವಭೂತಿಗಳ್
ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶ
ದಾಸಕೂಟದ ಬಳಗ ಶಿವಶರಣ ಸಂದೋಹ
ಈ ಕವಿಗಳಿಂದಲ್ತೆ ಪೂಜ್ಯ ದೇಶ.

ಸರ್ವೇಶ್ವರನು ಸರ್ವಭೂತಸ್ಥನಾಗಿರಲು
ಸರ್ವರೂ ಸಮವೆಂಬ ದಿವ್ಯಭಾವ,
ಸರ್ವ ಜಾಗವೆ ಸರ್ವಭೋಗಕಡಿಗಲ್ಲೆಂಬ
ಸರ್ವಸಮತಾ ತತ್ತ್ವಕೆನಿಸೆ ಜೀವ

ಸರ್ವ ಜನರೂ ಸುಖಿಗಳಾಗಿ ಬಾಳಲಿಯೆಂಬ
ಹಾರೈಕೆ ಹೊಮ್ಮಿತೀ ನಾಡಿನಲ್ಲಿ;
ಊರ್ವರೆಗೆ ಮಂಗಳವ ಕೋರುವಾ ಪಲ್ಲವಿಯೆ
ಭರತಮಾತೆಯ ಪೇಳ್ದ ಹಾಡಿನಲ್ಲಿ

ಉತ್ತರಾಪಥದಿಂದ ದಕ್ಷಿಣಕ್ಕೈದಂತು
ರಾಮನೊಂದಾಗಿಸಿದ ನಮ್ಮ ನಾಡು
ಮತ್ತೆಮತ್ತೊಡೆದರೂ ಕೂಡಿಕೊಳುವುದು ಮರಳಿ
ಅವನ ಕೃಪೆಯಿಂದಿಲ್ಲವಳಿವ ಕೇಡು.

ಕುರಿಯ ನರನಂಗೈದು ನರನ ನಾರಾಯಣನ
ಗೈವ ಸಂದೇಶಸುಧೆಗರೆವ ಗೀತೆ
ಸ್ಫುರಿಸಿ ಕೃಷ್ಣನ ಕೊಳಲ ಗಾನ ಮೋಹನವಾಗೆ
ಕೇಳಿ ಕಲಿಸಿದಳದನು ನಮಗೆ ಮಾತೆ.

ಕ್ಲೀಬತನವನು ಕಳೆದು ನರರ ಹುರಿದುಂಬಿಸಲು
ಎಂದೆಂದಿಗೂ ಗೀತೆ ಪಾಂಚಜನ್ಯ;
ಹಿಂಸೆಗತ್ತಲೆ ಕವಿದ ಜಗದಿ ಶಾಂತಿಯ ಬೆಳಕ
ನರಸುವವರಿಗೆ ಗೀತೆಯೇ ಶರಣ್ಯ.

ಕ್ಷಾತ್ರವನು ಸದೆಯೆ ಭೃಗುರಾಮ ಕೊಡಲಿಯ ಪಿಡಿದ,
ರಕ್ಕಸರಿಗಾಗಿ ರಘುರಾಮ ಶರಧಾರಿ;
ದುಷ್ಕೃತರ ನಾಶಕ್ಕೆ ಧರ್ಮಸಂಸ್ಥಾಪನೆಗೆ
ಚಕ್ರವೆತ್ತಿದನೆನಿತೊ ಸಲ ಮುರಾರಿ.

ಹಿಂಸೆಯಿಂ ಪ್ರತಿಹಿಂಸೆ, ಮತ್ತದೇ ಹಲದಾರಿ–
ಕೊನೆಗೊಳ್ಳದೆಂದಿಗೂ ವಿಷಮಚಕ್ರ;
ಸಂಸಾರದೀ ಹಿಂಸೆ ದುಃಖಗಳ ಕೊನೆಗೊಳಿಸೆ
ಬುದ್ಧ ಪ್ರವರ್ತಿಸಿದ ಧರ್ಮಚಕ್ರ

ಕಾಳೆಗದ ಕಗ್ಗೊಲೆಗೆ ಹೇಸುತಲಶೋಕ ದೊರೆ
ಧರ್ಮಚಕ್ರವ ಪಿಡಿಯುತುರುಳ ಬಿಡಲು
ದಾಳಿಯಿಟ್ಟುದು ಧರ್ಮ ದೇಶದೇಶಗಳಲ್ಲಿ
ತಂಪಾಯ್ತು ಕಡೆಗೊಮ್ಮೆ ಪೃಥ್ವಿಯೊಡಲು.

ಹಲವು ಮತಧರ್ಮಗಳ ಬೀಡೆನಿಸಿ ಭಾರತವು
ಹೊಲಬುಗೆಡೆ ಜನರು ಧರ್ಮಾರಣ್ಯದೆ
ಹಲವು ನದಿ ಕಡೆಗೊಂದೆ ಕಡಲ ಕಡೆಗೆಂಬುದನು
ತೋರಿದಾತನು ಪರಮಹಂಸ ಗುರುವೆ.

ಪರಮಹಂಸರ ದಿವ್ಯ ಸಂದೇಶಸುಧೆಯನು
ವಿಶ್ವಕೆರೆದನು ವಿವೇಕಾನಂದನು ;
ದರಿದ್ರನಾರಾಯಣನ ಸೇವೆ ದೇಶದ ಸೇವೆ-
ಯೆನುತ ದೇಶಪ್ರೇಮ ಗುರುವಾದನು.

ಕಾಲಕಾಲಕ್ಕೆ ಇಂತು ಧರ್ಮ ಮುಖ ತಿರುಗುತ್ತ
ಬೇರೆಬೇರೆಯ ತೆರನೆ ಕಾಣುತಿರಲು
ಕಾಲಧರ್ಮದ ಬಸಿರ ಶಿಶುವಾಗಿ ಜನಿಸುತ್ತ
ಗಾಂಧಿ ತೋರಿದ ಧರ್ಮ ಹಳತೆ ಹೊಸತು.

ಗಾಂಧಿ ನೂತನಯುಗದ ಧರ್ಮಾವತಾರನೈ,
ಭರತಮಾತೆಯ ಸೆರೆಯ ಬಿಡಿಸಿದಾತ ;
ಧರ್ಮಪೀಠದ ಮೇಲೆ ಸ್ವಾತಂತ್ರ್ಯ ಸೌಧವನು
ಕಟ್ಟಿ ಧರ್ಮಕೆ ಕೊರಳನಿತ್ತ ಪೂತ.

೪

ಶ್ರೀ ರಾಮನಿಂ ತೊಡಗಿದಾದರ್ಶ ರಾಜ್ಯವದು
ಇಂದೆಮ್ಮ ಆದರ್ಶಮಾಗಿಹುದು : ಬಾಪೂಜಿ
ಕಂಡ ಕನಸದು, ನಾಳೆ ನನಸಾಗಬೇಕೆನುತೆ:
"ಆ ರಾಮರಾಜ್ಯದಲಿ ವಿಧವೆಯರ ಗೋಳಿಲ್ಲ;
ಪ್ರೇತಕರ್ಮಂ ವೃದ್ಧರಿಂದಿಲ್ಲ ಮಕ್ಕಳ್ಗೆ ;
ವ್ಯಾಲಕೃತ ಭಯವಿಲ್ಲ, ಇಲ್ಲ ರೋಗದ ಭಯಂ;
ತೊರೆದೆಲ್ಲರುಂ ಪರಸ್ಪರ ಹಿಂಸೆಯಂ, ಧರ್ಮ-
ಪರರಾಗಿ ಬಾಳಿದರು ನೂರುಸಾವಿರ ಕಾಲ,
ಹಡೆದು ಸಾವಿರ ಮಕ್ಕಳಂ; ರಾಮನಾಮಾಭಿ-
ರಾಮಮಾಯ್ತಾ ನಾಡು, ರಾಮಭೂತಂ ಲೋಕ.
ದೆಸೆದೆಸೆಗೆ ರೆಂಬೆಗಳ ಚಾಚಿ ತರುವೃಂದಗಳು
ನಿತ್ಯಫಲಪುಷ್ಪಭರಿತಂಗಳೆನಿಸಿರ್ದಪವು.
ಕಾಲದೊಳು ಪರ್ಜನ್ಯ ವರ್ಷಿಸುತೆ, ಮಾರುತನು

ತಂಪಾಗಿ ಸೋಂಕುತ್ತೆ, ಪ್ರಕೃತಿಪ್ರಜಾರಾಜ್ಯ
ಸರ್ವಮುಂ ಋತಬದ್ಧಮಾಗಿ ಅನೃತದ ಸುಳಿವೆ
ಕಾಣಿಸದೆ, ವರ್ಣವ್ಯವಸ್ಥೆಯೊಳು ಶ್ರದ್ಧೆಯಂ
ತೋರುತ್ತೆ, ತಮ್ಮ ಕರ್ಮದೆ ತಾವು ತೊಡಗಿರುತೆ,
ಧರ್ಮರತ ಲೋಭವರ್ಜಿತ ಪ್ರಜೆಗಳೆಲ್ಲರುಂ."
ಸರ್ವರುಂ ಸಮಸೌಖ್ಯದೊಳು ಬಾಳ್ವ ರಾಜ್ಯಮೇ
ರಾಮರಾಜ್ಯಂ ಎಂದು ನುಡಿದಿಹರು ಬಾಪೂಜಿ:
ಪ್ರಜೆಗಳದೆ ರಾಜತ್ವಮೀರಾಜ್ಯದೊಳು ; ನೆಲಕೆ
ಸಗ್ಗಮಂ ತಹುದೆ ಪರಮಾದರ್ಶ ರಾಜ್ಯಕ್ಕೆ.
ಜಾತಿ ಮತ ಲಿಂಗಭೇದಂಗಳಿರವೀ ಪ್ರಜಾ
ರಾಜ್ಯದೊಳು ; ಧನಿಕ ನಿರ್ಗತಿಕನೆಂಬೀ ಕೃತಕ
ವರ್ಗಭೇದಂ ನಶಿಸಿ ವೈಷಮ್ಯವಡಗುವುದು;
ಧನಿಕನವನಿರ್ದೊಡಂ ಧನವಿಲ್ಲದನ ಹಿತಕೆ;
ಸುಲಭಮದು ನ್ಯಾಯಮೆಲ್ಲರ್ಗೆ ನಿಶ್ಚಿತಮಾಗಿ;
ತನ್ನ ದೇವರ ತಾನು ಪೂಜಿಸಲ್ಕನುವುಂಟು;
ತನ್ನ ನುಡಿ ನುಡಿಯಲ್ಕೆ ಅಂಕೆಯಂಜಿಕೆಯಿರದು;
ಯಂತ್ರದ ಗುಲಾಮರಾಗಿಹ ನಾವು ಯಂತ್ರಮಂ
ಆಳ್ದಪೆವು ನಗರಜೀವನಮಂ ಸರಳಗೊಳಿಸಿ;
ಹಳ್ಳಿಗಳೆ ಭಾರತದ ಕಾಳಕಣಜಗಳೆನಿಸಿ
ದುಡಿಯುವುದು ದಿಳ್ಳಿ ಹಳ್ಳಿಯ ಮೇಲ್ಮೆಯಂ ಬಗೆದು.
ಉಳುವವನೆ ನೆಲದೊಡೆಯನವನಿಗದು ಸಲ್ಲುವುದು
ಇದುವೆ ಭೂಸ್ವರ್ಗಮಿದೆ ರಾಮರಾಜ್ಯದ ಸಿದ್ಧಿ.
ಇದಕೆ ಸತ್ಯ ಅಹಿಂಸೆಗಳೆ ಸಾಧನೋಪಾಯಂ,
ಇದೆ ನಾನು ಕಂಡ ಕನಸಿನ ಭವ್ಯ ಭಾರತಂ."

೫

ಭಾರತದ ಮನೆಯಲ್ಲಿ ಭಾರತ
    ರೆಲ್ಲರೊಂದೇ ಮನೆತನ;

ಯಾರೆ ಮನೆಯನ್ನೊಡೆಯ ಬಂದರು
ಕೋಟಿಯಾಗಲಿ ಒಮ್ಮನ.

ಒರೆಯೊಳಿದೆ ಹೊಳೆಹೊಳೆವ ಖಡ್ಗವು,
ಯಾರನೂ ನಾವ್ ಕೊಲ್ಲೆವು;
ಕರೆದು ಯುದ್ಧಕೆ ಕೆಣಕಿ ನಿಂತರೆ
ಹೇಡಿಯೆನಿಸುತ ನಿಲ್ಲೆವು.

ನೂರು ಭೇದಗಳಿರಲಿ ಹೊರಗಡೆ,
ಒಂದೆ ಕರುಳಿನ ಮಕ್ಕಳು;
ಹಾರದಲಿ ಹೂ ಹಲವು ಬಗೆ, ದಿಟ;
ದಾರವೊಂದೇ ಕಟ್ಟಲು.

ಭಾಷೆ ಮತ ಪ್ರಾಂತಾಭಿಮಾನವು
ಅಡ್ಡಿಯೆನಿಸದು ದೇಶಕೆ;
ಸಾಸಿರದೆ ರತ್ನಗಳ ತುಂಬಲಿ,
ನಮ್ಮ ಸಂಸ್ಕೃತಿ ಕೋಶಕೆ.

ನಮ್ಮ ಸಂಸ್ಕೃತಿಯಡಿಯ ಕಟ್ಟಡ
ನೂತ್ನ ಜೀವನ ಭವನಕೆ;
ಬಿಮ್ಮನದ ಮತಿಗೆಟ್ಟು ಮುರಿದರೆ
ನಷ್ಟವಲ್ಲವೆ ಭುವನಕೆ?

ಅತ್ತ ರಷ್ಯಾ ಇತ್ತ ಅಮೆರಿಕ
ಉತ್ತೆ ನೂತನ ಚೀಣವು;
ಮಿತ್ತುವವರೆಳೆಬಲೆಗೆ ಬಿದ್ದರೆ,
ಬಿಡುಗಡೆಗೆ ವಿಷಬಾಣವು.

ಹಿಂಸೆಯಿಂ ಸಮತೆಯನು ಸಾಧಿಪ
ಆತ್ಮನಾಶಕ ವೃತ್ತಿಗೆ
ಭ್ರಂಶಗೊಳ್ಳುತ ಒಲಿದೆವಾದರೆ
ಕೊಲೆಗೆ ದೇಶವು ಗುತ್ತಿಗೆ

ಪ್ರೇಮದಿಂದಲೆ ರಾಮರಾಜ್ಯವ
ಪಡೆವ ಕಲೆಯನು ಕಲಿತಿರೆ
ಪಾಮರ ಪ್ರಭುತನಕೆ ಪಟ್ಟವ
ಕಟ್ಟುವಾ ಕೊಲೆಯೇತಕೆ ?

ಕವಿಯ ವಾಣಿಯು ನುಡಿವುದೆಚ್ಚರ:
ಬಡವರೊಡಲನು ಹೊರೆಯದೆ,
ಶಿವನೆ ಭೈರವನಾಗಿ ಬರುವನು
ಕ್ರಾಂತಿರೂಪದಿ, ಕರೆಯದೆ.

ಖಚಿತಗೊಳ್ಳಲಿ ನಮ್ಮ ನಿರ್ಧರ–
ವಿಂದು ದೀನದರಿದ್ರರ
ಉಚಿತಮಾರ್ಗದಿ ಪೊರೆಯುತೆತ್ತುವ
ಗೈಮೆಗದೆ ಬಿಡುಗಡೆ ವರ..

೬

ಇಂದು ರಾಷ್ಟ್ರರಥೋತ್ಸವ
ಬನ್ನಿ ರಥವನೆಳೆಯುವ :
ಹಿಂದು ಸಿಕ್ಕ ಮುಸ್ಲಿಮರು
ಒಂದುಗೂಡುತೆಲ್ಲರೂ
ಸಾಲುಗೊಳ್ಳುತೊಕ್ಕಟ್ಟಿನ
ಹಗ್ಗ ಹಿಡಿದು ಹೊಸ ಹುಟ್ಟಿನ
ಭಾರತ ರಥವೆಳೆಯುವ,
ದೂರದೂರಕೆಳೆಯುವ

ಏನು ನಮ್ಮ ರಥದ ಚೆಲುವು,
ಏನು ನಮ್ಮ ರಥದ ಗೆಲುವು !
ವೇದ ಉಪನಿಷತ್ತು ಕಾವ್ಯ
ಸಕಲ ಕಲಾ ಸಾರಸತ್ತ್ವ
ಸಮೆದ ದಿವ್ಯ ರಥವಿದು,
ಪುರಾಣಪೂತ ರಥವಿದು.
ರಾಷ್ಟ್ರಶಿಲ್ಪಚತುರರ ಮನ
ರಥಕೆರೆದಿದೆ ಹೊಸಹೊಸತನ.
ಕಂಗೊಳಿಸಿದೆ ದಿವ್ಯರಥ,
ನೂತ್ನಭಾವ ರತ್ನಖಚಿತ,
ಸ್ವತಂತ್ರತಾ ಸತ್ಯ ಗಾಲಿ,
ಇದಕಹಿಂಸೆ ಸತ್ಯ ಗಾಲಿ,
ಧರ್ಮಪಥದೆ ಸಾಗಲಿ
ಅತ್ತ ಇತ್ತ ಹೊರಳದ ಪರಿ
ಹಾಕುವ ಸಂಯಮದ ಬಿರಿ.
ಇಂತು ರಥವ ನಡೆಯಲು
ಯಾರಿಗೆ ಎದೆ ತಡೆಯಲು?
    ನಿಲದೆ ನಡೆಯಲೀ ರಥ,
        ನವ್ಯ ಭಾರತ

ಭರತಮಾತೆ ಅಭಿಜಾತೆ
    ನವೋಲ್ಲಾಸ ಸುಸ್ಮಿತೆ
ನೂತ್ನರಚಿತ ರಥಮಂಡಿತೆ
    ಸಕಲ ಸಂಪೂಜಿತೆ.
ಭಾರತ ಹೃತ್ಕಮಲಾಸನೆ
ಸಸ್ಯಹರಿದ್ವರ್ಣವಸನೆ
ಹಿಮತುಷಾರ ಮಕುಟ ಭೂಷೆ
ವಿವಿಧ ವಿನುತ ಮಧುರ ಭಾಷೆ
ಶಾಂತಿಭರಿತೆ ಅಭಯದಾತೆ

ವರದಹಸ್ತ ಶೋಭಿತೆ,
ಜಯ ಜಯ ಭಾರತ ಮಾತೆ
ಜಯ ಜಯ ಭಾರತ ಮಾತೆ
ಜಯ ಭಾರತ ಮಾತೆ !

ಶ್ರೀಶನ ಕರುಣಾ ಕಿರಣ
ಪ್ರಾಶನದಿಂದಲರ್ದು ಮೆರೆವ ಬಿಡುಗಡೆಯರಲೀ
ಭೂಸರ್ವಕ್ಕಂ ಸುಖಸಂ
ತೋಷದ ಸೌರಭವ ಪಸರಿಸುತ್ತಿರ್ಕನಿಶಂ ॥

ನವಭಾರತಮಿದು ವರ್ಧಿಕೆ
ನವಶಕ್ತಿಯೆನಿಸುತೆ ನೂತ್ನ ವಿಜ್ಞಾನಕಲಾ
ಸುವಿಮಲ ಫಲ ಸಂಪನ್ನಂ
ಬುವಿಗೆಲ್ಲಂ ಶಾಂತಿವೃಷ್ಟಿ ಕರೆಯುತೆ ನಿತ್ಯಂ.

ತಾಯೊಲವು ನುಡಿಸೆ ತಾಯ್ನುಡಿಯೊಳೀ ಗೀತಮಂ
ಅಣುಗ ರಾಘವ ನುಡಿಯುತೊಲವಿನಿಂದ
ತಾಯ್ಗರ್ಪಿಸಿಹನು : ಏನಿರ್ದೊಡಂ ಇದರೊಳ್ಪು
ತಾಯೊಲವ ತಾವರೆಯ ಸೂಸು ಮಕರಂದ.

# ಬಿನ್ನಹ

ಈಚಿನ ಎಂಟು ಹತ್ತು ವರ್ಷಗಳಲ್ಲಿ ನಾನು ರಚಿಸಿದ ಕವನಗಳಲ್ಲಿ ಬಹ್ವಂಶವನ್ನು ಇಲ್ಲಿ ಸೇರಿಸಲಾಗಿದೆ.

ಈ ಸಂಕಲನವನ್ನು ಸಮರ್ಪಣೆ ಮಾಡಲು ದಯವಿಟ್ಟು ಅನುಜ್ಞೆಯಿತ್ತ ಕವಿವರ್ಯ ಶ್ರೀ ಕುವೆಂಪು ಅವರಿಗೆ ನಾನು ಚಿರಋಣಿ.

ಆಯ್ಕೆಯ ಕಾರ್ಯದಲ್ಲಿ ತಮ್ಮ ಸದಭಿರುಚಿಯ ಬೆಳಕು ಚೆಲ್ಲಿ ನೆರವಿತ್ತ ಮಾನ್ಯ ಮಿತ್ರರು ಶ್ರೀ ಜಿ. ವೆಂಕಟಸುಬ್ಬಯ್ಯ, ಎಂ.ಎ.,ಬಿ.ಟಿ. ಅವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲಬೇಕಾಗಿವೆ.

ಇಲ್ಲಿನ ಹಲಕೆಲವು ಕವನಗಳು ಪ್ರಬುದ್ಧ ಕರ್ಣಾಟಕ, ಜೀವನ, ಪ್ರಜಾವಾಣಿ, ಕನ್ನಡ ನುಡಿ, ಮಲೆನಾಡು, ಮುಂತಾದ ನಾಡಿನ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಆಯಾ ಪತ್ರಿಕಾಸಂಪಾದಕರುಗಳಿಗೆ ವಂದನೆಗಳು. ಕೆಲವು ಕವನಗಳು ಬೆಂಗಳೂರಿನ ಆಕಾಶವಾಣಿಯ ಮೂಲಕ ಪ್ರಸಾರವಾಗಿವೆ; ಆ ಉಪಕಾರಕ್ಕಾಗಿ ಆಕಾಶವಾಣಿಯ ಅಧಿಕಾರಿಗಳಿಗೂ ವಂದನೆಗಳು.

ಗ್ರಂಥವನ್ನು ಬಹು ಬೇಗ ಅಂದವಾಗಿ ಅಚ್ಚುಮಾಡಿಕೊಟ್ಟ ಪ್ರಭಾ ಮುದ್ರಣಾಲಯದ ಒಡೆಯರು ಶ್ರೀ ಡಿ.ಎಸ್. ಕೃಷ್ಣಾಚಾರ್, ಎಂ.ಎಸ್.ಸಿ. ಅವರ ಉಪಕಾರ ಸ್ಮರಣೀಯ.

ಸಂಕಲನದ ಹೆಸರಿನ ಬಗೆಗೆ ಒಂದು ಮಾತು: 'ಮುಗಿಯದ ಮಾಯೆ' ಎಂಬ ಕವನ ಅದಕ್ಕೆ ಪ್ರೇರಕ ಎಂಬುದು ಸ್ವಯಂಸ್ಪಷ್ಟ. ಕಾವ್ಯರಚನೆ, ಕಾವ್ಯ ರಸಾಸ್ವಾದನ–ಇವೆರಡೂ ಒಂದು 'ಮುಗಿಯದ ಮಯೆ.' ನಾನು ಈ ಮಾಯೆಗೆ ಸಿಲುಕಿ ಬಹು ವರ್ಷಗಳಾದುವು; ನನ್ನ ಪಾಲಿಗಂತೂ ಅದು ಇನ್ನೂ ಮುಗಿದಿಲ್ಲ.

ಸಹೃದಯರಾದ ವಾಚಕರು ಈ 'ಮುಗಿಯದ ಮಾಯೆ'ಯಿಂದ ಸ್ವಲ್ಪಮಟ್ಟಿಗಾದರೂ ಆಕರ್ಷಿತರಾಗಿ, ಒಂದೆರಡು ಕ್ಷಣಗಳಾದರೂ ಆ ಮಾಯಾಲೋಕದಲ್ಲಿ ವಿಹರಿಸುವಂತಾದರೆ ನಾನು ಧನ್ಯ.

೧–೮–೧೯೫೮ ರಾಘವ

# ಗುರುಪರಂಪರೆಗೆ

ಮೊದಲು ನಮಿಪೆನು ನನ್ನ ತಾಯ್‌ತಂದೆಗಳಿಗೆ–
ನನಗೆ ಜನ್ಮವನಿತ್ತ ಪ್ರತ್ಯಕ್ಷ ದೇವರಿಗೆ:
ಯಾರು ತೊಡೆತೊಟ್ಟಿಲಲಿ ಹಾಲನೂಡಿಸುವಂದು
ಕನ್ನಡದ ನುಡಿಸಕ್ಕರೆಯ ಬೆರಸಿ ಬೆಳಸಿದರೊ;
ಯಾರು ತೊಡೆತಾವರೆಯ ಮೇಲೆ ಕುಳ್ಳಿರಿಸಿಕೊಂ–
ಡಕ್ಕರೆಯಿನಕ್ಕರವ ಕಲಿಸಿ ಬ್ರಹ್ಮಜ್ಞಾನ–
ದುಪದೇಶವಿತ್ತರೋ–ಆ ಪ್ರಥಮ ಗುರುಗಳಿಗೆ
ಅಭಿನಮಿಸುವೆನು ಪರಮಭಕ್ತಿಯಿಂದ.
ಆ ಬಳಿಕ,
ವಿವಿಧ ಶಾಲಾ ಮಹಾಪಾಠಶಾಲೆಗಳಲ್ಲಿ
ವಿದ್ಯೆಯನು ಕರುಣಿಸಿದ ಗುರುಪರಂಪರೆಗೆ ನಿಜ
ಭಕ್ತಿಯಲಿ ಬಾಗುವೆನು: ನೆನಪು ಕರುವಿಟ್ಟಿಹುದು
ಕೆಲರ ಮೂರ್ತಿಗಳನ್ನು ನಿತ್ಯದಾರಾಧನೆಗೆ:
ಇತಿಹಾಸದಾಚಾರ್ಯರೆನಿಸಿ ಕನ್ನಡಕೂಲಿದು,
ಕೆಳೆಗೊಂಡು, ನಾಟಕಕಲೆಯ ಒಲವ ಕೊನರಿಸಿದ
ಗುರುವೊಬ್ಬ; ಕನ್ನಡಕಲಿಕೆಗೆ ಮನಸೆಳೆದು, ಕವಿ–
ಕಾವ್ಯಸೇವಾನುರಾಗವ ಬೆಳಸಿ, ಕಲಿಸಿ ಹೊ
ಕಾವ್ಯಪದ್ಧತಿಯ, ಬಾಳಿನ ಗುರಿಯ ಕಾಣಿಸಿದ
ಗುರುವೊಬ್ಬ; ಕಾವ್ಯರಸರುಚಿಸೂಕ್ಷ್ಮಭೇದಗಳ
ಬೋಧಿಸುತ, ನೀರ ತಾವರೆ ತೆರನ ನಿರ್ಲಿಪ್ತ
ಜೀವನವ ನಡಸುತ್ತ, 'ನಿಮ್ಮೆತ್ತರಕೆ ನಾನು
ಬರಲಾರೆ ಕುಬ್ಜನೆನೆ ನಾನೆ ಬಾಗುವೆ ಹಿಡಿ'
ಎನುತ ಫಲಿತ ಕದಳಿಯ ತೆರದೆ ಕೈನಿಲುಕಿಸುತ
ನೀಡಿ ವಿದ್ಯಾಫಲವ, ಜೀವನದ ಕಾವ್ಯಕ್ಕೆ
ಮುನ್ನುಡಿಯ ಬರೆದ ಸಾಹಿತ್ಯಗುರುವಿನ್ನೊಬ್ಬ;

ಕನ್ನಡದ ನುಡಿವಳಿಯ ಸುಳಿಯ ತೋರಿದನೊಬ್ಬ;
ಆಂಗ್ಲವಾಙ್ಮಯ ರತ್ನಕೋಶ ತೋರಿದನೊಬ್ಬ;
ಹಿಡಿಸಿ ಕನ್ನಡ ಹುಚ್ಚು, ಕೈಗಿತ್ತು ಕನ್ನಡದ
ಬಾವುಟವ, 'ನಡೆ ಕನ್ನಡದ ಚೈತ್ರಯಾತ್ರೆಗಿದೊ
ಪಡೆ ಮುಂದೆ ಸಾಗುತಿದೆ, ಜೊತೆಗಡಿಯನಿಡುತ ನಡೆ,
ಪಡೆ ಗೆಲವ' ಎಂದ ಕನ್ನಡದೊವಜನಿನ್ನೊಬ್ಬ;
ಕನ್ನಡದ ಕೃಷಿಯಿಂತು ಎಂದು ತೋರಿದ ಕರ್ಮ-
ಯೋಗಿಗುರುವಿನ್ನೊಬ್ಬ; ನಡತೆಯಲಿ ನಿಷ್ಠೆಯನು
ಕಾರ್ಯಪ್ರತಿಷ್ಠೆಯನು ನಡೆದು ತೋರಿದನೊಬ್ಬ;
ಶಿಲ್ಪಿಯಂತುಳಿಪೆಟ್ಟ ಕೊಟ್ಟು ಬುದ್ಧಿಯ ತಿರಿಚು
ಮುರಿಚುಗಳ ನುಣ್ಣಿಸಿದ ರೂವಾರಿ-ಗುರುವೊಬ್ಬ;
ಬಾರಿ ಬಾರಿಗೆ ನಮಿಪೆನೀ ಗುರುಪರಂಪರೆಗೆ.

ಲೋಕವಿನ್ನೊಂದು ಶಿಕ್ಷಣಶಾಲೆ ನನಗಾಗೆ,
ಅದರಲ್ಲಿ ಹಕ್ಕಿ ಹೂ ಹೂಳೆ ಬೆಟ್ಟ ಬಾನ್ ಬಯಲು
ಮುಗಿಲು ಸಿರಿಹೊತ್ತಗೆಯ ತೆರೆದು ಕಲಿಸಿಹವೆನಗೆ
ನೂರಾರು ಪಾಠ ನೆಲೆ ಬೆಲೆ ನೀತಿ ನಯಗಳನು,
ಸನ್ನೆ ಸಾವಿರ ತೋರಿ: ಸತ್ಯ ಸೌಂದರ್ಯಗಳ
ಗುರುವಿಗಾ ಪ್ರಕೃತಿದೇವಿಗೆ ಜಗನ್ಮಾತೆಗಿದೊ

**ನಮಸ್ಕಾರ.**

ನವಭಾರತದ ಕವಿಪ್ರವರ
ಪದ್ಮಭೂಷಣ
ಶ್ರೀ
**ಕುವೆಂಪು**
ಅವರಿಗೆ
ಪ್ರೇಮ ಗೌರವಪೂರ್ವಕ ಸಮರ್ಪಿಸಿದೆ

## ಪಚ್ಚೆಯ ಲಿಂಗ

ತಿರೆಯಂಗೈಯಲಿ ಪಚ್ಚೆಯ ಲಿಂಗ,
ಕರೆಯಲು ಮಳೆಯಭಿಷೇಕ;
ಇದುವರೆಗದು ಬರಿ ಗಿರಿಯುತ್ತುಂಗ,
ಇಂದದಕೆ ದಿವ್ಯಯೋಗ.

ನೋಡದೆಓ ಬಾನ್-ಬಿಳಿಕಣಿಗಿಲೆ-ಹೂಸರ
ಲಿಂಗಶಿರಕಲಂಕಾರ!
ಸಂಜೆಯ ಕೆಂಜಡೆ ರಂಜಿಸುತ್ತಿರೆ
ಆಹ! ತಾನದೇ ಚಂದ್ರಶೇಖರ!

ನೋಡನೋಡುತಿರೆ ಈ ಪಚ್ಚೆಲಿಂಗ
ಕಣ್ಗೆ ಮನೋಹರ-ಮೃಣ್ಮಯ;
ಭಾವಿಸಿ ಬಗೆಯೊಳು ತುಂಬಿಕೊಳಲದೇ
ಒಳಗನು ಬೆಳಗುವ-ಚಿನ್ಮಯ.

೧೮-೧೦-೧೯೫೬]

## ನಾನೆ ದೊರೆ ಇಳೆಗೆ

ನೋಡುತಿರಲು ರವಿ ಮುಳುಗೆ ಎಲ್ಲ ಭುವಿ
ಕತ್ತಲಾಳದಲಿ ಮುಳುಗೆ;
ಹಾಡುತಿರಲು ಮನ ಒಳಗೆ ತಾನನನ
ಮನದ ಮಂದಿರವೆ ಬೆಳಗೆ;
ಬಾನ ಕತ್ತಲೆಯ ಬೆಳೆಗೆ ಚಿತ್ತರದ
ರನ್ನ ಹೂಗಳಹ ತೊಳಗೆ !

ಮಾನವನಿಗೆ ಶಿವನಿಂಥ ಭಾಗ್ಯವಿವ–
ನೆಲ್ಲ ತುಂಬಿರುವನಿಳೆಗೆ.
ಇವಕೆ ಮಿಗಿಲು ಸಿರಿಯುಂಟೆ?–ಎಂದು ಅರಿ–
ತಿರುವೆ : ನಾನೆ ದೊರೆ ಇಳೆಗೆ !

೨೬–೯–೧೯೪೬]

[ಬರೆಯಲಿದ್ದ 'ಚಮ್ಮಾರ–ದೊರೆ' ಎಂಬ ನಾಟಕದಲ್ಲಿ ಬರುವ ಒಂದು ಹಾಡು]

## ವಿಪರ್ಯಾಸ

ಏಳೇಳು ! ಗೆಳೆಯ, ಪುಸ್ತಕವ ಬಿಟ್ಟೇಳಯ್ಯ !
ಇಲ್ಲದಿರೆ ಮರುಳಪ್ಪೆ, ಇದು ಖಂಡಿತ ;
ಏಳೇಳು ! ಗೆಳೆಯ, ಮುಖದಲಿ ಗೆಲವು ತೋರಯ್ಯ,
ಏತಕೀ ಶ್ಲೋಕ, ಈ ಎಲ್ಲ ದುಡಿತ ?

ಬೆಟ್ಟನೆತ್ತಿಯ ಸಾರಿ, ಹರಡುತಿಹನದೊ ಸೂರ್ಯ
ಪಸರಿಸಿಹ ಹಸುರು ಹೊಲಗಳ ಮೇಲೆ ಸುತ್ತ
ತನ್ನ ಬೈಗಿನ ಮೊದಲ ಹಳದಿ ಬಣ್ಣದ ಸೊಬಗ,
ಹೊಸತುಗೈವಂಥ ತನಿಹೊಗರನೆತ್ತ.

ಪುಸ್ತಕವೊ ! ಬೇಸರದ ಮುಗಿಯದಿಹ ಹೆಣಗಾಟ ;
ಕೇಳು ಬಳಿ, ಉಲಿಯುತಿದೆ ಹಾಡುಹಕ್ಕಿ;
ಬಾ ಹೊರಗೆ, ಹೊರಗಣಿಳೆ ಚೆಲ್ಲುತಿಹ ಬೆಳಕಿಗೆ ;
ಪ್ರಕೃತಿಯಾಗಲಿ ನಿನಗೆ ಕಲಿಸುವ ಗುರು.

ಆರೋಗ್ಯದುಸಿರಾಗಿ ಚೆಲುಮೆಚಿಮ್ಮುವ ಜ್ಞಾನ,
ಹರ್ಷಭಾವದಿನೊಗೆದ ಪರಮ ಸತ್ಯ:
ಸಿದ್ಧನಿಧಿ ಭಂಡಾರವಿದ ತಾನು ಪಡೆದಿಹಳು
ನಮ್ಮ ಎದೆಮನಕಿತ್ತು ಹರಸೆ ನಿತ್ಯ.

ವಸಂತವನ ಹೊಮ್ಮಿಸುವ ದಿವ್ಯ ಪ್ರೇಮಣೆಯೊಂದು
ಮೀರಿ ಮುನಿಗಳ ಜ್ಞಾನಬೋಧೆಯನ್ನು
ಕಲಿಸುವುದು: ಮಾನವನ ಪರಿಯಿಂತು, ಒಳ್ಳಿತಿದು
ಕೆಡುಕಿದೆನ್ನುವ ನೀತಿಮಾರ್ಗವನ್ನು

ಪ್ರಕೃತಿ ಕಲಿಸುವ ವಿದ್ಯೆ, ಇನಿದಯ್ಯ, ಬಹು ಇನಿದು;
ನಮ್ಮ ಬೆದಕುವ ಬುದ್ಧಿ ಸಕಲ ವಸ್ತುಗಳ
ಸುಂದರಾಕೃತಿಯನ್ನು ರೂಪಗೆಡಿಸುವುದಲ್ತೆ–
ಸಿಕ್ಕಿದುದ ಸೀಳುವೆವು ಕೊಲೆಗೈಯಲು

ಸಾಕಯ್ಯ ಸಾಕು ವಿಜ್ಞಾನ ಕಲೆಗಳ ಬವಣೆ,
ಬರಡು ಹಾಳೆಗಳನ್ನು ಬೇಗ ಮುಚ್ಚು;
ಹೊರಗೆ ಬಾ, ಕಣ್ಣೆಟ್ಟು ನೋಡಿ ಕಂಡುದ ಕೊಂಡು
ತುಂಬಿಕೊಳೆ ತಂದು ನಿನ್ನೆದೆಯ ಬಿಚ್ಚು.

(William Wordsworth ಕವಿಯ Tables Turned ಎಂಬ ಕವನದ ಅನುವಾದ)

## ಪರ್ವತದ ಹೊಳಲು

ಆಹುದು, ಅದು ಪರ್ವತದ ಹೊಳಲು:
ಒಂಟಿ, ನಿಚ್ಚಳ, ನಿರ್ಭರ;
ಕುಹೂ ಕೋಗಿಲೆಗಿತ್ತ ಪಡಿನುಡಿ,
ಕೊಡುತ ಇಂಚರಕಿಂಚರ.

ಗಳಹುತಿಹ ಸಂಚಾರಿಗಿತ್ತ
ಕೋರದಿಹ ಮಾರುತ್ತರ;
ಎಲೆಲೆ! ಎಂದಿನ ಕೂಗಿನಂತೆಯೆ–
ಆದಡೋ ಬೇರೆಯ ತೆರ!

ಮರ್ತ್ಯಜೀವಕೆ ಕೇಳದೆ?– ನಾವ್
ಕೇಳೆವೇ ಮತಿಹೀನರು?
ಮೌಢ್ಯ ಕಲಹ ಪ್ರೇಮದಾಸರು,
ಬೇರೆಯಿಬ್ಬಗೆ ದನಿಗಳ?

ಎಮಗುಮಿಲ್ಲದೆ?– ಉಂಟು ಪಡಿನುಡಿ–
ಎತ್ತಣದೊ ನಾವರಿಯೆವು.
ಸಾವಿನಾಚೆಯಿನೊಗೆದ ಹೊಳಲು,
ಕುರುಹುವಿಡಿದಾ ಚಿತ್‌ಪ್ರಭೆ!

ದೂರದಿಂದೇನನೋ ಕೇಳ್ವುದು
ಅಂಥ ಹೊಳಲನು ಒಳಗಿವಿ;
ಚಿಂತಿಸಾಲಿಸಿ, ಕಾಣು ನಿಧಿಯೊಲು;
ಏಕೆನಲು ದೇವನದದು.

೨೪–೮–೧೯೪೪]

(Yes, it was the Mountain Echo ಎಂಬ ಚರಣದಿಂದ ಮೊದಲಾಗುವ, ವರ್ಡ್ಸ್‌ವರ್ತ್ ಕವಿಯ ಕವನದ ಅನುವಾದ)

## ಸೊಕ್ಕಿಗೆ ಮದ್ದು

ಅಹಾ! ಹಕ್ಕಿ! ನಿನ್ನ ನುಡಿತ
ಚಿಂತೆಯ ಪರಿಹರಿಸಿತು;
ಬಹುಕಾಲದ ಹಿಂದಿನ ಸೊಗ
ನೆನಪ ಮರಳಿ ಬರಿಸಿತು.

ನನ್ನ ಕೋಣೆ ಕಿಟಕಿ ಬಳಿಯ
ಸುಂದರ ಮಂದಾರತರು
ನಿನ್ನ ವಿಹಾರಕ್ಕೆ ರಾಜ್ಯ:
ನಲವಿನುಲಿಗೆ ನಲ್ತವರು

ಜಗದ ಡೊಂಕ ತಿದ್ದುವ ಹಿರಿ
ಗೈಮೆ ಕಿರಿಯ ಹಕ್ಕಿಗೆ
ಏಕೆ ಎನುವ ನಿನ್ನ ಹಾಡು
ಮದ್ದು ನನ್ನ ಸೊಕ್ಕಿಗೆ!

೨೧-೨-೧೯೪೮]

## ಯಮಳ ತಾರೆ

ಕಾರ್ತೀಕ ಮಾಸದ ನಿರಭದಾಕಾಶದಲಿ
ಹೊತ್ತು ಮುಳುಗಿದ ಮೇಲೆ
ಕೆಂಪು ಮಾಸಿದ ವೇಳೆ
ಮಬ್ಬು ನಸುಬೆಳಕಿನಲ್ಲಿ–
ಮೊಗವ ಮೇಲ್ಮಾಡಿ
ಕಂಡೆ ತಾರೆಗಳ ಜೋಡಿ.
ಸುತ್ತಲೆಲ್ಲಿಯುಮಿಲ್ಲ ಬೇರೊಂದು ತಾರೆ;
ನಭದ ನಗೆಗಣ್ಣಿವೆರಡೀ ಯಮಳ ತಾರೆ.

ಅಹ! ಬಾನ ನೀರೆ,
ಕವಿಯ ಕಣ್ಗಪ್ಸರೆ;
ಅಭ್ರಾಭಿಸಾರಿಕೆ!–
ಉಡುವ ಮೊದಲಾ ತನ್ನ ನಕ್ಷತ್ರ ನೆಯ್ದ ಸೀರೆ
ನಾಡದೆಯೆ ನಿಂತಿಹಳು ತನ್ನ ನಗ್ನತೆ ತೋರೆ
ಅದೊ ಮೂಡು ತೋಡಿಬರುತಿರುವ ಚಂದಿರಗೆ,
ತನ್ನೊಲವ ಮಂದಿರಗೆ,
ತನ್ನ ನಗೆಗಣ್ಣೆರಡು ತುಂಬೊಲವ ಬೀರೆ–
ಎನೆ ಮೊರೆವುದಾ ಯಮಳ ತಾರೆ.

೧೩-೧೧-೧೯೪೯]

## ಮುಟ್ಟಿದರೆ ಮುನಿ

ಇದೊ ಮುಟ್ಟಿದರೆ ಮುನಿ!
ಹುದುಗಿಕೊಳುವುದು ತನ್ನೊಳಗೆ ಅಡಗಿ ಉಡುಗಿ
ನಿನ್ನ ಕಿರುಬೆರಳ ಕೊರ್ಮೆಯ ಸೋಂಕಿಗೂ!
ಮುನಿಯೆ ಮುದುಡುವುದುಂಟೆ?
ಇಲ್ಲ, ಇಲ್ಲ–
ಸಸ್ಯ ಸಾಸಿರಕಿವಳೆ ಸೊಗಸುನಾಣಿನ ಹುಡಿಗಿ:
ತನ್ನ ಪಾಡಿಗೆ ತಾನು ಗಂಭೀರೆ, ನೀರೆ;
ಗಾಳಿದಾಳಿಯನಣೆದು ನೇರ್‌ನಿಂತ ಧೀರೆ;
ಆದರೂ ಸುಕುಮಾರೆ–
ಬರಿ ಬೆರಳ್ ಬಳಿಸಾರೆ
ತರತರನೆ ನಡುಗುವಳು
ಸರಸರನೆ ಉಡುಗುವಳು
ಮಗ್ಗುವಳು ಕುಗ್ಗುವಳು
ತುಸ ಹೊತ್ತು: ಮತ್ತೆ ಹಿಗ್ಗುವಳು
ಗಾಳಿ ಕೆಳೆಯಲ್ಲಿ.

ಮೇಣಿವಳು ಪುಷ್ಪವತಿ–
ಏನಿವಳ ಭೀತಿ?
ಏನಿವಳ ನೀತಿ?
ಜಗದೀಶ ಚಂದ್ರ ಬೋಸರ ಬೃಹದ್‌ವಿಜ್ಞಾನಮತಿ
ಬಲ್ಲುದೇನಿವಳ ನಡತೆಯ ನೀತಿ?
ಇವಳಿರವಿನೊಳ ಗತಿ?
(ನಾನಂಥು ಕಾಣೆ–
ಕವಿಗನಿತು ಜಾಣೆ?)
ನೀ ಮುಟ್ಟೆ–
ಮುನಿಸಿನಿಂ ಮುನಿಯುವಳೊ?
ಲಜ್ಜೆಯಿಂ ಮುರಿಯುವಳೊ?

ಅಹಹ! ಇದು–
ವಿಜ್ಞಾನಿಗೂ ಗುಟ್ಟೆ!

೧೯೫೬]

## ರೋಡ್ ಮಲ್ಲಿಗೆ

೧

ನಮ್ಮ ಮನೆಗೆ ತುಸ ಎದುರು
ಕಾಂಬುದದೋ ಪುಷ್ಪತರು.
ತಿಲಕಪುಷ್ಪವೆಂಬರದನು,
ಅಹುದೊ ಏನೊ ಕಾಣೆ ಹದನು.
ಏನಾದರಿರಲಿ ಹೆಸರು,
ಸುಂದರವೀ ಪುಷ್ಪತರು.
ದಿಟ್ಟವಲ್ಲವೆ ಕವಿಮಾತು?
"ಹೆಸರಿನೊಳಗದೇನಿಹುದು?
ಯಾವ ಹೆಸರೆ ಕರೆದರೂ
ಮಧುರವೇ ಗುಲಾಬಿ ಹೂ."

೨

ಹೆಸರರಿಯದ ಮಂದಿಯಿದಕೆ
ಕೊಟ್ಟ ಹೆಸರು 'ರೋಡ್ ಮಲ್ಲಿಗೆ':
ಅಂತೆಯೆ ಬಿಳುಪಿಹುದು, ನಿಜ;
ಆದರಿದು ಸುಗಂಧರಾಜ–
ಪುಷ್ಪಕೆಲ್ಲ ಬಗೆಯೊಳೆಣೆ,
ಇದರ ತೆರನ ಬೇರೆ ಕಾಣೆ.

೩

ನೋಡಬೇಕು: ಶ್ರಾವಣ ಬರೆ
ಮೈಯ ತುಂಬ ಹೂವಿನ ಹೊರೆ
ಹೊತ್ತು, ಇರುಳು ತಾನು ನಲಿದು
ಹೊತ್ತು ಮೂಡೆ ತಿರೆಯನೊಲಿದು
ಸಿಂಗರಿಸುವುದಿಳೆಯನು
ಸುರಿಸುತ ಹೂಮಳೆಯನು.
ಯಾರಿಗೆಂದವರಿಗೆ
ದೊರೆವುದು ರೋಡ್ ಮಲ್ಲಿಗೆ.

೪

ಈ ಹೂವಿಗೆ ಶ್ರೀಮಂತಿಕೆ–
ಯಿಲ್ಲ; ಕೊಳ್ಳರಿದನು ಬೆಲೆಗೆ;
ಪೂಜೆಗೊಳದು ದೇವನಡಿಗೆ,
ಮೇಲೇರದು ಹೆಣ್ಣ ಮುಡಿಗೆ;
ಹೂವಿನಾಸೆಯಿಹ ಬಡವರ
ಹೆಣ್ಮಕ್ಕಳನೀ ಹೂವರ
ಕರೆದೊಪ್ಪಿಸಿಕೊಳ್ಳು ತವರ
ಮುಡಿಗಾಗುವುದಲಂಕಾರ.
ಮುಡಿಯದಿರಲು 'ತುಳಿಯಿರಯ್ಯ'
ಎನುವಂತಿಹ ರೋಡ್‌ಮಲ್ಲಿಗೆ
ಚೆಲ್ಲಿದೆಯಿದೊ ಅಲ್ಲಲ್ಲಿಗೆ–
ನೊಂದು, ತುಳಿವ ಕಲ್ಲಿಗೆ.

೫

ದೇವನಡಿಗೆ ಮಡದಿಮುಡಿಗೆ
ಕೊಡದೆಯಿಡದೆ ಬಿಟ್ಟರೇನು?
ತಿಲಕಪುಷ್ಪವೆನಲು ಮೇಲೆ?
ರೋಡ್‌ಮಲ್ಲಿಗೆಯೆನಲು ಕೀಳೆ?

ಎಲ್ಲ ಹೂವು ತಿರೆಯ ಬಸಿರು
ಹೊತ್ತು ಹೆತ್ತ ಚೆಲುವಿನುಸಿರು;
ಅದುವೆ ಚೆನ್ನ ಇದುವೆ ಚೆನ್ನ
ಎಂಬ ನಮ್ಮ ಬಹುಮಾನ
ನಮ್ಮ ಕಿರಿಯ ನೋಟ ಕಣಾ;
ಚೆಲುವಿಗುಂಟೆ ಒಂದು ಮಾನ?
ಕೋಟರುಚಿಯ ಮನುಜಮನಕೆ
ಕೋಟಿತೆರನು ಚೆಲುವಿನೆಣಿಕೆ;
ಯಾವುದನ್ನೊ ಕಂಡು ತಾನು
ತಣಿವುಗೊಳುವುದೊಂದು ಕಣ್ಣು.
ತನ್ನ ಹಡೆದ ಮಕ್ಕಳಿಗೆ
ರಮಿಸುವ ತೆರ ಹಾಗೆ ಹೀಗೆ
ತಿರೆಯ ತಾಯಿ ನಕ್ಕ ನಗೆ
ಲಹರ ಲಹರಿ ಲಹರಿಯಾಗಿ
ಹೊಮ್ಮಿ ಚಿಮ್ಮಿ ಕೋಟಿ ಬಗೆ
ಹೂತ ಒಂದು ಚೆಲುವ ನಗೆ
    ಈ ರೋಡ್‌ಮಲ್ಲಿಗೆ.
ಅದರಿನಿಂದು ಮೋದವೆನಗೆ;
    ಸಂದುದಲ್ಲಿಗಿಲ್ಲಿಗೆ,
    ರೋಡ್‌ಮಲ್ಲಿಗೆ.

೧೬-೧೧-೧೯೫೨]

## ಕವಿಗಳ ಚಂದ್ರ

೧

ಅಹ್ಹಾ, ಅಹಹಾ! ಕವಿಗಳ ಚಂದ್ರ!
ಕವಿತಾಸ್ವರ್ಗದ ದೇವೇಂದ್ರ!
ಎಂದಿನಿಂದ ಇಂದಿನವರೆಗೂ
ಏನು ನಿನ್ನ ಚೆಲುವಿನ ಗಾಡಿ!

ಹಾಕಿಹೆ ಏನೋ ಮೋಡಿ:
ಕವಿಗಳೆಲ್ಲ ಕೊಂಡಾಡಿ
ಹೊಸಹೊಸ ಉಪಮೆಯ ತಡಕಾಡಿ
ಸಿಕ್ಕದಿರಲು ಕೈಬಿಟ್ಟರೆಂದು ಬಲು
  ಕೋಪವೆ ನಿನಗೆ?
  ಇಲ್ಲ ಇಲ್ಲ, ಊಹು.
ಕೋಪಿಸಿಕೊಂಡರೆ ಕರಗೇ ಹೋಗುವೆ;
  ಅದಕೇ ನಗುತಿಹೆ
  ಎಂದಿನಂತೆ ಬಹು!
  ಎಲವೋ ಕಿಲಾಡಿ,
ಆಯಿತೆ ಕಡೆಗೂ ನಿನ್ನದೇ ಗೆಲು?

೨

  ಕಿವಿಗೊಡು. ಕೇಳು–
  ನಿನ್ನದೆ ಸೋಲು:
  ಸೋಲಲ್ಲದಿರೆ,
  ಕಾವ್ಯದ ಜೈಲು!
ಅಮೃತಕಿರಣ ತಾರಾಪತಿ ಇಂದು
ಸುಧಾಸೂತಿ ಶಶಿಧರನೆಂದು
ಇಂತೆನಿತೆನಿತೋ ಹೆಸರಿನ ಮಾಲೆ
ನಿನಗಾಯಿತು ಸಂಕೋಲೆ:
ಜೊತೆಗಂಟಿತು ನಿನ್ನೊಡಲಿಗೆ ಕುಂದು
ಸಲ್ಲದ ಗುರುಪತ್ನಿಯೊಳು ನೀ ಸಂದು!
ಅಲ್ಲದೆಂದಿನಿಂ ನೀ ಕವಿಬಂಧು–
  ಅವರಿಟ್ಟೌತಣವುಂಡೆ,
  ಅಜೀರ್ಣಗೊಂಡೆ;
  ಅವರ ಕಾವ್ಯಸಮಯ
  ನಿನಗಾಯ್ತಾಮಯ:
  ಕವಿತಾರಾಜ್ಯ

ನಿನಗಿಂದಭೋಜ್ಯ.
ನಿನ್ನ ಮೋರೆಯದಕೇ ಬೆಳ್ಪು-
ಕವಿಗಳ ಕೆಳೆಗೊಂಡುದೆ ತಪ್ಪು!

೩

ಆದೊಡೋ ಚಂದ್ರ, ಆಲಿಸೆನ್ನ ನುಡಿ:
ಮೀರಿ ಬಾ ಹಾರಿ ಬಾ ಆ ಹಳೆ ಗಡಿ-
ಭೂಮಿಯಮೇಲಿಡು ನಿನ್ನ ಕಿರಣದಡಿ,
ಹಬ್ಬುವುದು ನಿನ್ನ ಕೀರ್ತಿಯ ದಾಂಗುಡಿ!
ಎಂತು ಕೈಬಿಡುವೆ ನಿನ್ನ ನಾ ದೂಡಿ?
ಇದಿಗೋ ಹೊಸ ಹೆಸರನ್ನಿಡುವೆ:
ಯುಗಕೆ ತಕ್ಕ ಪದವಿಯ ಕೊಡುವೆ:
ಬೇಡ ನಿನಗೆ ಹಳೆ ಕವಿಗಳ ಗೊಡವೆ:
ಇಂದಿನಿಂದ ನೀ ಜನದೊಡವೆ.
ಹಿಗ್ಗೊ ಹಿಗ್ಗೊ ಹೊಸ ಪದವಿಗೆ, ಚಂದ್ರ!
ಈ ಯುಗದಲಿ ನೀ ಬಡವರ ಲಾಂದ್ರ!

೨೮-೭-೧೯೫೨]

## ಮುಗಿಯದ ಮಾಯೆ

ಮೂಡಿದನೋ ಮೂಡಿದನೋ ಚಂದಿರ
ಹರಹಿ ಬಿಗಿದು ತಂಗದಿರಿನ ಹಂದರ.
ಹಬ್ಬಿಸಿಲಾಹಾ! ಜೊನ್ನದ ಬಳ್ಳಿ,
ಹೂತವೋ ಚುಕ್ಕಿಗಳದರಲ್ಲಿ!
ಬರಿ ಬೆಳಕೀ ಹಂದರ ಹೂಬಳ್ಳಿಯ ನೆರಳು!
ಬೆಳಕಿನ ಬಿಳಿಹೊದಿಕೆಯ ಹೊದೆದು
ತಣ್ಣನೆ ಪವಡಿಸಿತಿರುಳು.
ಇರುಳಿನ ಕನಸಿನ ಲೋಕದಿ ಸುಳಿಯುವ
ಅಪ್ಸರೆಯರದೋ ಬಿಳಿಮುಗಿಲು.

ಈ ಮಾಯೆಗೆ ಬೆರಗಾಗಿವೆ ನಿಂತು
ನಿಶ್ಚಲ ನೀರವ ವೃಕ್ಷಗಳು–
ಮಂತ್ರಬದ್ಧಪ್ರೇತಚ್ಛಾಯೆಗಳೊಲು,
ಚಂದ್ರನೇ ಬರೆದ ಮಸಿಚಿತ್ರದೊಲು.
ಚಂದ್ರನ ಈ ಚೆಲುವಿನ ಹೊಸಹೊಸ ಕೈಚಳಕ
ನೆನೆಯದ ನಿತ್ಯದ ಹಾಲಿನ ಜಳಕ:
ಮುಗಿಯದ ಮಾಯೆ,
ಅಮೃತಕರನ ಅಮೃತಚ್ಛಾಯೆ.

೧೯೫೨]

## ಹೋಲ್ಡಾನ್!

ನಡೆಯಲಾರೆ, ನಡೆದು ಸೋತೆ:
ಬಸ್ಸಿಗಾಗಿ ಬಂದೆನು,
ಚೌಕದಲ್ಲಿ ನಿಂದೆನು.
ದೀಪಗಂಬವೊಂದು ಹೊರತು,
ಇಲ್ಲ ನರನ ನೆರಳು, ಗುರುತು.
ಅರ್ಧಗಂಟೆ ಕಾಯಬೇಕು,
ನಿಂತು ನಿಂತು ಸಾಯಬೇಕು;
ಅಲ್ಲ ಅಲ್ಲ; ತಪ್ಪು, ತಪ್ಪು:
ಸಾಯದೆ ನಿಲ್ಲುವ ವೆತೆ,
ಒಂಟಿಯಾದ ನನ್ನ ಕತೆ.

ಇದ್ದಕ್ಕಿದ್ದಂತೆ–ಅದೋ!
ಅಹಹ! ಬಿದಿಗೆ ಚಂದ್ರಮಾ!
ಮೂಡಿಬಂದ–ನನಗೆ ಜೊತೆ:
ಓಡಿಬಂದ–ಇರಲು ಜೊತೆ!
ಮನೆಯ ಮೇಲೆ ಏರಿದ,
ಕಳೆಯ ನಗೆಯ ಬೀರಿದ.

ಬಾಲ್ಯದ ಕೆಳೆ ತಾನಲಾ,
ಈ ಪುರಾಣ ಚಂದ್ರಕಲಾ!

ಬಾಲ್ಯದ ನೆನಪೆಲ್ಲ ಬಂದು
ಆ ಸುಖದಲಿ ಮುಳುಗಿ ಮಿಂದು
ಕಣ್ಣನೆಲ್ಲೊ ತೇಲಿಸಿ
ಮನವನೆಲ್ಲೊ ಕೀಲಿಸಿ
   ನಿಂತಿರಲಂತು
   ಅರಿವಿಗೆ ಬಂತು:
ಏನೊ ಭರ್‌ರ್ರೆಂದು ಕೂಗಿ
ಕೆಂಪು ಬಣ್ಣ ಹಾಯ್ದುದಾಗಿ
   ಅರಿವಿಗೆ ಬಂತು.

ಹೋಲ್ಡಾನ್ ಹೋಲ್ಡಾನ್!
   ಎಂದು ಕೂಗಿದೆ.
ಹೋದ ಬಸ್ಸು ನಿಲ್ವುದೇನು?
   ದೂರ ಸಾಗಿದೆ.
ಎತ್ತಿದ ಕೈ ಎತ್ತಿದಂತೆ:
ನೋಡಿದೆ ಮನೆಮೇಲೆ ಮುಂತೆ.
ನೋಡಿಯೂ ನೋಡದಂತೆ
ಚಂದ್ರನಿಳಿಯುತಿದ್ದನಲ್ಲಿ–
   ನನ್ನ ತೊರೆದು,
   ಕೆಳೆದು ಮರೆದು.
ಹೋಲ್ಡಾನ್ ಹೋಲ್ಡಾನ್!
ಚೀರಿತೆನ್ನ ಖಿನ್ನಮನ.
ಬಸ್ಸೆ ನಿಲ್ಲಲಿಲ್ಲವಂತೆ:
   ಚಂದ್ರ ನಿಲ್ವನೆ?
ಚಂದ್ರನಿಳಿದ ಕೆಳಕ್ಕೆ
ನಾನು ಕುಸಿದೆ ನೆಲಕ್ಕೆ.

೧-೩-೧೯೪೯]

## ಚೆಲುವು ತುಂಬಿದೆ ಬಾನ ತುಂಬ

ಚೆಲುವು ತುಂಬಿದೆ ಬಾನ ತುಂಬ
ಇಂದುವಿನ ನಗೆಮೊಗದ ಬಿಂಬ:
ಮುಗಿಲು ಹರುಷದ ಹುಚ್ಚು ಕೇಳಿಯೊ–
ಳಚ್ಚಮಲ್ಲಿಗೆಯಾಗಿದೆ.

ಚುಕ್ಕಿಗಳು ಕಣ್ಣಿಕ್ಕಿ ಏನೋ
ಸನ್ನೆವಾತನು ಮಿನುಗುಗುಟ್ಟಿ
ಪಕ್ಕ ಪಕಪಕ ನಕ್ಕ ಲಕ್ಕದ
ನಗೆಯ ಮುತ್ತುಗಳಾಗಿವೆ.

ಬಾನ ಮೋದದಿ ಪಾಲುಗೊಂಡೂ
ಮೌನವಾಗಿಹ ತಿರೆಯ ಹೃದಯದ
ಮೌನಕಾರಣವರಿಯೆ ಮಾರುತ
ಮರಗಳೊಡ ಪಿಸುಗುಟ್ಟುವ.

ಆದೊಡೇನೀ ಮೋದಮಡುವನು
ಖೇದಮೊಸಳೆಯು ಕಲಕಿದ ತೆರ
ಕಾಗೆಯೊಂದೆಲ್ಲೋ ಕೂಗಿತು–
ಸುಖದ ಗೀತದಪಸ್ವರ.

ತಪ್ಪು ತಪ್ಪು: ಅಲ್ಲಪಸ್ವರ,
ಬದುಕನಿರಿಯೆಂದೆನಿಗಿದೆಚ್ಚರ:
ಎಲ್ಲೋ ದುಃಖದ ನೋವುನುಲಿತಕೆ
ಮೂಕ ಜಗದುಲಿಯೀ ತೆರ.

೧–೭–೧೯೫೬]

# ಬಣ್ಣಗಾರ

೧

ಮೂಡ ತಿಟ್ಟನೇರಿ ಬಂದನದೋ ಬಣ್ಣಗಾರ!
ಹೊನ್ನ ಪೊರಕೆಯಾಡಿಸಿದ
ಗೋಡೆಯೆಲ್ಲ ಗುಡಿಸಿದ
ಮಾಡವೆಲ್ಲ ವೊರಸಿದ
ಹಳದಿ ಪೂರ, ಕೆಂಪು ತುಸ– ಬೆರಸಿ ಸುತ್ತ ದೂರ ದೂರ
ಚಾಚಿ ಕೈಯ ಚಣದಲಿ
ಪಟ್ಟೆ ಹೊಡೆದ ಬಣ್ಣದಲಿ.

೨

ಏನು ಹಿಡಿಯಿತೋ ಖಯಾಲಿ, ತಾನೆ ಬಳಿದ ಬಣ್ಣದ
ಅಳಿಸಿಬಿಟ್ಟನದೇ ಕೈಲಿ, ಬಳಿದು ಮೇಲೆ ಸುಣ್ಣವ!
ಗೇಮೆ ಮುಗಿಯೆ, ಹಗಲ ನಡುವೆ
ಉಳಿದು ಲೋಕದೆಲ್ಲ ಗೊಡವೆ
ಕುಳಿತನೊಕ್ಕಡೆ.
ಹಸಿವ ಬಾಧೆ ತಲೆಯ ಕೆಡಿಸಿತೇನೊ ತಟ್ಟನೆ–
ಕೈಯ ದೊಡ್ಡ ಜಿಂಕ್‌ಬಕೆಟ್ಟ ಬೋರಲಿಟ್ಟನೆ!
ಸುರಿಸುರಿಯಿತು ಕುದಿನ ಸುಣ್ಣ:
ಬಣ್ಣಗಾರ ಸುಣ್ಣಗಾರನಾಗಿ ತೆರೆದನುರಿವ ಕಣ್ಣ
ಶಿವನ ತೆರದೆ, ಎಂದರೆಲ್ಲ ಬೆಂದ ಜನ–
ಸುಡಲು ಕೈಯ ಕೊಡೆ.

೩

ಇರಲಿರಲೀ ಬಣ್ಣಗಾರ ಎದ್ದು ನಡೆದನಾಕಡೆ–
ಅವನ ಹುಚ್ಚು ಕುಚ್ಚುಕುಣಿಯೆ, ಅದಕೆ ಯಾರ ಯಾವ ತಡೆ?
ಯಾರು ಕೊಟ್ಟರೀ ಗುತ್ತಿಗೆ
ನಿತ್ಯ ಮೂರು ಹೊತ್ತಿಗೆ

ಸುಣ್ಣಬಳಿದ ಪಡುವಗೋಡೆ ತುಂಬ ಕೆಂಪನೆರಚಿದ,
ಹುಚ್ಚು ಕೆರಳಿ ತನ್ನ ಮುಖದ ತಾನೆ ಊರಿ ಪರಚಿದ:
ಸುರಿಯೆ ಹರಿಯೆ ರಕ್ತ ಕೋಡಿ
'ನಾಳೆಗಾಯ್ತು ಬಣ್ಣ'ವೆಂದು
ಮಲಗಿದ ನಿಂತಲ್ಲಿ,
ಹೊದೆದು ಕರಿಯ ಕಂಬಳಿ.
ಕನಸಿನಲೂ ಅವನಿಗಿಲ್ಲ
ದುಡಿಮೆಗೆ ದಿನಗೂಲಿ!

೧೯-೧-೧೯೫೪]

## ಮಳೆಯ ಮಾರುತ

ಬೋರೆಮೇಲಿದೊ ಭೋರೆನುತ್ತಿಹ
ಪಡುವ ಕಡಲಿನ ಮಾರುತ
ಆಗಿನಿತು ಈಗಿನಿತು ತುಸ ಹೊಸ
ಮಳೆಯ ಹನಿಗಳ ತೂರುತ

ನಿದ್ದೆಗೈದಿಹ ಕಡಲ ಕೆರಳಿಸಿ
ತೆರೆಯ ಕೇಸರ ಕೆದರಿಸಿ
ಗದ್ದಲವ ಮಾಡುತ್ತ ಬಾನಿನ
ಮುಗಿಲ ಮಂದೆಯ ತರುಬುತ

ಬಂದನೋ ಬಂದನೋ ಮಾರುತ
ಘಟ್ಟವೇರುತ ನಾಡಿಗೆ
ತಂದನೋ ತಂದನೋ ಸಾರುತ
ಒಸಗೆಸುದ್ದಿಯ ಮಂದಿಗೆ.

ಮಳೆಯರಾಯನ ಕೆಳೆಯನಿವನು,
ಮುಂಗಡೆಯ ಹರಿಕಾರನು;
ಕಹಳೆಯೂದುತ ಕೂಗಿತಿರುವನು
ಮಿತ್ರರಾಜನ ಬರವನು.

ಬೆನ್ನೊಳಿದೆ ಕೋಲ್‌ಮಿಂಚ ಮೂಡಿಗೆ;
ಕಾಲರುದ್ರನ ಕುಣಿತಕೆ
ತಾಳಹಾಕುವ ತೆರದೆ ಗುಡುಗಿನ
ತಮಟೆ ಹೊಯ್ಯುವ ಮೋದಕೆ.

ತಲೆಯನೆತ್ತಿ ನಿಮಿರಿ ನಿಂತಿಹ
ವೃಕ್ಷಗಳ ತಲೆಬಾಗಿಸಿ
ಮಳೆಯರಾಯಗೆ ಮನ್ನಣೆಯ ಕೈ-
ಬೊಗಸೆಹೂವನ್ನುದುರಿಸಿ

ಗಂಡುಗಲಿಯೀ ಚಂಡಮಾರುತ
ಕಾರ್‌ಮುಗಿಲ ಪಡೆ ನಡಸುತ
ದಂಡನಾಯಕನಾಗಿ ಬರುತಿಹ
ಗ್ರೀಷ್ಮನಿಗೆ ಭಯ ಹಿಡಿಸುತ.

ಮಳೆಯರಾಯಗೆ ಪಟ್ಟಗಟ್ಟುತ
ಶ್ರಾವಣನ ಕೆಳೆಗೂಡಿಸಿ,
ಇಳೆ ನಗುತ ಹೊಳೆ ಹೆಚ್ಚೆ ಬಲು ಬೆಳಿ
ತಳೆಯೆ, ನೆಮ್ಮದಿ ಮೂಡಿಸಿ,

ಬಿರುಸು ನೋಟದ ಸರಸ ಮೂರ್ತಿಯೆ
ಭರದೆ ಬೀಸಯ್ ಮಾರುತ,
ಹರುಷ-ಸುಗ್ಗಿಯ ಕಾಳನುಳಿಸುತ
ದುಗುಡ-ಜಳ್ಳನು ತೂರುತ.

ಮಂದಮಾರುತ ಮಲಯಮಾರುತ–
ನೆಂಬ ಹೊಗಳಿಕೆ ನುಡಿಗಳು
ಚೆಂದವಾದರು ಮಳೆಯ ಮಾರುತ–
ನಾಗಿಯೇ ಬೀಸೇಗಳು.

ಮುಗಿಲಗೆಚ್ಚಲ ಗಗನಗೋವನು
ವರ್ಷಗರೆಯುವ ಗೋಪನೆ
ಜಗದ ದಾಹವ ಕಳೆದು ಹಸಿವಿಗೆ
ಆಶನ ನೀಡುವ ದಾತನೆ

ಉಗ್ರತಾಕಾಠಿನ್ಯಮೂರ್ತಿಯೆ
ಕರುಣವೃಷ್ಟಿಗೆ ಕಾರಣ–
ರುದ್ರಭದ್ರ ಪರಾತ್ಪರಾರ್ಥಕೆ
ನೀ ಸುಚಿಹ್ನೆ ಸಮೀರಣ.

೧–೧೨–೧೯೫೩]

## ಹೊಸ ನೀರು ಬರುತಿದೆ

೧

ಹೊಸ ನೀರು ಬರುತಿದೆ
ಹೊಸ ನೀರು ಹೊಸ ನೀರು
ಹೊಸ ನೀರು ಬರುತಿದೆ
ಹಳೆಯ ಹೊಳೆಗೆ
ಮೈನೆರೆದ ಸೊಕ್ಕಿನುಕ್ಕಿನಲಿ ಅಲ್ಲಲ್ಲಿ ಧುಮ್ಮಿಕ್ಕಿ
ಹಿಗ್ಗಿ ಹರಿಯುತ ನುಗ್ಗಿ ನುಗ್ಗಿ ನುಗ್ಗಿ
ಹೆಚ್ಚಿ ಹರಿಯುತ ಕೊಚ್ಚಿ ದಡವ, ಬಗ್ಗಡವ ಮಾಡಿ
ಕೆಚ್ಚನೆಯು ಹರೆಯ ಮೈಗೂಡಿ,
ಹುಚ್ಚುನೊರೆ ನಗುತ ಹೊಸ ದನಿಯ ಹಾಡಿ,

ಹೊಸ ನೀರು ಬರುತಿದೆ
ಹೊಸ ನೀರು ಹೊಸ ನೀರು
ಹಳೆಯ ಹೊಳೆಗೆ.

೨

ಹೊಸ ನೀರು ಬರುತಿದೆ
ಬರುಬರುತ ತರುತಿದೆ
ಕಸಕಡ್ಡಿ ಕೊಳೆಯ, ಕದಡಿ ತಿಳಿಹೊಳೆಯ,
ಕುಡಿನೀರ ಕೆಡಿಸಿ ಹುಡಿನೀರಿನಿಂದ,
ಹೆಚ್ಚಿ ನೀರ್ ನೆರೆ ಬಂದು ಹುಚ್ಚು ಹೊಳೆಯಾಗಿ,
ನುಂಗುತ ಕೆಲದ ನೆಲವ ಹೊಲವ, ನೀರ್‌ಬಲದ
ಪೊಂಗಿದಂಗದ ತರಂಗದ ತೋಳ ತಬ್ಬಿನುಬ್ಬಿರಲಿ,
ತಂಡತಂಡದ ಜೊಂಡ ಬಾಗಿಸುತ
ಬಂಡೆಗಳನಪ್ಪಳಿಸಲಲುಗದಿರೆ ಮಂಡಲಿಸಿ
ಮುಂಬರಿದು ಸೋಲನಪ್ಪದೆ ಮೊರೆದು ಮೊರೆದು
ದಡದ ಹಳೆ ಮುದಿಮರದ ಬುಡದ ನೆಲ ಕೊರೆಕೊರೆದು
ಹೊಸ ನೀರು ಬರುತಿದೆ
ಹೊಸ ಹರುಷ ತರುತಿದೆ
ಹಳೆಯ ಹೊಳೆಗೆ.

೩

ಹಳೆನೀರನುಂಡು ಮೈಗೊಂಡು ಹಳೆಯೊಲವ ಮರೆಸಿ,
ಹೊಸತನದ ಗೆಲವ ಹರಿಸಿ,
ಹೊಸ ಪಚ್ಚೆಪಯಿರು ಹೂಗಳಿನಲಂಕರಿಸಿ
ಇಕ್ಕೆಲನ ನೆಲನ ನಗಿಸಿ,
ತನ್ನ ಗೈಮೆಗೆ ತಾನೆ ನಲಿದು ಒಲಿದು,
ನಲಿವ ತಣಿವಿನ ತುಂಬುಹೊಳೆಯಾಗಿ ತಿಳುದು,
ತಾನಿಂತೆಯೇ ಇರುವೆನೆಂಬ ಸಂತಸ ಬಲಿದು
ತುಂಬಿ ಹರಿಯುವ ಹೊಳೆಗೆ,

ಬಂತು ಬರುತಿಹುದು ಬಹುದು
ಹಿಂದೆ ಇಂದೆಂದೆಂದು ಮುಂದು
ಹೊಸ ನೀರು ಹಳೆಯ ಹೊಳೆಗೆ–
ನಿತ್ಯ ಮುಂಬರಿವ ಇಳೆಗೆ.

೨–೪–೧೯೫೪]

## ಏಷ ವೃಕ್ಷಸ್ಸನಾತನಃ

೧

ಅದೊ ಅದೊ ಆಲದ ಮರ
ನಿಂತಿದೆ ನಿರಂತರ:
ಅಲ್ಲಿ ಇಲ್ಲಿ ಎಲ್ಲಿ ಎಲ್ಲಿ ಕಣ್ಣಿನ ಸುತ್ತಳತೆ ಅಲ್ಲಿ
ಅದೆ ಅದೆ ವೃಕ್ಷಕುಟುಂಬ–ಬಾನ ಬಯಲು ನೆಲತುಂಬ
ನಿಂತಿದೆ ನಿರಂತರ:
ಖರಕರಪ್ರಹಾರಕೊಡ್ಡಿ ತನ್ನ ತುಂಬಿದೆಲೆಯ ತಲೆಯ,
ದಶದಿಕ್ಕಿಗೆ ಚಾಚಿ ಕೈಯ ಬಾಚಿ ಬಯಸಿ ಗಾಳಿ–ಕೆಳೆಯ,
ಬೀಳುವೊಡಲ ಬೀಳದಂತೆ ಹಿಡಿಯೆ ನೆಲಕ್ಕೂರಿ ಕೈಯ
ಅಂಬೆಗಾಲ ನಿಲುವಿನಲ್ಲಿ ನಂಬಿ ನಚ್ಚಿ ಹುಟ್ಟುತವ
ಮಗುವಾಹಿಹ ಮಡಿಯದ ಈ ನಿಡುಬಾಳಿನ ಮುದುಕ–ಮರ–
ಇದೊ ಇದೊ ಆಲದ ಮರ
ನಿಂತಿದೆ ನಿರಂತರ.

೨

ಆಹಾ ಈ ಆಲದ ಮರ
ಹಾಕಿದೆ ಹೊಸ ಚಪ್ಪರ:
ಸುತ್ತ ಮೇವ ದನವ ಕಾವ ಗೊಲ್ಲನ ತನಿಕೊಳಲಿಗೆ
ಸ್ಥಾವರಜಗವಾಲುಸುತಿಹ ಮೌನವೇದಭಾಷ್ಯಕೆ
ಬೇಸಗೆ ಬಂತೆಂದು ಹೆದರಿ ಅವಿತು ಬಂದ ನೆಳಲಿಗೆ
ಪಕ್ಷಿಗಾನಗೋಷ್ಠಿಗೆ, ವಸಂತಲಕ್ಷ್ಮಿಲಾಸ್ಯಕೆ,

ವಾನರಸಂಸಾರಗಳ ಮೋದಕೆ, ವಿನೋದಕೆ,
ಹಣ್ಣು-ಕೆಂಪು ಕೆತ್ತಿದ ಚೆಲುವ ಹಸುರೆಲೆ-ವಿತಾನದ
ಸಣ್ಣ ಸಣ್ಣ ಬಿಳಲು-ಕಂಬು-ಸಾಲ ಸಭಾಭವನದ
ಹಚ್ಚ ಹಸುರ ಚಪ್ಪರ
ಹಾಕಿದೆ ಆಲದ ಮರ.

೩

ಹಳೆಯಾಲದ ಮರ
ಒಡೆಯದ ಸಂಸಾರ:
ನಡುವೆ ಪಿತಾಮಹ-ಬುಡ, ತನ್ನರನಾರನೂ ಬಿಡ:
ಹಬ್ಬಿದ ಬಳಗವನೆಲ್ಲದ ತಬ್ಬಿ ಹಿಡಿದು ನಿಂತಿಹ:
ರೆಂಬೆಕೊಂಬೆ ಕವಲುಬಿಳಲು, ಮಕ್ಕಳು ಮಕ್ಕಳಮಕ್ಕಳು
ಒಂದನೊಂದು ನೆಮ್ಮಿನಿಂತ ಕೂಡುಬದುಕಿನೊಕ್ಕಲು:
ಮುದುಪಕೊಂಬೆಗೆಳೆಯ ಬಿಳಲು ನಿಚ್ಚ ನಚ್ಚಿನೂರೆಗೋಲು
ವಂಶಪರಂಪರೆಯ ಕಾಯ್ವ ಸಂತಾನದ ಸಾಲು-
ಆಲದ ಮರದಜ್ಜನ
ಸುತ-ಸುತ-ಸುತ ಸಜ್ಜನ.

೪

ಸುಗ್ಗಿ ಮಾಗಿ ನಿರಂತರ
ಕಾಣಲಿಹುದು ಈ ಮರ:
ಇನ್ನು ಹೇಳಲೇನು ಕತೆಯ ಈ ವೃಕ್ಷದ ಪೂರ್ವಜರ?
ಬೆನ್ನ ಹಿಂದೆ ನಿಡುಚಾಚಿದೆ ಇದರ ತಲೆತಲಾಂತರ,
ಕಾಲನಿಟ್ಟ ಮೊದಲ ಹೆಜ್ಜೆಯಲ್ಲೆ ಇದರ ಶಿಶುಸಜ್ಜೆ,
ಜೀವವೃಕ್ಷದಾದಿಮೂಲವಿದರ ಹುಟ್ಟಿ ನೋಜೆ.
ಅನಾದಿಯೆಂತನಂತವಿದರ ಮುಮ್ಮುಂದಿನ ಪೀಳಿಗೆ,
ಸಾವಿನೊಳಗೆ ಹುದುಗಿದೆ ಈ ವಿಶ್ವವೃಕ್ಷದೇಳಿಗೆ;
ಜೀವಹೂವು ಮರೆಯಲಿಹ ನಿಮಿತ್ತ, ಹಣ್ಣ ಬಾಳಿಗೆ;
ಹಣ್ಣ ಗಣಿತವೃಕ್ಷಕಾದಿ, ತೂರಿ ಚೆದರಿ ಗಾಳಿಗೆ.

ಅಮರತ್ವದ ಆಲ,
ಇದೇ ಸಕಲ ಮೂಲ.

೫

ಈ ಮರ ಪುರಾತನ,
ನಿತ್ಯನೂತನ:
ಊರ್ಧ್ವಮೂಲವೃಕ್ಷವಂಶದಲ್ಲಿ ಇದರ ಮೊದಲ ಹುಟ್ಟು,
ಅದುವೇ ಇದರ ಪುರಾತನನೂತನತೆಯ ಗುಟ್ಟು;
ಕೊಂಬೆ ಕರಗಿ ಸಾವ ಮುನ್ನ ಬಿಳಲು ಬಿಡಲದಾದಿ
ಮುಂದಿನ ಬದುಕಿಗೆ–ಇಂತು, ಈ ವೃಕ್ಷವು ಬಹುಪಾದಿ;
ಮೇಲೆ ಬೇರು ಕೆಳಗೆ ಕೊಂಬೆ; ಹಣ್ಣು ಹೂವು ತಳಿರ ಜೀವ–
ಸಾರ ಚಕ್ರತಿರುಗಿ, ತೋರುತಿಹುದನಂತತಾಭಾವ;
ಸಾವಿನ ಹಣ್ಣೆಲೆಯ ಹಿಂದೆ ಜೀವನ ತಳಿರೊಡೆಯುವ,
ಹಳೆ ಹೊಸ ಸತ್ತ್ವಗಳ ಬೆಸೆದು ನಿತ್ಯದಲ್ಲಿ ನಿಲ್ಲುವ
ಈ ಮರ ಸನಾತನ,
ನೂತನ–ಪುರಾತನ.

೬

ಕೆಳಗಿದೊ ಹಸುರಾಲ,
ಮೇಲ್ನೀಲಿ ವಿಶಾಲ;
ಹಸುರಿನ ಕಿರುಹರಹಿನಮೇಲ್‌ಮೇಘಶ್ಯಾಮಾಂಗ
ಗ್ರಹತಾರಾಹಾರಶೋಭಿ ಮಲಗಿದೆ ತಾ ನಿಸ್ಸಂಗ:
ರವಿಕಿರಣಚ್ಛವಿಯ ನೋಟ ಬೆಳ್ದಿಂಗಳ ಮೃದುಹಾಸ,
ಮುಗಿಲುಬೆಣ್ಣೆ ಮೆದ್ದು ಮೈಗೆ ಮೆತ್ತಿಕೊಂಡ ಹೊಸ ವೇಷ–
ಯಾರು ತೇಲಬಿಟ್ಟರೀ ಘನಶ್ಯಾಮ ಸುಂದರನ
ಭವಾಂಬುಧಿಯಮೇಲೆ ಮೆರೆವ ಬ್ರಹ್ಮಭಾವ ಬಂಧುರನ,
ಆಲದೆಲೆಯ ಮೇಲಿನ
ಸುಂದರ ಶಿಶು ಕೃಷ್ಣನ?

೭

ಜಟಾಭರ ಬಂಧುರ
ಈ ವೃಕ್ಷಯೋಗಿವರ:
ಕೊಂಬೆಕೊಂಬೆ ಹೆಣೆದ ಜಡೆ ಮೆರೆಯೆ ತಲೆಯ ಮೇಲ್ಗಡೆ
ಬಿಳಲು-ಗಡ್ಡ ಕಣ್ಣಿಗೆಡ್ಡವಾಗಲೊಪ್ಪೆ ಕೆಳಗಡೆ
ಬಿಸಿಲು ಗಾಳಿ ಮಳೆಗೆ ಮೈಯನೊಡ್ಡಿ ವರ್ಷವರ್ಷಾಂತರ
ಸುತ್ತ ಬೆಳೆದ ಹುತ್ತ ತಳೆದು ತೋರಲು ವಾಲ್ಮೀಕಿಯ ತೆರ
ಮಹಾ ಮೌನ ರಸಯೋಗ ಸ್ಥಿತ ಸ್ಥಾವರ ಋಷಿಪ್ರವರ-
ಯಾವ ನವೋನವೀನ ಕಾವ್ಯಪೂತವೀ ಮನ್ವಂತರ?
ಓ ವೃಕ್ಷಯೋಗಿವರ,
ನಿನಗೆ ನಮಸ್ಕಾರ!

೫-೪-೧೯೫೭]

## ವನಜ್ಯೋತ್ಸ್ನೆ

೧

ಕಣ್ವಮುನಿಯ ನಲ್ಗುವರಿ ಶಕುಂತಲೆ, ಕಣ್ವಾಶ್ರಮ ಲಾವಣ್ಯಲತೆ,
ತನ್ನ ಕಯ್ಯ ಕೂಸೆಂಬ ತೆರದೆ ಬೆಳಸಲು ಬೆಳೆಯಿತ್ತವಳೊಲವ ಲತೆ!
ಕನ್ನೆಯಾಗಿ ಬೆಳೆಬೆಳೆಯ ಶಕುಂತಲೆ, ಬೆಳೆಯಿತೊಡನೆ ಅವಳಿಟ್ಟ ಲತೆ!
ಕಣ್ಗೆ 'ಲತೆಯ ಪೆಣ್, ಪೆಣ್ಣೆ ಲತೆ'ಯೆನುವ ಭ್ರಮೆಯನೆಲ್ಲರಿಗೆ ಹುಟ್ಟಿಸುತೆ.

೨

ವನಜ್ಯೋತ್ಸ್ನೆಯೆಂದಿಟ್ಟಳು ಹೆಸರನು ಜಾಜಿಯ ಬಳ್ಳಿಗೆ ಮುನಿಯ ಸುತೆ;
ಬನದ ಕುವರಿಯಾ ಬನದ ಬಳ್ಳಿಯೊಡನಾಡುವಳೊಲವಿನ ಮಾತುಕತೆ.
ಅನಸೂಯೆ ಪ್ರಿಯಂವದೆಯರು ಗೆಳತಿಯರಿದನು ಕಂಡು ಮೆಚ್ಚುತೆ ನಗುತೆ
ವಿನೋದಕವಳನೆ 'ವನಜ್ಯೋತ್ಸ್ನೆ'ಯೆನೆ, ಒಪ್ಪಿತು ಲಲನೆಗೆ ಲತೆಯ ಜೊತೆ.

೩

ಹಬ್ಬಿತು ಹರಡಿತು ವನಜ್ಯೋತ್ಸ್ನೆ ತಾ ತಬ್ಬಿತು ಹಬ್ಬಿದ ಮರನೊಡಲ;
ಉಬ್ಬುತ ಹರುಷದಿ ಹೂತು ಹೆಚ್ಚಿಸಿತು ಬನದಾ ಬೆಳುದಿಂಗಳ ಕಡಲ.
ಕಂಡು ಶಕುಂತಲೆ ಹಿಗ್ಗುತ ತಾಯೊಲು ನಚ್ಚಿನ ಗೆಳತಿಯರೊಡಗೂಡಿ
ಉಂಡಳಪಾರಾನಂದಾಮೃತವನು ಮರ–ಬಳ್ಳಿಗೆ ಮದುವೆಯ ಮಾಡಿ.

೪

ಜಾಜಿ ಮಾಮರನನೊಲಿದು ಕೂಡಿದೊಲು ಮುನಿಸುತೆ ವನದಲಿ ಒಂದು ದಿನ
ರಾಜ ದುಷ್ಯಂತನೊಲಿದು ಬರಲು ತಾನವನಿಗೆ ತೆತ್ತಳು ತನ್ನ ಮನ:
ಒವನನೆದೆಗೆಯಂಗುಲಿಯನು ಬೆರಳಿಗೆ ತೊಡಿಸಿ, ಬರುವ ಭರವಸೆಯಿತ್ತು
ಹಲವುಕಾಲ ಮರೆಯಲು ಮನದನ್ನೆಯ–ತಾನೇ ಹೋಗುವ ಮನವಾಯ್ತು.

೫

ಅರಿತು ಕಣ್ವಮುನಿ ಕುವರಿಯಿರವ ತಾನವಳ ಪತಿಯೊಡಗೆ ಕಳಿಸಿಕೊಡೆ
ಪರಮಹರ್ಷದಿಂದಣಿಯ ಮಾಡೆ, ಅಹ! ಅನಿತೆ ದುಃಖ ಮಗಳನ್ನು ಬಿಡೆ.
ನಗರಿಗೆ ಹೋಹಳು ವನಜ್ಯೋತ್ಸ್ನೆ ಇನ್ನೆಮಗಪ್ಪುದು ಕತ್ತಲೆಯೆಂದು
ಬಗೆಬಗೆಯಲಿ ಅನಸೂಯೆ ಪ್ರಿಯಂವದೆಯರು ಮಮ್ಮಲ ಮರುಗಿದರಂದು.

೬

ಹೊತ್ತು ಪಿತನ ಹರಕೆಯನಾಲಿಂಗಿಸಿ ನಚ್ಚಿನ ಗೆಳತಿಯರಿಬ್ಬರನು,
ಇತ್ತು ಹರಿಣಶಿಶುವಿಗೆ ನೀವಾರವ ಬೀಳ್ಕೊಳ್ಳುತ ಒಬ್ಬೊಬ್ಬರನು,
ನೆನೆದಳು ನಲ್ಮೆಯ ಕುವರಿ ವನಜ್ಯೋತ್ಸ್ನೆಯನು ಶಕುಂತಲೆ ಬರುಬರುತ
ಹನಿವ ಕಣ್ಣನೀರ್ ಕಾಲುವೆಯಾಗುತ ಬಳ್ಳಿಗಾಗೆ ಕಡೆನೀರೆರೆತ.

೭

ಬಿಡಲಾರದೆ ಜೊತೆಯನು ಸೆರಗೆಳೆಯುತ ಹಿಂಗಡೆ ಬರುತಿರೆ ಜಿಂಕೆಮರಿ
ಬಿಡದೆ ತಬ್ಬಿಕೊಳೆ ಬೆಳಸಿದ ಬಳ್ಳಿಯ ತಾನ್ಯೆತಂದಳು ಬನಗುವರಿ.
ಬಳುಕುಬಳ್ಳಿಯೊಡಲಂಗನೆ ಬಳ್ಳಿಯ ಹಿಡಿದು ತಡವಿ ಮುದ್ದಾಡುತಿರೆ,
"ಇಳೆಗಚ್ಚರಿ! ಲತೆ ಲತೆಯ ನುಡಿಸುತಿದೆ" ಎನುತ ದೂಖುದಲಿ ಸಖಿಯರಿರೆ–

೮

“ಹೋಗಿಬಹೆ ವನಜ್ಯೋತ್ಸ್ನೆ” ಎನುತ ನುಡಿದಲ್ಲಿಯೆ ನಿಲೆ ತಾನಳಲುಕ್ಕಿ
“ಹೋಗಿಬಾರಮ್ಮ” ಎನುವವೊಲಾ ಲತೆ ಬಾಗಲು ಬಳ್ಳಿಯ ಮೈಯಿಕ್ಕಿ
ವನಜ್ಯೋತ್ಸ್ನೆಯನು ಬೀಳ್ಕೊಂಡಳು ಬಹು ದುಃಖಭಾರದಲಿ ಶಕುಂತಲೆ–
ಕಣ್ವಾಶ್ರಮದಿಂ ಕಣ್ಮರೆಯಾಯಿತು ಚೈತ್ರದ ಚೆಲುವಿನ ಚಂದ್ರಕಲೆ.

೧೩–೪–೧೯೫೦]

## ಮಿಲನ

ರಾಧಾ–ಕೃಷ್ಣ

೧

ಕಣ್ಣು ಕಣ್ಣಿನಲ್ಲಿ ಕೂಡಿ
ಸೋಕಲೆದೆಗೆ ಕುಚದ ಕುಡಿ,
ತರಂಗವಾಡಿ
ಜೋಲೆ ಮುಡಿ;
ಬಳಸೆ ಮೈಯ ತೋಳ ಸುತ್ತು,
ತುಟಿಗೆ ತುಟಿಯ ಸವಿಯ ತುತ್ತು;
ಕೈಗೆ ಕೈಯಿ
ಮೆಯ್ಗೆ ಮೆಯ್ಯಿ
ಹಣೆದು ಹೆಣೆದು ಒಂದೆ ಎನಿಸಿ,
ಮೈಗೆ ಸೋಂಕ ಸವಿಯನುಣಿಸಿ–
ಕೂಡಿ ಕರಗಲಾರದೆ,
ಬೆಸೆದು ಬೆರೆಯಲಾರದೆ,
ಅರಿಯದರಕೆ ತೀರದೆ,
ಅರ್ಪಿಸಿಯೂ ತನ್ನೊಡಲ
ಪಾರಗಾಣದೊಲವ ಕಡಲ
ಕೃಷ್ಣವಕ್ಷಕೆ ರಾಧೆ–
ಬೇಸತ್ತವಳು ಬಸವಳಿದಳು
ತೀರದ ಅಭಿಸಾರದೆ.

೨

ರಾಧೆ : "ಹುಚ್ಚುಗರೆಯೆ ಕೊಳಲಗಾನ
ಮೆಚ್ಚಿಬಂದೆನೋ;
ಪೆಚ್ಚಳಾದೆ, ನನ್ನ ಮಾನ
ಸೂರೆಗೊಟ್ಟೆನೋ;
ಇಚ್ಛೆಯೆಲ್ಲ ನಿನ್ನದೇ–
ಒಲಿದು ಕೆಟ್ಟೆನೋ.
ತುಚ್ಛಳೇನೊ, ನುಡಿ, ದೊರೆಯೇ–
ಆಣೆಯಿಟ್ಟೆನೋ."

೩

ಕೃಷ್ಣ : "ನೀನು ಬಂದೆ ನನ್ನ ಮುಂದೆ
ಮೈಯೊಪ್ಪಿಸಿ ನಿಂದೆ;
ಏನೆ ಕೊಟ್ಟರದನೆ ಕೊಳುವೆ
ಬರಲಿ, ಲೋಕನಿಂದೆ.
ಲೋಕಕೆಲ್ಲ ನೀನು ಹೆಣ್ಣು
ಮೈಯ ಮಾಟದಾಟದೆ.
ಲೋಕವರಿಯದೆನ್ನ ಮೈಯೆ
ನನ್ನೊಳಿಹುದು ಕೂಟದೆ.
ಹೆಣ್ಣು ತನದೆ ಬಳಿಗೆ ಬಂದೆ,
ಬಿಡು ನಿನ್ನಯ ಕೊರಗು;
ನಾನು ನೀನು ಎಲ್ಲ ಒಂದೆ
ಎಂಬರಿವೊಳು ಕರಗು."

೪

ರಾಧೆ : "ಕರಗಲಾರೆ ಕೃಷ್ಣ, ದೊರೆ,
ಒಡಲೆ ನನಗೆ ಆಸರೆ:
ಕಂಗೆ ನಿನ್ನ ರೂಹು ಚೆಲುವು
ಮನಕೆ ನಿನ್ನ ಮೋಡಿ ಗೆಲವು

ಮೈಗೆ ನಿನ್ನ ಸೋಂಕು ಸೊಂಪು
ಕಿವಿಗೆ ನಿನ್ನ ಗಾನವಿಂಪು:
ಪಂಚಕರಣದಲ್ಲಿ ಹರಣ
ಹುದುಗಿ ಹೊಂದುತಿಹುದು ನಿನ್ನ:
ಪುಷ್ಪವುಳಿದು ಪರಿಮಳ
ಉಂಟೆ? ರಮಣ, ವೇಳಾ."

೫

ಕೃಷ್ಣ : "ಪುಷ್ಪವೆಲ್ಲೊ ಕಾಡ ಮೂಲೆ;
ಪರಿಮಳ ಗಾಳಿಯೊಳು ತೇಲೆ
ಬಳಿಗೆ ಬಾರದೆ,
ಮುದವ ತಾರದೆ?
ಭಾವದೇಹವಾಗಿ ಬರಲು
ಏಕೆ ಪಂಚಭೂತದೊಡಲು?
ನನ್ನ ಕೊಳಲ ಗಾನದ ಕರೆ
ಎಲ್ಲರಿಗೂ: ಯಾರೇ ಬರೆ
ಎಂತೇ ಬರಲಂತಾಸರೆ
ನೀಡುತಿರುವೆನು,
ಕೂಡಿ ಕರೆಯೆ ನಾನೆ ಬಂದು
ಕೂಡುತಿರುವೆನು.
ಮೈಯಿನೊಡನೆ ಮೈಯಾಗುತೆ
ಬೆಳಕಿನೊಡನೆ ಬೆಳಕಾಗುತೆ
ಹಕ್ಕಿಯೊಡನೆ ಹಕ್ಕಿಯಾಗಿ
ಚಿಕ್ಕಿಯೊಡನೆ ಚಿಕ್ಕಿಯಾಗಿ
ಹೆಣ್ಣು ಬಯಸೆ ಗಂಡಾಗುತೆ
ಗಂಡು ಬಯಸೆ ಹೆಣ್ಣಾಗುತೆ
ಚೆಲುವ ಬಯಸೆ ಚೆಲುವೆಯಾಗಿ
ಚೆಲುವೆ ಬಯಸೆ ಚೆಲುವನಾಗಿ
ಬೆರೆಯಲು ಅನುರಕ್ತಿಯಾಗಿ

ತೆರೆಯಲು ವಿರಕ್ತಿಯಾಗಿ
ತೆರೆಯಲು ಬರಿ ಬೆಳಕಾಗಿ
ಭಕ್ತಿಯಾಗಿ ಮುಕ್ತಿಯಾಗಿ
ಜೀವಾತ್ಮಕೆ ಶುಕ್ತಿಯಾಗಿ
ಬಯಸಿದ ತೆರ ಬರುವೆ
ಬಗೆಬಗೆಯಲಿ ಬೆರೆವೆ
ಬರದಿರೆ ನಾ ಕರೆವೆ
ಬಂದೊಡನೆಯೆ ನೆರೆವೆ."

೬

ರಾಧೆ : "ತನುವಿರಹಿತೆಯಾಗಿ ನಿನ್ನ
ಹೊಂದಲಾರೆ; ಇಂತೆ ನನ್ನ
ನಿನ್ನ ಬಾಳ ಗೆಳತಿಯಾಗಿ
ಕೊಂಡು, ಕಾಯೊ, ಪ್ರೇಮಯೋಗಿ.
ತನುವರ್ಪಿತ
ಮನವರ್ಪಿತ
ಪ್ರಾಣವರ್ಪಿತ:
ಬೇಡದಿರಲು ತನು, ನಿನ್ನ
ಚರಣಕೆನ್ನ ಹರಣ ಮುನ್ನ
ಚಿರಸಮರ್ಪಿತ.
ಬೀಳ್ಕೊಡು, ನಲ್ಲಾ,
ಜೀವರ ಗೊಲ್ಲಾ!"

೭

ಕೃಷ್ಣ : "ಬಾ ರಾಧಾ ಬಾ ರಾಧಾ
ಅರಿತೆ ನಿನ್ನ ಪ್ರೇಮವಿದ.
ನಿನ್ನ ದೇಹ ಮೃಣ್ಮಯ
ಕಾಮವುಳಿದ ಪ್ರೇಮದಿಂದ
ಪರಿಣಮಿಸಿತು ಚಿನ್ಮಯ;

ಅರ್ಪಿಸಿಕೊಳುತೆನ್ನೊಳಿಂದು
        ವಿರಮಿಸಿರಲು ತನ್ಮಯ.
ನನ್ನ ಗೋವ ನಾನೆ ಕರೆದು
ಕುಡಿದೆನೀ ಪ್ರೇಮಸುಧಾ;
ಮೇವಿನಲ್ಲಿ ನನ್ನ ಮರೆತು
ಗೋವು ನಿಲಲು ಕೊಳಲ ಹೊರತು
        ಕರೆಯಲಾವ ಸಾಧನ?
ಗಾನತುಷ್ಟ ಗೋವ ಕರೆಯೆ
        ನನಗೆ ಸುಧಾಪಾನ.
ಬಾ ರಾಧಾ, ಪ್ರೇಮಮುಖೀ,
        ಬಾರ ಚಿರಸಖೀ.
ಮಧುರಭಾವ ಮಿಲನದಲಿ
ನನ್ನೊಂದಿಗೆ ಜಗವಾಗಲಿ
        ನಿನ್ನೊಲು ನಿತ್ಯಸುಖಿ."

೧೯೫೩]

## ನವದಂಪತಿ

ನೋಡಿದೋ ಇಲ್ಲಿ ನವ ದಂಪತಿಗಳಿವರು,
ನೆಲಕೆ ಸಗ್ಗದ ಸುಖದ ಗಂಗೆ ತಂದವರು:
ಇದೆ ತಾನೆ ಹೊಸದಾಗಿ ಸಂಸಾರ ಹೂಡಿ
ತೊಡಗಿಹರು ಬಾಳ ಪಯಣಕ್ಕೆ ಜೊತೆಗೂಡಿ.
ಸ್ವಂತ ಮನೆ: ಇಬ್ಬರಿಗೆ ಚೆಲು ಗುಬ್ಬಿಗೂಡು,
ನೆಲೆಯಿರದ ಬೆಲೆಯ ಸಂತಸ ಸೊಗದ ಬೀಡು.
ಮನೆಯಮೇಲಿದೆ ಎರಡುಸಾವಿರದ ಸಾಲ,
ಮನೆಗೆಲೆಕ್ಟ್ರಿಕ್ ದೀಪ ನಲ್ಲಿಯಿಲ್ಲ.
ಪುಟ್ಟ ಕಂದನೆ ಮನೆಯ ಬೆಳಗುವಾ ದೀಪ,
ಮನ ತುಂಬ ಬಡತನದ ಕತ್ತಲೆಯೆ, ಪಾಪ.

ನನ್ನ ಮನೆ ಮಗು ಮಡದಿಯೆಂಬ ಹೆಮ್ಮೆ
ಸಂಸಾರಿಗನ ದುಡಿವ ತೋಳುಗಳ ಬಲ್ಮೆ.
ಎಲ್ಲಿಯೋ ದೂರಕ್ಕೆ ನಡೆದರ್ಧ ಮೈಲಿ
ನೀರಕೊಡವೆರಡ ತಹರೆರಡು ಕೈಲಿ.
ಅರ್ಧ ಸೀರೆಯನುಟ್ಟಿ ಅವನ ಅರ್ಧಾಂಗಿ
ಅಡಿಗೆಮಾಡುವಳು ಹಸಿ–ಸೌದೆ–ಹೊಗೆನುಂಗಿ.
ಅಂಬೆಗಾಲಿಕ್ಕಿ ಬೀದಿಗೆ ಬಂದ ಕಂದ
ಮೈಗೆ ಹುಡಿಹೊರೆದಾಡುತಿರಲೇನು ಚೆಂದ!
ಅಂತೆಯೇ ಒಂದು ದಿನ ಮಗು ಬೀದಿ ನಡುವೆ
ಉರುಳಿಬಂದಿರೆ ಹಡೆಯ ತಾಯ ಕೈಯೊಡವೆ
"ಪುಟ್ಟ ಪುಟ್ಟಾ" ಎಂದು ಕೂಗಿ ಕಾಣದಿರೆ
ಅಯ್ಯೊ ಅಯ್ಯೋ ಎಂದು ಕೈಕಾಲ್ಗಳದಿರೆ
ಹೊರಬಂದು ನೋಡಲಿತ್ತಾಡುತ್ತ ಕಂದ
ಬೀದಿನಾಯ್ಮರಿಯೊಡನೆ ಕಲೆತು ಸ್ವಚ್ಛಂದ
ಮರಿಯ ತಾಯ್ನಾಯಿ ತಾನತ್ತ ಮಲಗಿರಲು
ಮನುಜಶಿಶುವಿನ ತಾಯಿ ನೋಟ ನೋಡಿದಳು:
ನಗುತವಳು ಮಗುವ ಕೈಗೆತ್ತಿಕೊಳ್ಳುತಿರೆ,
ಕೊಡಹೊತ್ತು ಬಂದ ಪತಿ–ಮೈಬೆವರ ಧಾರೆ!
ಕುಕ್ಕಿ ಕೊಡವನು ಕೆಳಗೆ ನೀರು ತುಸ ತುಳುಕೆ
ಧಾವಿಸುತ್ತೀಯೆ ಕಂದನಿಗೊಂದು ಮುತ್ತು
ತಲೆಗೊಡಹೆ ತಾಯ ತುಟಿಗದುವೆ ಸವಿತುತ್ತು.
ನೋಟ ನೋಟವ ತಾಗಿ ನಗೆ ನಗೆಯ ಬೆರೆತು
ಇಬ್ಬರೂ ಓಡಿದರು ಹೊರಗೆ ಕೊಡ ಮರೆತು!

೨೦–೧೨–೧೯೩೨]

## ಹೊನ್ನ ಹುಲ್ಲೆ

ಕಣ್ಮುಂದೆ ಸುಳಿದು ಮುಂದೋಡುತಿಹೆಯೇಕೆ?
   ಓ, ನಿಲ್ಲು, ನಿಲ್ಲು–ನಿಲ್ಲೆ:
ಕಣ್ಬೊಲನ ಹಸುರಿನಲಿ ಕಮನೀಯತೆಯ ಚೆಲ್ಲಿ
   ಹಾರುತಿಹೆಯೇಕೆ, ಓ ಹೊನ್ನ ಹುಲ್ಲೆ?
ನನ್ನ ದಿಟ್ಟಿಯ ಬಾಣ ನಿನ್ನ ಮೈನಾಟಿಹುದು,
   ನಿನ್ನ ಎದೆನಾಟದದು–ನಾನೆ ಬಲ್ಲೆ!
ನನೊಲವ ಕಣ್ಣಿಯನು ಬೀಸಿ ಹಿಡಿಯುವೆನೆನಲು,
   ಕಣ್ಣಿಹಾಕಿಯೆ ಹಿಡಿದ ಬೇಡನಿಹನಲ್ಲೆ!
ನಿನ್ನ ಸೆಳೆದೆನ್ನ ಮನೆಯಂಗಳದೊಳಾಡಿಸಲು
   ನನಗೆ ಚೆಲುವಿನ ಗಾಡಿಯಿಲ್ಲೆಯಿಲ್ಲೆ!
ನನ್ನ ಹೃದಯವ ನೀನು ಅರಿಯದಿಹೆ: ಎಂತರಿವೆ?
   ಪಶುಹೃದಯ ನಿನದು–ಬರಿ ಕಲ್ಲು, ಕಲ್ಲೆ!
ಕಣ್ಬೊಲನ ಹಸುರಿನಲೆ ಓಡಾಡುತಿರು ನೀನು,
   ನಿನ್ನ ಕಟ್ಟುವ ಯುಕ್ತಿ ಕಡೆಗೆ ಬಲ್ಲೆ:
ನನ್ನ ಮನದಂಗಳದಿ ನೆನಹುಹುರಿಯಲಿ ಬಿಗಿವೆ;
   ಎಂತು ಓಡುವೆ ನೋಡುವೆನು–ಓ ಹೊನ್ನ ಹುಲ್ಲೆ!

೧೧–೫–೧೯೪೭]

## ಕನ್ನೆಗೆ ಬಿನ್ನಹ

ಕವಲು ಜಡೆಯ ಕನ್ನೆ
ಸೌಂದರ್ಯಸಾರಸಂಪನ್ನೆ ॥ಪ॥
ಏಕೆ ಗೈವೆ ಸನ್ನೆ?
ಅದು–ನನ್ನ ಕುರಿತುದೇನೆ?
ನನ್ನನಲ್ಲದಿರೆ ಏಕೆ ಹುಸಿಯ ಕರೆ?
ಈ ಬಿನ್ನಾಣವ ತೊರೆಯೌ ತೊರೆ ತೊರೆ–
            ಕವಲು ಜಡೆಯ ಕನ್ನೆ......

ಏನು ನಡೆಯ ಹೆಚ್ಚೆ!
ಅಕಟ–ಕಾಲಿಗಿಲ್ಲ ಗೆಜ್ಜೆ.
ಚೆಲುವ ಹರಡಿ, ನಡೆಯಲ್ಲಿ ನವಿಲ ಕಡೆ.
ಗಣಿಸಿ ಕುಣಿಯುವೆ–ಕೊಲ್ಲುವೆ ನಿಂತೊಡೆ–
ಕವಲು ಜಡೆಯ.....

ಬಿಡು ಬಿಡು ಈ ಭಂಗಿ,
ನೀ–ಲೋಕವರಿಯೆ ತಂಗಿ.
ಬಿಡದಿರೆ ಕಾಮಿ ನೋಣವನು ನುಂಗಿ,
ಲಾಲಿಸೆನ್ನ ನುಡಿ ಓ ಲಲಿತಾಂಗಿ–
ಕವಲು ಜಡೆಯ......

ಪತಿಮನ್ಮಥಗೆ ರತಿ
ಆಗೆ–ಲೋಕಕೆ ನೀ ಗರತಿ.
ಪತಿಯೊಲವಿನ ಬೆಳುದಿಂಗಳಲಿ
ನಲಿನಲಿ ನೀ ಮಲ್ಲಿಗೆಯರಳಿ–
ಕವಲು ಜಡೆಯ......

೧೯೪೯]

## ಚಪಲೆ

ಹೂವಿಂದ ಹೂವಿಗೆ ಹಾರು ದುಂಬಿ
ಕೆಡದಿರೊ, ಗೆಳೆಯಾ, ಚಪಲೆಯ ನಂಬಿ ॥ಪ॥

ಒಲಿದು ಬರುವ ತೆರದೊಳು ನಲಿಸಿ
ಕಲಿತ ಬೆಡಗಿನ ಬಲೆಯನು ಬೀಸಿ
ಲಲಿತ ವಚನಮಧುವನು ಸೂಸಿ
ಸುಲಭದಿ ಸವಳೆವಳೊ ನಿನ್ನ ಮೋಹಿಸಿ.

ಬೆಲೆಗೆ ಮುಂದಿಡುವಳೊ ಒಲವಿನ ರಾಶಿ
ತಿಳಿಯೆ ನೀನು ಅದು ಬೂದಿಯ ರಾಶಿ
ಕೊಳುವೆ ನೀನು ಮಾಡದೆ ಚೌಕಾಶಿ
ನಲಿದು ಕುಣಿವೆಯಲ್ಲೊ ಮೈಗೆಲ್ಲ ಪೂಸಿ.

ರಾಗರಸದ ಹುಸಿಸವಿ ತೋರುವಳು
ಭೋಗವಿಲಾಸದ ಭ್ರಮೆ ಬೀರುವಳು.
ನೀಗಿ ಧವನ ನೀ ಬರಿಗೈಯಾಗಲು
ಬೇಗನುಳಿದು ನಿನ್ನ ತಾ ಹಾರುವಳು.

೧೭-೬-೧೯೫೩]

## ಮಡದಿಗೊಂದು ಮಾತು

ತಪ್ಪೊ ನೆಪ್ಪೊ ನೀನೊಪ್ಪಿಕೊಬೇಕು
ಮನೆಗೆ ನಾನು ಯಜಮಾನ.
ತಪ್ಪಿರೆ ನಿನ್ನೊಳು ನಾನೊಪ್ಪುವೆನು–
ಇಲ್ಲವೊ, ಮನೆ ಶ್ಮಶಾನ.

ಒಪ್ಪಿ ಮದುವೆಯಾದರ ತೆರ ಬೇರೆ–
ಹಾಲು ಸಕ್ಕರೆಯ ಬಾಳು.
ಅಪ್ಪಂದಿರೊಪ್ಪಿ ಕೂಡಿಸಿದರ ಗತಿ
ಮಜ್ಜಿಗೆ ಬೆರಸಿದ ಹಾಲು.

ಹಾಲೊಡೆವುದು, ದಿಟ್ಟ: ಅದು ಮೊಸರಾಗದೆ?
ಮಜ್ಜಿಗೆ ಹಾಲಿಗೆ ಹೆಪ್ಪು.
ಪಾಲಿಗೆ ಬಂದುದ ಪಡೆವ ವಿವೇಕವ
ತೋರಲು ತಪ್ಪೇ ಒಪ್ಪು.

ನಾ ಮನ್ಮಥನಲ್ಲಲ್ಲ ನೀನು ರತಿ–
ಏತಕೆ ಸುಮ್ಮನೆ ವಿರಸ?
ವೈಮನಸ್ಯವೇತಕೆ–ಮನ ಕೂಡದೆ,
ಸಾಧ್ಯವಿಲ್ಲದಿರೆ ಸರಸ?

ನಮ್ಮ ಮಕ್ಕಳಾಟಕ್ಕೆ ಪಾಟಕ್ಕೆ
ಜಗಳ ಕದನಗಳ ಶ್ರುತಿಯೆ?
ಹೆಮ್ಮೆ ಪಡುವುದೇ ತಾಯ್ತಂದೆಗಳಲಿ,
ನಮ್ಮ ಮಾದರಿಯೆ ಗತಿಯೆ?

ತಪ್ಪೊ ನೆಪ್ಪೊ ನಾವೊಪ್ಪುತ ನಡೆವ–
ತೊರೆದು ಹೊಳ್ಳು ಹುಸಿ ಮಾನ.
ತಪ್ಪನು ಹುಡುಕುವ ಚಾಳಿ ನಿಂತು, ಮನೆ
ಆಗಲಿ ಸ್ವರ್ಗಸಮಾನ.

೮–೧೦–೧೯೫೫]

## ಮುಪ್ಪು

ದೇಹವೇನೊ ದಿಟವೆ ಹೊರೆ–
ಹರೆಯದೊಳಗದಿತ್ತ ಕರೆ
ತಣಿವುಗೊಂಡು ಕುಗ್ಗುತೆ ಬರೆ,
ಕಾಣಿಸಿಕೊಳೆ ಕೂದಲ ನರೆ,
ಮುಖದಲಿ ಮೂಡಲು ಗೆರೆಗೆರೆ
(ಕಾಲನುತ್ತ ನೇಗಿಲಗೆರೆ),
ಹರುಕು ಮುಗಿಲನುಟ್ಟಿಹ ಪೆರೆ–
ಯಂತೆ ಸಮೆದ ಯೌವನವಿರೆ,
ಕರೆಯದೆಯೇ ಊಟಕೆ ನೆರೆ–
ಯುವ ಬಡಹಾರುವರಿಗೆ ದೊರೆ–
ಯೆನಿಸುತ ಬರೆ ತಳುವದೆ ಜರೆ,

ತೋರ್ಪುದು ದಿಟ ದೇಹವೆ ಹೊರೆ-
ಯಾಗಿ ನಿನಗೆ: ನೆನೆ, ಆದರೆ
ಮುಪ್ಪದು ವಿಶ್ರಾಂತಿಯ ತರೆ
(ಆವರೆಗೂ ಬದುಕಿದ್ದರೆ,
ರೋಗರುಜಿನ ಬಾರದಿರೆ!)
ಆತ್ಮದರಿವು ಬೆಳಗುತಲಿರೆ
    ಮುಪ್ಪು ಸೌಖ್ಯದಾಸರೆ.
ಹಣ್ಣಾಗುತ ನೆಲಕುದಿರೆ
ಮುಗಿಯಿತಲಾ ಬಾಳ ಸೆರೆ?
ತುಂಬು ಬಾಳ ಬಾಳುವರೆ
    ಮುಪ್ಪ ಕಡೆಯ ಉಡುಗೊರೆ!

೨೨-೧೧-೧೯೫೨]

## ಉದಯ ಗಾನ

"ಉದಿಸಿಹನಿನ, ಸುಂದರ ದಿನ"-
    ಎನಲು ಪಕ್ಷಿಕೂಜನ
ಮುದತಾಳುತೆ ದಿನಚರ್ಯೆಗೆ
    ಅನುವಾಯಿತು ಮನ್ಮನ.

ಉದಯರವಿಯೆ ಮಂಜು ಕವಿಯೆ
    ಮರೆಯಾಗುವ ತೆರದೊಳು
ಮುದಿತ ಮನವು ಕುಗ್ಗಿತನುವು-
    ಗೆಟ್ಟು ಚಿಂತೆಭರದೊಳು.

ಚಿಂತೆಯೆ ಹಗಲೂಟ ರಾತ್ರಿ
    ಪವಡಿಪ ಹಳೆ ಹಾಸುಗೆ
ಅಂತು ಇಂತು ಎಂದು ಎನುತ
    ಬವಣೆಗೊಳುವ ಮನಸಿಗೆ.

ಎದೆಯ ಪಾಳಿನಲ್ಲಿ ಚಿಂತೆ
ಗೂಗೂ ಎನುತ್ತಿರೆ
ಬದುಕಿನ ಹಗಲೆಲ್ಲ ಇರುಳೆ,
ಇರುಳು ಹೆಚ್ಚಿನಾಸರೆ.

ಚಿಂತೆಯೋಡೆ, ಹಕ್ಕಿ–ಹಾಡೆ
ಬೇಡ: ಹೃದಯ ನಂದನ;
ಸಂತಸಗೊಂಬೇರಿ ಮನವು
ಹೇಗೆ ಉಲಿಯೆ ಸುಸ್ವನ.

ಹರ್ಷಕಿರಣ ಧೈರ್ಯಸೂರ್ಯ
ಕೆಂಪುಚೆಲ್ಲಿ ಮೂಡಲು
ವರ್ಷಿಸುವುದು ಎನಿತು ಹೊತ್ತು?
ಚಿಂತೆಮಂಜು ಓಡಲು–

"ಉದಿಸಿಹನಿನ, ಸುಂದರ ದಿನ"–
ಹೃದಯಪಕ್ಷಿ ಕೂಜನ
ಮುದಗೊಳಿಸಲು ಬಡ ಜೀವನ
ಸದಾ ಸೌಖ್ಯಭಾಜನ.

೨೬–೧೦–೧೯೫೨]

## ಏನು ಭಯ?

ಏನು ಭಯ ನಮಗ್ಯಾರ ಭಯ
ತಾನೇ ತಾನಾಗಿಹುದಭಯ ॥ಪ॥

ಪರರೊಡವೆಯನು ಮುಟ್ಟದತನಕ
ಪರದೂಷಣೆಯನು ಮಾಡದತನಕ
ಪರಸತಿಗೆ ಮನವಿಕ್ಕದತನಕ

ಪರಸುಖಕಿಹವನು ಬಾಳುವತನಕ
ನ್ಯಾಯಮಾರ್ಗದಲಿ ನಡೆಯುವವರೆಗೆ
ಕಾಯಕದಲಿ ಕೈಸೋಲದವರೆಗೆ
ಹೇಯಕೃತ್ಯಗಳ ಹೇಸುವವರೆಗೆ
ಮಾಯೆಮೋಸಗಳ ಮಾಡದವರೆಗೆ

ಧನದ ಗಳಿಕೆ ದಾನಕ್ಕೈವುದಕಾಗಿರೆ
ತನಗೆಂಬುದ ಬಿಟ್ಟು ಪರರಿಗೆನುತ್ತಿರೆ
ಜನುಮದ ಹಂಗಿಗೆ ಜೋತುಬೀಳದೆ
ಮನವ ರಾಘವನ ಮನೆಯ ಮಾಡಿರೆ

೧-೬-೧೯೫೬]

## ನಿದ್ರಾದೇವಿಯ ಹಾಡು

ಬಂದೆ ಬಂದೆನಿದೊ ಬನಗುವರಿ
ತಂದೆನಿದೋ ನಿದ್ರಾಲಹರಿ ॥ಪ॥

ನಿದ್ದೆಮುಸುಕನೆಳೆಯುವೆ ನಾನು
ಕಂಡ ಕನಸ ಮರೆಯೌ ನೀನು
ಕನಸು ನನಸಾಗದಿರಲೀ ಬಾಳು
ಚಿರನಿದ್ರೆಯೆ ಸುಖವಲ್ಲವೆ ಹೇಳು?

ಆತ್ಮನ ನಿತ್ಯಸ್ಥಿತಿ ಚಿರನಿದ್ರೆ
ಇಳೆಯ ಬಾಳವನ ಸ್ವಪ್ನದ ಮುದ್ರೆ
ನಮ್ಮೀ ಎಚ್ಚರ ದಿವ್ಯಸ್ವಪ್ನ
ನಿದ್ರೆ ಆತ್ಮನನು ನೆನೆವ ಪ್ರಯತ್ನ

ನಮ್ಮ ನಿದ್ರೆಯೊಳಗಣ ಕನಸು
ಚಿರನಿದ್ರೆಯ ಕನಸಿನ ಕನಸು
ಕನಸಿನೊಳಗೆ ಏನಾದರೆ ಏನು?
ಚಿರನಿದ್ರೆಯಲ್ಲಿ ಸುಖಿಸೌ ನೀನು

೧೯೩೮]

("ತಿರುಕಿಯ ಕನಸು" ಎಂಬ ನಾಟಕಕ್ಕಾಗಿ ಬರೆದ ಹಾಡು)

## ಬಾಳು ಹಂಪೆ

ಹಾಳು ಹಂಪೆಯಿದೆಂದು ಹಳಿಯದಿರು : ಹಾಳಿನಲಿ
ಹುದುಗಿಹುದು ಕನ್ನಾಡ ಹೊನ್ನ ಕಥೆ: ನೆನೆಯೆ
ನಮಗೊದವದೇ ಹೆಮ್ಮೆ? ವಿದ್ಯಾರಣ್ಯ ಮುನಿ ಹರಸೆ,
ಬಾಳಿತೀ ನಗರಿ ಭೂಲೋಕ ನಂದನವೆನಿಸಿ.
ಲೀಲೆಯಾಡಿದಳಿಲ್ಲಿ ರಾಜ್ಯರಮೆ ನಲಿನಲಿದು,
ಕೇಳಿಯಾಡಿದಳಿಲ್ಲಿ ವಾಣಿ ಕವಿಗಳಿಗೊಲಿದು;
ಕೇಳಿ ಮರೆಯದ ಗರುವತನವ ಲೋಕಕೆ ಮೆರೆದು,
ಕೂಲಿಹೋದುದೊ ವಿಧಿಯ ಕ್ರೂರದಾಳಿಗೆ ಮಣಿದು!
ಏನಳಿದೊಡೇನುಳಿದ ವೈಭವದ ಕುರುಹಿಂದು
ಕರ್ನಾಟ ರಾಜ್ಯ ನವನಿರ್ಮಾಣಕಾಗಿಹುದು
ಸ್ವರ್ಣಸಂಕೇತಂ; ಹಂಪೆಯ ದಿಗಂತದಲಿ
ಭಾನು ಮೂಡಿಹ ನವ್ಯಭವ್ಯ ಕರ್ನಾಟಕದ:
ಏಳು ಹಂಪೆಯೆ, ಹರಡಲೆಲ್ಲೆಡೆಗೆ ತನಿಹೊಗರು;
ಬಾಳು ಹಂಪೆಯೆ! ಪೊರೆಗೆ ಶ್ರೀವಿರೂಪಾಕ್ಷ ಗುರು!

೨೭–೯–೧೯೫೩]

## ಧನ್ಯ ಕೈಲಾಸಂ!

ಸತ್ಯ ಸುಂದರ ಶಿವಂ ನಟರಾಜ್ಯ ರೂಪದಲೆ
ಅಂದಗಜೆಯೊಡಗೂಡು ಅಷ್ಟರಸಮಂ ಪೂಡಿ
ರಸಯಜ್ಞಮಂ ಮಾಡಿ ನೆರೆದ ಸುರರಿಗೆ ಊಡಿ
ಮೆರೆದ ರಂಗಂ; ಎಲ್ಲರಾದರ್ಶಕದುವೆ ನೆಲೆ
ಕೈಲಾಸಪರ್ವತಂ; ಪ್ರಾಚೀನ ನಾಟ್ಯಕಲೆ
ಕೈಲಾಸಮಂ ಮುಟ್ಟಿ ಆ ಶಿವನ ತಣಿಸುತ್ತು
ರಸಿಕ ಲೋಕಕ್ಕೆ ಪೇರಾನಂದದುಣಿಸಿತ್ತು
'ಅಃ! ರಸೋ ವೈ ಸಃ' ಎನಿಸಿತ್ತು– ಎನೆ ಮಿಗಿಲೆ?
ಕಂಡಿತೇ, ಮುಟ್ಟಿತೇ, ನಮ್ಮ ಕರ್ನಾಟಕಂ
ಕೈಲಾಸ ಶಿಖರಮಂ ನಾಟ್ಯಪ್ರಪಂಚದಲಿ?
ನಾಟಕಕಲಾಕುಶಲರೆನಿಬರೋ ನೇರದಲಿ
ಏರಿದರು ಹರಗಿರಿಯ: ರಚಿಸಿ ಪಲ ನಾಟಕಂ,
ಕೈಲಾಸ ಕಂಡಾತನೊಬ್ಬನೇ: ಅವನೆ ಕೈಲಾಸಂ!
ಕಣ್ಗೆ ಕಂಡುದನಾತ್ಮ ಮುಟ್ಟದೇ?–ಧನ್ಯ ಕೈಲಾಸಂ!

೨೫–೧೧–೧೯೪೬]

## ಸರಸ ನಲ್ಮೆಯ ಮೂರ್ತಿ

ಹತ್ತಿರದ ಕೆಳೆಯರ್ಗೆ ಸರಸ ನಲ್ಮೆಯ 'ಮೂರ್ತಿ';
ಎತ್ತರದ ನಿಲುವಿನಿಂ ಗೆಲವಿನಿಂ ಚೆಲು ಮೂರ್ತಿ;
ಬಿತ್ತರದ ನುಡಿಯ ಗುಡಿಯೊಳು ನಿನ್ನ ಕೃತಿಮೂರ್ತಿ
ಕೆತ್ತಿಹುದು, ಮೌನಸೇವೆಯ ಶಾಸನದ ಕೀರ್ತಿ!
ಮೌನಿ ಮಾತಿಗೆ ಮೊದಲ್; ತೊಡಗೆ ವಾಗ್ಮಿಪ್ರವರ;
ಮನದೊಳಗ ಮೈಗರೆದ ಸುಸ್ಮಿತ ಸ್ನೇಹಪರ;
ಕಲಿಸುವೆಡೆಯೊಳ್ ಗುರು, ಕಲಿಯುವೆಡೆ ಶಿಷ್ಯವರ;
ಒಲುಮೆಯಿಂ ಕಾರ್ಯಸಾಧನೆಗೈವ ಬಲ್ಚದುರ.

ಪರಿಮತದೆ ಹುಟ್ಟಿಯುಂ ಪರಮತ ವಿಚಾರವಂ
ಅರಿತು, ಮುಟ್ಟಿದೆ ವೀರಶೈವಮತ ಪಾರವಂ:
ತೆರೆದೆ, 'ಅಣ್ಣ'ನಮೋಘ ಭಕ್ತಿಭಂಡಾರವಂ,
ಎರೆದೆ ನಾಡಿಗೆ 'ವಚನಧರ್ಮ'ದ ಸುಸಾರವಂ.
ನುಡಿಯ ಧರ್ಮದ ಹೊಲಬು ನಿನ್ನಿಂದಲಾಯ್ತು ಹಸನು;
ಅಡಿಯಿಡುವುದಾದಾರಿಯಿಂದೆಮ್ಮ ತಾಯ ಬೆಸನು.

೫-೧೧-೧೯೫೩]

## ತೆರೆಯಿತಿದೊ ನಾಡಭಾಗ್ಯದ ಬಾಗಿಲು

ತೆರೆಯಿತಿದೊ ನಾಡ ಭಾಗ್ಯದ ಬಾಗಿಲು
ಕರೆಯುತಿದೆ ಹೊಸ ಹೊನ್ನಹುದುಬಾಳ ಬದುಕಲು ॥ಪ॥

ಕಂಗೆ ಕಾಣದ ದೈವಲೀಲೆ ಕೃಪೆದೋರೆ
ಹೊಂಗನಸು ಹೂವರಳಿ ಪರಿಮಳದ ಬೀರೆ
ಭಂಗಿತ ಜನದ ಮನವು ನಲಿದು ಮುದತೋರೆ
ಮಂಗಳದ ಮನೆಯಾಗಿ ನಾಡು ನಲವೇರೆ

ತೋಳ ನುಗ್ಗಿದ ಕುರಿಯ ಮಂದೆ ಚೆದರುವವೊಲು
ಹೋಳಾದ ನೆಲವಿಂದು ಒಂದುಗೂಡಿರಲು
ಕೀಳುತನವನು ಕೊಡಹುತೆದ್ದು ಸಿಂಹದೊಲು
'ಬಾಳಿ, ಬಾಳಿಸಿ'ರೆಂದು ತಾಯ್ ಹರಸುತಿರಲು

'ಕನ್ನಡದ ಮನೆಯೊಂದೆ, ಒಂದೆ ಕನ್ನಡ ಕುಲ'–
ಚಿನ್ನದೆಳೆಕಟ್ಟಿದುವೆ ನಮಗೆ ರಕ್ಷೆ, ಬಲ:
ಭನ್ನವಾಗದೆ ಬದುಕಿ ನೂರು ಸಾವಿರ ಕಾಲ
ಕನ್ನಡದ ಕೀರ್ತಿಯನು ಹಬ್ಬಿಸಲು ಜಗದಗಲ

೧-೧೧-೧೯೫೬]

## ಗೆಲ್ಲು ಗೆಲ್ ಕನ್ನಡದ ನಾಡದೇವಿ

ಗೆಲ್ಲು ಗೆಲ್ ಕನ್ನಡದ ನಾಡದೇವಿ
ಗೆಲ್ಲು, ಭಾರತ ಕುವರಿ, ಭುವನೇಶ್ವರಿ ॥ಪ॥

ಹತ್ತುಕಡೆ ಹಂಚಿ ವಂಚಿತರಾದ ನಾವಿಂದು
ಹೆತ್ತ ಪುಣ್ಯದ ನಿನ್ನ ಮಡಿಲೊಳೊಂದು
ಮತ್ತೊಮ್ಮೆ ಬಾಳೊಡೆದು ಬಯಲತೊರೆಯಾಗದೊಲು
ಸುತ್ತ ರಕ್ಷಿಸಲಮ್ಮ ನಿನ್ನ ಹರಕೆಯ ಕಾಪು

ಕನ್ನಡದ ತಾಯ್‌ಪೆತ್ತ ನಾವೆಲ್ಲರೊಂದೆ ಕುಲ
ಕನ್ನಡದ ನೆಲದೊಕ್ಕಲೆನಿಸಿ ನಾವೊಂದು ಕುಲ
ಕನ್ನಡದ ನುಡಿಯೊಲವ ಕಟ್ಟಿನಿಂದೊಂದೆ ಕುಲ
ಕನ್ನಡದ ಕುಲದೇವಿ ನೀನೆ ನಮ್ಮ ಬಲ

ಕ್ಷುದ್ರಭಾವನೆ ಭೇದಗಳು ಮರಳಿ ಈ ನಾಡ
ಛಿದ್ರಗೈಯದ ರೀತಿ, ಓ ತಾಯೆ, ಕಾಪಾಡ
ಭದ್ರಂ ಶುಭಂ ಮಂಗಳಂ ನಿನಗೆ ಮಕ್ಕಳ್ಗೆ!
ಉದ್ಧಾರವಾಗಿ ಕನ್ನಡ ನಾಡು ನುಡಿ ಗೆಲ್ಗೆ!

೨೧-೧೦-೧೯೫೬]

## ಶ್ರೀ ದ.ರಾ. ಬೇಂದ್ರೆಗೆ

ಅಂಬಿಕಾತನಯದತ್ತ ಮೂರ್ತಿ, ಓ, ನಾಡಿನಮರಕೀರ್ತಿ!
ತುಂಬಿತೈವತ್ತು ವರುಷ ನಿನಗೆ, ಹೋ, ತುಂಬಿ ಬಂತು ಹರುಷ!
ಹೋ ತುಂಬಿ ಬಂತು ಹರುಷ!
ನಮಗೆ–ತುಂಬಿ ಬಂತು ಹರುಷ!
ನಾಡಿಗೆ–ತುಂಬಿ ಬಂತು ಹರುಷ!

ತುಂಬಿ ಹಾಡುತಿರಲಿ–ನಿನ್ನೆದೆ ತುಂಬಿ ಹಾಡುತಿರಲಿ:
ತುಂಬಿ ನೂರನದರಾಚೆಗೂ ಹಾರಿ ತುಂಬಿ ನಿಲಲಿ ಚಿರಕಾಲ,
ಕಳೆ ತುಂಬಿ ನಿಲಲಿ ಚಿರಕಾಲ,
ಇಳೆ ತುಂಬಿ ನಿಲಲಿ ಚಿರಕಾಲ,
ಸಿರಿ ತುಂಬಿ ನಿಲಲಿ ಚಿರಕಾಲ!

ನಾಡಿಗೆಲ್ಲ ನುಡಿಮೋಡಿ ಹಾಕಿ ಕವಿ ಗಾಡಿಕಾರನಾದೆ,
ಹಾಡಿ ಗಂಗೆಯನು ನೆಲಕ್ಕೆ ತಂದ ಪಾವಾಡಕಾರನಾದೆ:
ಸವಿ ಪಾವಾಡಕಾರನಾದೆ,
ಕವಿ ಪಾವಾಡಕಾರನಾದೆ,
ಗುರು ಪಾವಾಡಕಾರನಾದೆ!

## ವಿಸೀ

ಸೆಳೆಗೊಂಬು, ಎಳೆಬಳ್ಳಿ, ನಿನ್ನೊಡಲು: ಕಲೆ ಕಡಲು–
ತುಂಬಿ, ಅಲೆಯಲೆ–ಲಯದ ಲಲಿತ ವಿನ್ಯಾಸದಲಿ
ನಡೆನುಡಿಯ ಚಿಗುರಾಗಿ, ಹೂತು ಮೃದುಹಾಸದಲಿ,
ಕೆಳೆಯ ಕಂಪನು ಬೀರಿ, ತಾಯ್ಗೆ ಕಾಣಿಕೆಗೊಡಲು
ಫಲಿಸಿವೆ 'ದ್ರಾಕ್ಷಿದಾಳಿಂಬೆ'ಗಳು; ಸಮ 'ನೆಳಲು–
ಬೆಳಕು'; ಮೂಡಣ ಪಡುವ ದಿಕ್ಕುದಿಕ್ಕಿನ ಗಾಳಿ–
ಸೇವನೆಯ ಭಾವನೆಯ ಬಿತ್ತರದ ಬಾಳ್‌ಬಾಳಿ
ನೆಲ ಬಿಡದೆ ಬಾನ್‌ಮುಟ್ಟಿ ಸಿದ್ಧ ಸರ್ವವ ಕೊಳಲು.
ನೋವಿನಲಿ ಸಲವ, ವಿರಸದಲಿ ಸರಸವನರಸಿ
ಪರಿಣಮಿಸಿ ಹೃದಯದೊಳ್ ಸ್ನಿಗ್ಧತೆಯೆ ತುಂಬಿರಲು,
ಅರಿವು–ಕಿಡಿ ಸೋಂಕೆ ಬೆಳಗಿವೆ ನುಡಿಯ 'ದೀಪಗಳು';
ಭಾವಭೃಂಗಶ್ರುತಿಗೆ ಬಾಳ ತಾಳವ ನಿರಿಸಿ
ರಸಿಕಜೀವನ ತರಂಗಿಸಿ ರಾಗವಾಗಿರಲು
ಹೊಸಹುಟ್ಟಿನಲಿ ಚಿಲುಮೆಚಿಮ್ಮಿದುವು 'ಗೀತಗಳು'.

೧೧–೧೨–೧೯೫೩]

## ಶ್ರೀ ಕುವೆಂಪುವಿಗೆ

ಶ್ರೀ ಗುರುವಿನೊಲುಮೆ ತೊಟ್ಟಿಲ ಶಿಶುವೆ, ನೀ ಕುಡಿದು
ಧರ್ಮಾಮೃತನ ಧನ್ಯನೆನಿಸಿದಯ್; ಆ ಮುನ್ನ
ಮಲೆನಾಡ ತಾಯ ಚೆಲುವೇ ಪೆತ್ತ ಸಿಸುರನ್ನ:
ಆಗದೇ ವರಕವಿಯ ಜನನ? ಕೊಳಲಂ ಪಿಡಿದು
ರಾಗರಾಗಗಳಿಂದ ಜನತೆಯ ಎದೆಯ ಮಿಡಿದು,
ಬಣ್ಣ ಬಣ್ಣದ ಗರಿಯ ಸಾವಿರ ಕಣ್ಣ ನವಿಲ–
ಹೃದಯಪೀಠದ ಸರಸ್ವತಿಯ ಗಾನದ ಗತಿಯ
ತೂಗಿ ತೋರುವ ನವಿಲ–ಕುಣಿಕುಣಿಸಿದಯ್ ತಣಿದು.
ನೆಲದ ನಲವ ಚೆಲುವ ಮಯೂರನರ್ತನ ಸಾಕೆ
ವ್ಯೋಮವಿಹಾರಾಕಾಂಕ್ಷಿ ಪಕ್ಷಿರಾಜನಿಗೆ?
ಅಮೆಬಾವಿಯೆ ಮಾನಸಸರೋವರದ ಸಂಸರಾಜನಿಗೆ?
ಹಲಮೆಹಾಡಿದರು ಹೊಸತೆನಿಸೆ ರಾಮಾಯಣಕೆ
ನವದರ್ಶನ ಸ್ವರ್ಣಸ್ಪರ್ಶನವನಿತ್ತು ಕೃತಿಸಿ
ನವಭಾರತದ ಕವಿ ಪ್ರವರನಯ್–ನಲಿವೆ ನುತಿಸಿ.

೨೫–೫–೧೯೫೬]

## ನಮೋ ಗುರುವೇ

(ತೀ.ನಂ.ಶ್ರೀ.)

ಶ್ರೀಪದಗಳನು ಬಿಸುಟು, ವರಿಸಿ ಕಾವ್ಯಶ್ರೀಯ,
ಜ್ಞಾನದಾನದ ದೀಕ್ಷೆ ವಹಿಸಿ ಪಂಜನು ಹಿಡಿದು
ಮಿಡಿದು ಶಿಷ್ಯರ ಹೃದಯ ರಸಭಾವ ತಂತುಗಳ
ಕಾಪಿಟ್ಟೆ ಗುರುಪೀಠಗೌರವವ, ಗುರುವರ!
ಗೋಪನೆಡೆ ವತ್ಸನೆಂತಂತು ನಾ ಬಳಿ ಬಂದೆ
ನಿಂದೆ ಮೊದಲಿಗನಾಗಿ ನಿನ್ನ ಬೋಧೆಯ ಕುಡಿಯೆ,
ಪಡೆಯೆ ಕವಿತಾಸ್ಫೂರ್ತಿಯನು: ಅಲ್ಲ ಬರಿ ಬೋಧೆ

ನಾ ಪಡೆದುದಂದು: ಬರು ಹೃದಯಕ್ಕೆ ಪ್ರೇಮಸುಧೆ.
ನಾನಿರಲಿ; ರಸತಪಸ್ಯೆಯ ಫಲವ ಹಲವನಿಳೆ
        ಕಂಡಿಹುದು ನಿನ್ನಿಂದ: ಕಾವ್ಯನಿರ್ಮಿತಿಗೈದು,
        ಒಯ್ದು ಕವಿಮಿತ್ರರನು ರಸಕರ್ಮಮಾರ್ಗದಲಿ
ಕೇಣವಿಲ್ಲದ ರಸಗ್ರಹಣಸೌಹಾರ್ದದಲಿ,
        ಪಾಂಡಿತ್ಯ ಶುಷ್ಕತೆಗೆ ಪಲ್ಲವದ ಸೊಂಪಿತ್ತು
        ಎಯ್ದಿಹಿರಿ ರಸಲೋಕ ಸೀಮೆಯ: ನಮೋ ಗುರುವೇ!

೧೯೫೭]

## ಧರ್ಮಚಕ್ರ

ಯುಗಯುಗಾಂತರದಿಂದೆ ತಿರುಗುತಿದೆ ಚಕ್ರಂ:
        ದಾನವರ್ ಸೊಕ್ಕಿ ಭೂಸ್ವರ್ಗ ಪಾತಾಳದೊಳ್
        ಮಾನವರ್ ದೇವತೆಗಳೆಲ್ಲರಂ ಕಾಡುತಿರೆ
ಜಗವನುದ್ಧರಿಸೆ ಶ್ರೀಹರಿ ತಳೆದ ಚಕ್ರಂ
ರಕ್ಕಸರ ರಕ್ತಮಂ ಪೀರಿ ಧರ್ಮವ ನಿಲಿಸಿ
        ಸೇದೆವಟ್ಟುದು: ನಿಲ್ಲಲಿಲ್ಲ ತಾಮಸಚರಿತೆ;
        ಸೋದರರ ವಧೆಗೆಳಸಿದಾ ಕೌರವರನಳಿಸೆ
ಮಿಕ್ಕ ಮತಿಚಕ್ರಮಂ ತಿರಿಪಿದಂ ಕೃಷ್ಣಂ.
ದಂಡದಿಂ ಭೇದಕ್ಕೆ ತಿರುಗಲೇಂ? ನಿಂತುದೇ
        ಯುದ್ಧಂ? ಭುವನದ ಬಹುಮುಖ ದುಃಖಮಂ ಕಂಡ
        ಬುದ್ಧಂ ಪ್ರವರ್ತಿಸಿದನಾ ಧರ್ಮಚಕ್ರಮಂ.
ದುಂಡುತಿರುಗುವ ಚಕ್ರವೊಂದೇ: ಕಾಲಗುಣದಿಂ
        ಗುರಿ ಪರಿ ಬೇರೆ: ಚಿರಕಾಲ ತಿರುಗುತ್ತಿರಲಿ
        ಅರಿಯ ಕೊಲ್ಲದೆ ಕಾವ ಧರ್ಮಚಕ್ರಂ ಮರಳಿಮರಳಿ.

೧೫–೫–೧೯೫೭]

## ಬಿಡುಗಡೆ ವಿಹಾರಕ್ಕೆ ಆಡುಬಯಲಲ್ಲ

ಬಿಡುಗಡೆ ವಿಹಾರಕ್ಕೆ ಆಡುಬಯಲಲ್ಲ-
ವ್ಯಕ್ತಿ ವ್ಯಕ್ತಿಯ ಶಕ್ತಿಯ ವಿಕಾಸಕದು ಮಲ್ಲಶಾಲೆ;
ಪಡೆವ ತೋಳ್‌ಬಲ ದುರ್ಬಲರ ದಮನಕ್ಕಲ್ಲ;
ಸಲ್ಲ ಸಮಬಲರೊಡನೆ ತೋಳತೀಟೆಯ ಕದನ.
ಸದನ ಸೌಖ್ಯಕ್ಕೆ, ತವರು ಸಂತುಷ್ಟಿಗೆ, ನೆಲೆಬೀಡು ಶಾಂತಿಗೆ;
ಮಂಗಳದ ಬೆಳುದಿಂಗಳಿಂಗದಂಗಳ, ಬಿಡುಗಡೆಯ ಭಾಗ್ಯಭೋಗದಲಿ
ನಲಿವ ನಾಡು.
ಕೆಲರ ಸೊತ್ತಾಗಲಾ ಭೋಗ, ನಾಡಿಗೆ ಕುತ್ತು;
ಬಿಡುತೆಗೆ ವಿಪತ್ತು.
ನಾಡ ಬಿಡುಗಡೆಯೆನಲು ವ್ಯಕ್ತಿ ಗೈಹಿಕ ಮುಕ್ತಿ-
ಬರ, ಬೇನೆ, ಬರಿಗೈಯ ಬವಣೆ, ಅಜ್ಞಾನಗಳ ದಾಸ್ಯದಿಂದ.
ವಿಷಮತೆಯ ವಿಷಬೀಜಕೆಡೆಗೊಡಲು ಬಿಡುಗಡೆಯ ಬಸಿರಿನಿಂದ
ಒಗೆಯುವುದು ವ್ಯಕ್ತಿಯನು ಮೆಟ್ಟತುಳಿಯವ ಭೂತ.
ವ್ಯಕ್ತಿಯ ವಿನಾಶ
ಬಿಡುಗಡೆಯ ಪರಿಹಾಸ;
ವ್ಯಕ್ತಿಯ ವಿಕಾಸ
ಬಿಡುಗಡೆಯ ದಿವ್ಯವರ.
ಬಿಡುಗಡೆಯ ವರ ಬೇಡದಿರೆ, ಸಿದ್ಧ ಒಳಬವರ, ಕಾಲುವೆ ನೆತ್ತರ:
ಸಿದ್ಧಿ ಬೇಕೆನೆ ಸುರಿಸು ಗರುಡಿಮನೆಯಲಿ ಬೆವರ-
ಬಿಡುಗಡೆ ವಿಹಾರಕ್ಕೆ ಆಡುಬಯಲಲ್ಲ.

೧೫-೮-೧೯೫೪]

## ನಾಳಿನ ಭಾರತ

೧

ನೆಲವ ನೋಯಿಸಿದೆ, ಸಾಯಿಸದೆ ಕಳೆಯ,
ತೆಗೆದ ಹುಲುಸು ಬೆಳಸು;

ಪುಟಕಿಕ್ಕದಪರಂಜಿ;
ಕುಲುಮೆಗಿಚ್ಚಿನ ನಚ್ಚಿನೊಚ್ಚತನ ಕೆಳೆಯುಣದೆ
ಕಠಿನಾಕೃತಿಯ ಕೊಂಡ ಕಡುಕಬ್ಬಿಣ;
ಬಾನೊಳಾಡುವ ಬಿಳಿಯ ಮುಗಿಲ ಮುದ್ದೆಯ ತೆರದಿ
ಕಡೆಗೋಲ ಕಡೆತ ಪಡೆಯದೆ ಹಾಲಿನೊಡಲಿಂದ ಬಂದ
ಬೆಣ್ಣೆಯ ಚೆಂದ;
ಬೇನೆ ತಿನ್ನದ ಹೆರಿಗೆ–
ಇರುವುದಾದರೆ, ದಿಟದೆ,
ನಮ್ಮ ಮೈಮನ ದುಡಿಯದಿಂದ್ರಜಾಲದೊಳಹುದು
ಇಂದ್ರನಂದನವೆ ನಾಳಿನ ಭಾರತ.

೨

ಕಥೆ–ಪುರಾಣ–ಪವಾಡ ನಡೆವೊಡೇಕೀ ಬವಣೆ?
ಇಲ್ಲ ಲವಲೇಶ ಹೊಣೆ!
ಅದು–
ಸಿದ್ಧರಿಗೆ, ಬುದ್ಧರಿಗೆ–ಅಲ್ಲ, ಭವಬದ್ಧರಿಗೆ.
ಕೂಳುಂಬ ನೀರ್‌ಕುಡಿವ ಬಟ್ಟೆಹೊದೆಯುವ ಅಲ್ಪದೇಹಿಗಳು,
'ಭವತಿಭಿಕ್ಷಾಂದೇಹಿ'ಗಳು, ನಾವು;
ಕೂಳ್‌ಬಟ್ಟೆಗಳೆ 'ಬಾಳ ಬಟ್ಟೆ ಪರಮಾಗಮ'ವು ನಮಗೆ.
ಈ ನಮಗೆ, ನಮ್ಮ ಮಕ್ಕಳು ಮರಿಗೆ, ಅವರ ಮೊಮ್ಮಕ್ಕಳಿಗೆ,
ನಾಳಿನಾ ಭಾರತದ ನಲವತ್ತು ಕೋಟಿಗೆ,
ಬೇಕು ನಿಜದನ್ನ ಬಟ್ಟೆ,
ಅದ ಶಾಂತಿಯಿಂದುಣಲು ಕಾವ ಬಲ್ಪಿನ ರಟ್ಟೆ;
ಚಿಟಿಕೆ ಚಪ್ಪರ ಹಾಕಿ, ಮಾತ ಮದುವೆಯ ಮಾಡಿ,
ಸನ್ನೆಯೌತಣವುಣಿಪ ಭಾಷಣದ ಘೋಷಣದ ಬರಡುಜಾಣಲ್ಲ.
ಜನದ ದಳ್ಳುರಿಯುರಿವ ಜಠರಾಗ್ನಿ ತಣಿದಂದೆ–
ತಂಪ ತವರಹುದು ನಾಳಿನ ಭಾರತ.

೩

'ನಾಳೆ',–ನಿಜದೊಳು ಇಲ್ಲ:
ಅದು ದಿಗಂತಕೆ ಹಲ್ಲಾ!
'ನಿನ್ನೆ',–ಹಾರಿದ ಹಕ್ಕಿ:
ಹೋಯ್ತು ತಲೆಕುಕ್ಕಿ,
ಒಮ್ಮೊಮ್ಮೆ ಹೊಮ್ಮೊಟ್ಟೆಯಿಕ್ಕಿ.
'ಇಂದು',–ಜೀವನಬಿಂದು:
ಸುಖಕೊ, ದುಃಖಕೊ, ಸಿಂಧು.
ಇಂದು ಬದುಕಿನ ಬಾಳೆ
ಅಪ್ಪುದದು ನಾಳೆ–
ಮಗನ ಬಗೆ ಅಪ್ಪನೋಲೆ.

೪

ಕಳೆದ ನಿನ್ನೆಗಳಿಂದ ಕಲಿವ ಪಾಠಗಳುಂಟು,
  ಪಡೆವ ಜೀವಾಧಾರ ಸಾರವುಂಟು;
ಸುಳಿವ ನಾಳೆಯ ಭವ್ಯ ಚಿತ್ರಕಲ್ಪನೆ ಸೊಗಸು;
  ಗತ–ಅನಾಗತಗಳಿಗೆ 'ಸದ್ಯ'ವಿದು ಗಂಟು.
ಕೋಟಿ ನಿನ್ನೆಗಳೆಮಗೆ ಕಾಪಿಟ್ಟು ಉಳಿಸಿಹುವು,
  ಅಧ್ಯಾತ್ಮದೈಸಿರಿಯ, ಸತ್ಯಪಥವ,
ಕಾವ್ಯಕಲೆಗಳ ನಿಧಿಯ, ನೀತಿ ನಯಗಳ ವಿಧಿಯ,
  ನಿಲಿಸೆ ಗುರುಪದದಲ್ಲಿ ನಾಳೆ ಭಾರತವ.

೫

ಈ ಹಿರಿಮೆಗರಿಮೆಗಳ ಹೊಗಳಿಕೆ ಕಿವಿಸವಿ:
ಅವು ಕಟ್ಟಿ ಮೆರೆಯಿಸುವ ಚಿತ್ರ ಕಣ್‌ಸೊಗಸು.
ಅವ ತಿನ್ನಲುಂಟೆ?
ಅವ ಹೊದೆಯಲುಂಟೆ
ಅಧ್ಯಾತ್ಮ, ಕಾವ್ಯ, ಕಲೆ–
ಏನುಂಟದೆಲ್ಲಕ್ಕೆ ಮೊದಲೀ ಶರೀರ;

'ಶರೀರಮಾದ್ಯಂ ಖಲು ಧರ್ಮಸಾಧನಂ'–
ಇದು ಪುರಾಣೋಕ್ತಿ, ಕವಿಸೂಕ್ತಿ, ಅದರಿಂದ–
'ನಖಲು ನಖಲು ವರ್ಜ್ಯಂ ಧಾರಣೀಯಂ ಶರೀರಂ'.
ಇಂದಿನೀ ಭಾರತವು, ನಾಳಿನಾ ಭಾರತವು,
ಕೋಟಿ ಕೋಟಿ ಶರೀರ.
ಇಂದು ಉದರಂಭರಣ, ನಾಳೆಯಾಭರಣ;
ನಿತ್ಯೋಪವಾಸ ನಿಲೆ ಹಬ್ಬಹರಿದಿನ, ಬಾಗಿಲಿಗೆ ತೋರಣ.
ಇಂದು ಜೀವಿಸಿ, ನಾಳೆ–
ಸದ್ಯೋಜಾತವೆನಿಪ ಆ ನಾಳೆ–
ಕೋಟಿಕಂಠಗಳಿಂದ ಕಾವ್ಯ ಕುಕಿಲುವ ರೀತಿ, ಗೇಯ ನಿನದಿಸುವಂತೆ,
ಕೋಟಿ ಕರಕೌಶಲ್ಯ ಕಲ್ಲುಮಣ್ಣಿಗೆ ಕಲೆಯ ಜೀವ ಹೊಯ್ವಂತೆ,
ನಾಳೆಯೆನ್ನದೆ ಇಂದೆ–ನಾಳೆಗಾಗಿಂದೆ–
ಕೋಟಿಕೋಟಿಶರೀರರೂಪಿ ಭಾರತವ ಭರಿಸುವ ಕಾರ್ಯಭಾರ
ಇಂದೆಮ್ಮ ಹೊಣೆ ಹರಿಬವಯ್–ಅದಕೆ, ದುಡಿಮೆಯಾಧಾರ.

೬

ದುಡಿ, ದುಡಿ:
ಮನೆಯಲ್ಲಿ ಬಯಲಲ್ಲಿ,
ಮನದನ್ನೆ ನಲಿಯೆ, ಬೆಳೆಯೆ ಕರುಳ ಕುಡಿ;
ಕಡಿ, ಕಡಿ:
ನಾಡ ಹಸನಾಗಿಸಲು,
ಅಜ್ಜನೆಟ್ಟೊಣದಿದಾಲದ ಮರವ, ನೇಣುಹೋಗುವ ಮುನ್ನ,
ಅವರಿವರು ತಂದಿಟ್ಟ ಅಲ್ಲಲ್ಲಿ ಬಲುಬೆಳೆದ ಮುಳ್ಳುಹೊದರುಗಳು;
ಹಿಡಿ, ಹಿಡಿ:
ಹುಡಿಯ ಹೊನ್ನಾಗಿಸಲು ಹೊಲದೆ ನೇಗಿಲನು–
ನಿನ್ನಂತೆ, ನಿನ್ನ ಮನೆಮಕ್ಕಳಂತೆ,
ನಾಡ ಒಡಹುಟ್ಟುಗಳು ತಣಿಯುಂಡು ನಲಿಯಲೆಂದು,
ಎಲ್ಲರೂ ಬದುಕಲೆಂದು.
ದುಡಿ, ದುಡಿ: ಮತ್ತೆ ಮತ್ತೆ ದುಡಿ:

ಗಿರಣಿ ಯಂತ್ರಾಗಾರ ಕರ್ಮಶಾಲೆಗಳಲ್ಲಿ;
ನೀರ ಬೆಳಕಾಗಿಸುವ ದುಡಿವ ಆಳಾಗಿಸುವ, ನೆಲವ ಸಪ್ರಾಣಿಸುವ,
ನದಿನೀರನಣೆವ ಕಣಿವೆಕಟ್ಟೆಯ ಬೃಹದ್ ಯೋಜನೆಗಳಲಿ
ಸೇತುಬಂಧನದ ಅಳಿಲಾಗಿ–
ಎಲ್ಲರೊಳ್ಳಿತಕಾಗಿ, ಏಳ್ಗೆಗಾಗಿ, ಸೊಗದ ಬಾಳ್ಕೆಗಾಗಿ,
ಇರುವೆ–ದುಡಿಮೆಯ ದುಡಿ.
ಮಡಿ, ಮಡಿ:
ನಿನ್ನ ದುಡಿಮೆಯ ಫಲದ ರಕ್ಷೆಗಾಗಿ,
ಅದನುಂಬ ಮಕ್ಕಳ ಸುಸೌಖ್ಯದ ವಿವಕ್ಷೆಗಾಗಿ.

೭

ನಿನ್ನ ಇಂದಿನ ದುಡಿಮೆಯಿಂದ ನಾಳಿನ ಭಾರತ
ಅಹುದು ಚೆಲುವಿನ ಗುಡಿ:
ಅದಕಾಗಿ ದುಡಿ, ದುಡಿ.
ಅಲ್ಲಿ ಆ ಗುಡಿಯೊಳಗೆ,–
ಜನ ದೇವರು;
ದುಡಿಮೆಯೇ ಪೂಜೆ, ಅಭಿಷೇಕ ಬೆವರು;
ಸತ್ಯ ಧರ್ಮ ಅಹಿಂಸೆ ನಿತ್ಯನೇಮ,
ಜ್ಞಾನದಾನದ ಹೋಮ;
ಅರ್ತಿ ಬೆಳಗುವ ಅರತಿ;
ಕಾವ್ಯಕಲೆಸಂಗೀತನರ್ತನದ ಸೇವೆ ಕೊನೆಗೆ.
ಇಂತು–
ದುಡಿಮೆ–ಗುಡಿಯಾಗಿ ನಾಳಿನ ಭಾರತ
ಇಳೆಗೆಲ್ಲ ಕೊಡಲಿ ಶಾಂತಿಯ ವರವನನವರತ;
ನಾಳಿನಾ ಭಾರತದ ಇಂದಿನಾಳಾಗಿ
ಶಾಂತಿಗಾಗಿ ದುಡಿ,
ಪುಷ್ಟಿಗಾಗಿ ದುಡಿ,
ತುಷ್ಟಿಗಾಗಿ ದುಡಿ,
ದುಡಿ, ದುಡಿ

## ಮುಂದೇನು?

ಇಂದಿನಂತೆಯೇ ಇಹುದೇ ಮುಂದೆ?
ಇಲ್ಲ ಇಲ್ಲ ಇಲ್ಲ.
ಇಂದಿನಂತೆಯೇ ಇದ್ದುದೆ ಹಿಂದೆ?
ಇಲ್ಲ ಇಲ್ಲ ಇಲ್ಲ.

ನೆನೆ ನೆನೆ: ಯುಗದಾಚೆಯ ಮಾನವನ,
ಎಂದು ಅವನ ಬಾಳು?
ಮನೆ ಕಾಡು, ಬೇಟೆ, ಮೃಗದೊಡಕದನ:
ಮೇಲುಮೃಗದ ಬಾಳು.

ಹಿಂದಿದ್ದುದೆ ಇಂದಿನ ನಾಗರಿಕತೆ,
ವಿಶ್ವದೈಕ್ಯಭಾವ?
ಹಿಂದಿರಲಿಲ್ಲವೆ ಬವರ ಬೇನೆ ವೆತೆ,
ನೂರು ಭೇದಭಾವ?

ಇಂದು ಭೌತವಿಜ್ಞಾನದ ಬಹುಕೃತಿ
ಕೊಲುವ ಸಿಡಿಲು, ಮಿಗಿಲು
ಒಂದು ಮನುಜಕುಲವೆಂಬ ಸುಹೃನ್ಮತಿ–
ವರ್ಷಕೆ ಮಳೆಮುಗಿಲು.

ಹೊಡೆಯಲಿ ಸಿಡಿಲು, ಬೀಳ್ಗೆ ವಿಷವೃಕ್ಷ,
ಕೋಟಿಬೇರ ಹಿಂಸೆ;
ಒಡನೆ ಮೊಳೆಯದೇ ಲಕ್ಷೋಪಲಕ್ಷ
ಸಸಿಯಾಗಿ ಅಹಿಂಸೆ.

ನಾಡು ಬೇರೆ ನುಡಿ ಬೇರೆ ಬಣ್ಣ ನಡೆ
ಬೇರೆಯಾದ ಮಾತ್ರ

ಕೂಡಲಾಗದೇ ಹೂವಿನೊಲೊಂದೆಡೆ?–
ಮನುಜಧರ್ಮ, ಸೂತ್ರ

ಅವನು ಇವನ ಹಗೆ, ಇವನು ಅವನ ಹಗೆ–
ಎಲ್ಲ ಭೀತಿಶಂಕೆ.
ಭುವನಭವನದಲಿ ತೊಲಗೆ ಹಗೆಯ ಹೊಗೆ
ಆರಬೇಕು ಬೆಂಕೆ.

ಎಲ್ಲ ಕೂಡಿಯೇ ಬಾಳ್ವುದಗತ್ಯ,
ಸ್ನೇಹವೊಂದೆ ಕಟ್ಟು,
ನಿಲ್ಲುವುದಿದು ಕಡೆಗಿದುವೇ ಸತ್ಯ
ಮುಂದಿನ ಹೊಸ ಹುಟ್ಟು

ಇಂದಿನಂತೆಯೇ ಇಹುದೇ ಮುಂದೆ?
ಇಲ್ಲ ಇಲ್ಲ ಇಲ್ಲ.
ಇಂದಿನಂತೆಯೇ ಇದ್ದರೆ ಮುಂದೆ
ಸಾವುದೆಲ್ಲ ಎಲ್ಲ.

೩೧–೮–೧೯೫೨]

## ಧೂಮಕೇತು

ಅಂದು ವಿಶ್ವಾಮಿತ್ರಮುನಿ ನಿಲ್ಲುನಿಲ್ಲೆನಲು
ಮೇಲಕೇರದೆ ಮತ್ತೆ ಕೆಳಗಿಳಿಯದಲ್ಲಿಯೇ
ನಡುಬಾನಿನಲಿ ಬೀಳ್ವ ಭಂಗಿಯನು ನಟಿಸುತ್ತ
ನಿಂದ ತ್ರಿಶಂಕುವಿನ ಕೃಶದೇಹಕಾಂತಿಯೋ;
ಪುಣ್ಯಸಂಚಯ ಮುಗಿಯೆ ದೇವಗತಿಯೊಡನಳಿಯೆ,
ದೇವನೊಬ್ಬನು ಭೂಮಿಗೈತರುತ ದೂರದಿಂ
ಭೂಲೋಕದಿರವ ನಡೆ ನೋಡಿ– "ಅಹ! ನರಕಮಿದು,
ಮಾ ನರಕ! ಒಲ್ಲೆ ನಾನೊಲ್ಲೆ! ನರಕಂಬುಗಲು

ನಾಗ್ಯೆದ ಪಾಪಮೇನ್?"– ಎಂದಲ್ಲೆ ತಲೆವಾಗಿ
ನಿಂತ ನಿಲುವೋ; ಪ್ರಲಯಕಾಲರುದ್ರಂ ಮುನಿದು
ಮಾನವರ ಪೊಲ್ಲಗತೆಯನಿಂದೆ ಮುಗಿಸುವೆನೆಂದು
ತನ್ನ ಹಣೆಗಣ್‌ತೆರೆದು, "ಛೀ! ಬಾಳ್ಗೆ ಪುಳೂಗಳ್!"
ಎನುತೊಡನೆ ಕನಿಕರಿಸಿ ಕಣ್ಮುಚ್ಚುವನಿತರೊಳೆ
ಉರಿಗಣ್ಣ ಕಿಡಿಯೊಂದು ಹಾರಿ ಭೋಂಕನೆ ಜಾರಿ
ಇಳೆಯ ಮುಟ್ಟುವ ಮುನ್ನ ಶಿವನ ಕರುಣೆಯಿನಾರಿ
ಬರಿ ಬೂದಿಯಾಗಿ ಬಾನೆಡೆ ನಿಂತುದದೊ! ಏನು?
ಧೂಮದೇತುವೆ? ಅಲ್ಲ, ಅಲ್ಲ!

(೧೯೪೯ರಲ್ಲಿ ಕಾಣಿಸಿದ ಧೂಮಕೇತುವನ್ನು ನೋಡಿದ ಮಾರನೆಯ ದಿನ ಬರೆದದ್ದು.)

## ಹೊಸ ವರುಷದ ಒಸಗೆ

೧

ಆಲಿಸಿರಾಲಿಸಿರಿ–
ಓದುತಿಹನು ಪಂಚಮದಿಂಚರದಲಿ
ಹೊಸವರುಷದ ಪಂಚಾಂಗವನು
ದನಿಯೊಡಲಿನ ಬನಜೋಯಿಸನು:
ಸುಗ್ಗಿಯೊಡಲಿನ ಬಹಜೋಯಿಸನು:
ಸುಗ್ಗಿಯ ಹಿಗ್ಗಿನ ಒಸಗೆಯ ಸಾರಿ,
ಕೋರಿ ಬಸಂತನ ದೊರೆತನದ ಸಿರಿಯ,
ಬನದ ಸಿರಿಯನವನಿಗೆ ಜೊತೆಗೂಡಿಸಿ,
ಹಾಡಿಸಿ ಭೃಂಗದ ಮಂಗಳ ಗೀತವ,
ಹೊಂಗೆಯ ಹೂದೊಂಗಲು ರಂಗೋಲಿಯ
ಬರೆಯೆ, ಮೆರೆಯೆ ಚೆಂದಳಿರ ತೋರಣ,
ತಂಪುಕೋರೆ ದಂಪತಿಗೆ ಸಮೀರಣ,
ತಳೆಯೆ ಹನಿಯಮಳೆ ಮುತ್ತಿನ ಸೇಸೆಯ–
"ಇದೊ ಇದೊ ಹೊಸವರುಷದ ಒಸಗೆ,
ಒದಗಲೆಲ್ಲರಿಗೆ ಈ ಪರಿಯೊಸಗೆ,

ನನ್ನಿ ಸೊಬಗು ಸುಖ ಶಿವ ಶಾಂತಿಯ ವರ"
ಎಂದೋದುತ್ತಿಹ ಪಂಚಾಂಗವನು,
ಮಾಕಂದದ ಮನೆಜೋಯಿಸನು.

೨

ಕೇಳಿರಿ ಕೇಳಿ–
ಗಳಹಿದನೇನೋ ಖಗಪಂಡಿತನು,
ಕಲಿತ ವಚನರಚನಾಮಂಡಿತನು:
"ಏನೊರೆವಿರಿ ಮರೆಜೋಯಿಸರೆ?
ಏನೀ ನಿಮ್ಮದು ಕುಹೂ ಕುಹೂ ಕಣಿ!
ಇಳೆ ಇಬ್ಬಣವಾಗಿದೆ; ಕೆಳೆ ಬತ್ತಿದೆ;
ರಣಕಾಳಿಯ ಕೌಂಕುಳಿರುಂಕಿನಲಿ
ಕುರಿಮರಿ, ಪಾಪ, ಶಾಂತಿಕುಮಾರಿ!
ಮಾರಣ ಹೋಮಕೆ ಮುತ್ತಿಹರೆತ್ತಲು
ರಣದೀಕ್ಷಿತರು: ಸುತ್ತಲು ಕತ್ತಲು
ಕಾಳೀಪೂಜೆಗೆ ಕಾಳರಾತ್ರಿಯೊಲು.
ಇಲ್ಲವೆಲ್ಲಿಯೂ ಒಲವಿನ ಬೆಸುಗೆ,
ನೀವೊರೆಯುವುದೇನೀ ಒಸಗೆ?
ಇಲ್ಲದ ಕನಸನು ಕಟ್ಟುವಿರೇಕೆ?
ಸುಳ್ಳಿನ ಕಳ್ಳನು ಕುಡಿಸುವಿರೇಕೆ?
ನಿಜವನು ನುಡಿಯಿರಿ ಜೋಯಿಸರೆ,
ಎದೆ ಕಲ್ಲಾಗಿಸಿ ಸಿದ್ಧವಿರೆ."

೩

ಕಿವಿಗೊಡಿರೋವೋ–
ಮಾರ್ನುಡಿಗೊಡುತಿದೆ ನೆಚ್ಚಿನ ಕೆಚ್ಚಿನ
ಕಲಕಂಠವಾಣಿ:
"ಬಾಳಿನ ವೃಕ್ಷವು ಬತ್ತದೊ ಗೆಳೆಯಾ:
ಯುಗಯುಗದಿಂದ ಯುಗಯುಗದವರೆಗೆ

ಅಂತ್ಯವಿಲ್ಲದ ಆದಿಯ ಕಾಣದ
ಹಾದಿಯ ಹಿಡಿದಿದೆ ಬಾಳು;
ಹಳತು–ಹೊಸತು ಸುಖ–ದುಃಖ ದ್ವಂದ್ವದ
ಸಂಗಮವೀ ಬಾಳಿನ ಹೊನಲು;
ರೋಗ ಯುದ್ಧ ಸಂಕಷ್ಟದ ಸಂಕುಲ
ನೋವು ಸಾವುಗಳ ಭೀಕರ ತುಮುಲ
ಬಾಳಿನ ಮರಗಿಡ ಬಳ್ಳಿಗಳ
ಉದುರುವ ತೊಗಟೆ,
ಚುಚ್ಚುವ ಮುಳ್ಳು,
ಗಂತಿಯ ಗೊಂದಲ,
ಮರವನು ಕೊರೆಯುವ ಕೀಟದ ಕೂಟ,
ಪೊಟ್ಟರೆ ಹುಡುಕುವ ಹಾವಿನ ಕಾಟ.
ಏನೇ ಆಗಲಿ,
ಏನೇ ಬರಲಿ,
ಬಿರ್ರನೆ ಬೀಸಲಿ ಬಿರುಗಾಳಿ:
ಅಲುಗದು ಬೀಳದು ಬಾಳಿನ ಹೆಮ್ಮರ,
ವರ್ಷವರ್ಷವೂ ತಳೆಯುತ ಚಿಗುರ,
ಚಂದ್ರಸೂರ್ಯನಕ್ಷತ್ರಗಳಿಹವರ;
ಅಲ್ಲೊಣಗಲು ಕೊನರುವುದಿಲ್ಲಿ,
ಬೇರೊಣಗೆ ಬಾಳು ಬಿಳಲಿನಲಿ.
ನಿತ್ಯ ಜೀವನದ ಹೊಮ್ಮುವ ಹೊಗರ,
ನೆಲದಿಂ ತಾಳಿಗೆ ನಿತ್ಯವು ಏರುವ
ಜೀವಸಾರ ಪ್ರವಾಹದ ಇರವ
ನಾ ಮುಂಗಾಣುವೆ,
ನಾ ಬಲ್ಲೆ.
ಹೆದರುವೆಯೇತಕೆ ನೋವಿಗೆ ಸಾವಿಗೆ?
ಕಡೆಗಣಿಕೆಯೆ ಕಸುವೀವ ಬೇವಿಗೆ?
ಬಾಯ್‌ಬಾಯ್‌ಬಿಡುತಿಹೆಯೇಕೆ ಸುಖಕ್ಕೆ,
ಚಣದ ಸವಿಯ ಕರಗುವ ಹುಸಿಬೆಲ್ಲಕೆ?

ಸಿದ್ಧನಾಗು ನೀನೆಲ್ಲಕೆ, ಎಲ್ಲಕೆ;
ಸುಖದುಃಖದ ಸಮತಿಟ್ಟಿನ ನಿಟ್ಟಿನ
ನೆಲದಲಿ ಬಾಳಿನ ಹೂಮರ ಹುಲುಸು;
ನಿತ್ಯವು ಹಸುರು; ತಿಳಿ ಈ ಗುಟ್ಟಿನ
ನಿತ್ಯಭವಿಷ್ಯ:
'ಹಿಂದಿದ್ದುದು ಇಂದಿಹುದೆಲ್ಲ;
ಇಂದಿದ್ದುದು ಮುಂದಿಲ್ಲದೆ ಇಲ್ಲ.'
'ನಿತ್ಯನೂತನ ಚಿರಂತನ ಜೀವನ;
ನವೋ ನವೋ ಭವತಿ ಜಾಯಮಾನ'.

೪-೪-೧೯೫೪]

## ಕನಸು ನನಸಾಗದೆಂದೆನಬೇಡ, ಗೆಳೆಯಾ!

೧

ಕನಸು ನನಸಾಗದೆಂದೆನಬೇಡ, ಗೆಳೆಯಾ!
ಕೈಕಟ್ಟಿ ಕುಳಿತಿರಲು ಕನಸು ಕನಸೇ!
ಕನಸು ಕಂಡೆದ್ದು
ಮೈಗೊಡಹುತಲಸಿಕೆಯನೊದ್ದು
ಕಾರ್ಯಕ್ಕೆ ತೊಡಗೆ
ಆಗದೇ ಕೊನೆಗೆ
ನಾಳೆಗದೆ ನನಸು?-
ಮಾಡು ಮನಸು.

೨

ಕನಸಿನಲಿ ಕಂಡ ಕಾಮನಬಿಲ್ಗೆ ಕೈತುಡುಕು,
ಮುಗಿಲ ಮಂಟಪವೇರು,
ಬಗೆಗಡಲ ಹಾರು;
ಕನಸ ಬಟ್ಟಲು ಕೊಡುವ ಆಶಾಸುಧೆಯ ಹೀರು:

ಕ್ಷಣದಮರನಾಗು!
ಕಾಲದೇಶದ ಎಲ್ಲೆ ಕಟ್ಟುಗಳ ಕಿತ್ತೊಗೆದು
ಭೌತಬಂಧನವುಳಿದು
ಮರ್ತ್ಯವನು ಮೀರಿ
ಮೇಲಕ್ಕೆ ಹಾರಿ
ಏರೇರು ಮೇಲೇರು–
ಅದೊ ಅಲ್ಲಿ, ಮೇರು!
ಅಲ್ಲಿಹುದು ಕಲ್ಪತರು,
ಕಾಮಧೇನು!
ಕನಸಾದರೇನು?
ಇಂದ್ರ ನೀನು!

೩

ಸ್ವರ್ಗ ದೇವೇಂದ್ರ ದೇವತೆ ಯಕ್ಷ ಗಂಧರ್ವ
ರಂಭೆ ಊರ್ವಶಿ ತಿಲೋತ್ತಮೆ ಮೇನಕೆ–
ಇಷ್ಟೆ ಸಾಕೆ? ಕೇಳು–
ಜೊತೆಗೆ, ಸಾವಿಲ್ಲ:
ಸಾವಿಗಿಂತಲು ಮಿಗಿಲು–
ಹಸಿವಿಲ್ಲ ಹಸಿವಿಲ್ಲ, ಅಲ್ಲಿ ಹಸಿವಿಲ್ಲ;
ನಿತ್ಯಸುಖ ನಿತ್ಯತೃಪ್ತಿ;
ಕೂಳಿಗಾಗಿಯೆ ಕ್ಷುದ್ರ ಕದನವಿಲ್ಲ:
ಬಡವ ಬಲ್ಲಿದನೆಂಬ ಭೇದವಿಲ್ಲ:
ಇಂತು ನೆಲಸಿರೆ ಸರ್ವಸುಖ ಸರ್ವಸ್ವಾತಂತ್ರ್ಯ,
ಇರಲೊಬ್ಬ ಇಂದ್ರ!

೪

ಇಂಥ ಸ್ವರ್ಗದ ಕನಸ ಕಂಡರಲ್ಲವೆ ಹಿಂದೆ?
ಏನೇನ ಹೇಳಿದರು, ಏನೇನ ಮಾಡಿದರು,
ಆ ಸ್ವರ್ಗಕೆಂದೆ!

ಯಜ್ಞಯಾಗಾದಿಗಳನದಕಾಗಿ ಹೂಡಿದರು,
ಪುಣ್ಯಪಾಪಗಳೆಂಬ ಕಟ್ಟುಮಾಡಿದರು:
ಪುಣ್ಯವೆನೆ ಸ್ವರ್ಗ,
ಪಾಪವೆನೆ ನರಕ;
ದಾನದಿಂದಲೆ ಪುಣ್ಯ,
ಲೋಭ ನರಕ.
ಇಲ್ಲದರಿಗುಳ್ಳವರು ಕೊಡುವ ದಾನ
ಆಯ್ತು ಸರ್ವರ ಸುಖದ ಸ್ವರ್ಣಮಾನ:
'ಸಹನಾವವತು ಸಹನೌ ಭುನಕ್ತು
ಸಹವೀರ್ಯಂ ಕರವಾವಹೈ
ತೇಜಸ್ವಿನಾಮಧೀತಮಸ್ತು
ಮಾ ವಿದ್ವಿಷಾವಹೈ.
ಓಂ ಶಾಂತಿಶ್ಯಾಂತಿಶ್ಯಾಂತಿಃ'–
ಎಂಥ ಹೊಂಗನಸು!
ಕಂಡ ಕನಸಿನ ರೂಹ ದಿಟದಾಕೃತಿಗೆ ಕಡೆದ
ದಿಟ್ಟ ರೂವಾರಿಗಳು, ನಮ್ಮ ಪೂರ್ವಜರು,
ಆ ಹಿರಿಯ ಹಿರಿಯರು,
ಆ ಗರುವ ಗರುವರು!
ಅವರ ಆ ಹಿರಿ ಬದುಕು, ಆ ತುಂಬುಬಾಳು–
ಆ ಭಾವ್ಯ ಭೂಸ್ವರ್ಗ,
ಆ ರಾಮರಾಜ್ಯ–
ನಮಗಿಂದು–ಕನಸು!

೫

ಒಡೆದ ಕನಸುಗಳಿರಲಿ–
ಕಡೆದಿಹ ಕನಸುಗಳ ಕತೆಯ ನೆನೆಯ ಗೆಳೆಯಾ:
ಚಾಮುಂಡ ದಂಡಾಧಿಪನ ಕನಸು ಕಗ್ಗಲ್ಗೆ
ಚಿರತಪೋಮೂರ್ತಿಯಾ ಕೃತಿಯಾಯ್ತಲಾ;
ಜಕ್ಕಣನ ಕನಸು ಚೆಲು ಚೆನ್ನಿಗನ ಬೀಡಾಯ್ತು,

ಕಲ್ಲ ಬಗ್ಗಿಸಿ ಕಲೆಯ ಕೌಶಲಕ್ಕೆ;
ಮಮ್ತಾಜಳಮರ ಪ್ರೇಮವೆ ಘನಿಸಿ, ಷಹಜಹಾ
ಕಂಡ ಕನಸಿಂದಾಯ್ತು ತಾಜಮಹಲೆನಿಸಿ–
ಅಮೃತಶಿಲೆ ಅಮೃತಪ್ರೇಮಕ್ಕೆ.
ಕನಸು ನನಸಾದ ಕತೆಯೊಂದೆ ಎರಡೆ?
ಆಕಾಶಯಾನ ರೇಡಿಯೊ ರೈಲು ಅಣುಬಾಂಬು
ವಾಕ್‌ಚಿತ್ರ ಟೆಲಿವಿಷನ್–ಓ, ಎನಿತು!– ನೀ ನಂಬು
ನಂಬದಿರು– ಇನ್ನುಳಿದವು,
ಕನಸ ಹೂ ಹಣ್ಣುಗಳು–
ಎಣಿಕೆಗಸದಳವು.

೬

ಕಾರ್ಲಮಾರ್ಕ್ಸನ ಕನಸು ರಷ್ಯದಲಿ ತುಂಬಿತಲ
ಇಹದ ಸಂಶುದ್ಧಿ ಸಿದ್ಧಿ;
ಗಾಂಧೀಜಿ ಕಂಡ ಕನಸಿನ ಭವ್ಯ ಭಾರತವು
ನಿಜದ ನಿರ್ಮಿತಿಯಾಗದೇ, ಗೆಳೆಯ, ನಮಗಿರಲು
ಪಿತನ ಪಥವನು ಹಿಡಿವ ಭಾವಶುದ್ಧಿ?
ಇಂದು ಮಾನವ ಕೋಟಿ ಕಾಂಬ ಶಾಂತಿಯ ಕನಸು
ನಾಳೆ ನನಸಾಗದೆ?
ಕನಸು ನನಸಾಗದೆಂದೆನಬೇಡ, ಗೆಳೆಯಾ!
ಕೋಟಿ ಕನಸನು ಕಂಡು
ಮೈಮನದೆ ಹುರಿಗೊಂಡು
ಕನಸ ನನಸಾಗಿಸುವ ಛಲವ ತಳೆಯಾ,
ಬಲವ ತಳೆಯಾ,
ಒಲವ ತಳೆಯಾ!

ಓಂ ಶಾಂತಿಶ್ಶಾಂತಿಶ್ಶಾಂತಿಃ

# ಚಿತ್ತೆ ಸತ್ಯ

ನಡುನಿದ್ದೆ: ಬೆಚ್ಚಿಬಿದ್ದೆ
ಧಡಿಲ್ ಎಂದು ಹೊಡೆಯೆ ನಿಡಿಲ್:
ನಿದ್ದೆಮಸಣದೆದ್ದು ಕುಳಿತು
    ಕಂಡಿತೆ ಕನಸು
    ಸುಪ್ತ ಮನಸ್ಸು?
ಬಾಳುವೆಣ ಮಲಗಿದೊಡಲ್;
ಮನಕೆ ಮಾತ್ರ, ಸಿಡಿದ ಸಿಡಿಲ್.
    ಮನವೆ ಬಾನು
    ಮನವೆ ಮಿಂಚು
    ಮನವೆ ಮಳೆ
    ಮನವೆ ಕಣ್ಣು
    ಮನವೆ ಮೆಯ್ಯಿ–
ಮನ ಕಂಡಿತು ಮನ ಕೇಳಿತು
ಮನ ಹೊಯ್ದಿತು ಮನ ತೊಯ್ದಿತು
ಎಲ್ಲವೂ ತಾನೆ ಮನ–
ನೀಗಲಿಲ್ಲ ತನ್ನತನ.
ಚಿತ್ತದೊಳೇ ಸಿಡಿಲು, ವೃಷ್ಟಿ–
ಚಿತ್ತದೊಳೇ ಜಡದ ಸೃಷ್ಟಿ.
ಆ ಪರಾತ್‌ಪರಮ ಚಿತ್ತ–
ಚಿರ ಚೇತನ, ಸದಾ ಸುಪ್ತ–
ಕಂಡ ಕನಸೊ ಈ ಸಮಸ್ತ
ಕಾಂಬ ಸೃಷ್ಟಿ: ಚಿತ್ತೆ ಸತ್ಯ.

೧೯೫೫]

# ನಂಬಿಕೆಯೆ ಸತ್ಯ

(೧೯೫೪ರ ಕುಂಭಮೇಳವನ್ನು ಕುರಿತು)

೧

ಎಂದಿನಂತೆ ನೆರೆಯಿತು ಪ್ರಯಾಗದಲ್ಲಿ ಕುಂಭಮೇಳ:
ಗಂಗೆ ಯಮುನೆ ಸರಸ್ವತೀ ಸಂಗಮ ಸುಪವಿತ್ರವಲಾ,
ಈ ತ್ರಿವೇಣಿಯಲ್ಲಿ ಮಿಂದು ಪಾಪ ತೊಳೆವ ಹಂಬಲ
ಜನಕೆ ಸಹಜ; ಜೊತೆಗೆ ಕುಂಭ; ನೆರೆಯಿತು ಜನಜಾಲ.
ದಿಕ್ಕು ದಿಕ್ಕು ದಿಕ್ಕಿನಗಲ ಹರಡಿದ ಈ ಜನದ ಕಡಲ
ಒಡಲ ತೊಳೆದು ಪಾಪ ತವಿಸೆ, ಉಕ್ಕುವಳೋ ಗಂಗೆ–
ತಾಯಿ ಕೃಪಾತರಂಗೆ.

ತಣಿಯದು ಜನ: ಬರುವುದೆಂತೊ ಅಮಲ ಪುಣ್ಯ,
ಹರಿವುದೆಂತೊ ಪಾಪದ ಮಲ;
ನಂಬಿಕೆಯೇ ತೀರ್ಥಾಂಬು;
ನಂಬಿ, ಪೂತ ಗಂಗಾಜಲ.
ಇಲ್ಲ ಪಾಪ–ಪುಣ್ಯವಳೆವ ಸೂಕ್ಷ್ಮದರ್ಶಕ;
ಇಲ್ಲವೆಂಬನಾಧುನಿಕ, ವೈಜ್ಞಾನಿಕ–ವಿಮರ್ಶಕ.
ಬಲ್ಲೆವೆಂಬ ಜನಕೆ ನೀರ ಮುಳುಕು ಪರಮ ಅಜ್ಞಾನ.

೨

ದ್ವಾದಶವರ್ಷಾಪೂರ್ವಸ್ನಾನಕೆ ನೆರೆಯಿತ್ತು ಜನ:
ಜ್ಞಾನಲಭ್ಯ ಮೋಕ್ಷಕೆ ಸಮವೀ ಗಂಗಾಸ್ನಾನ.
ನೆರೆಯಿತು ಜನಜಾಲ; ನೆರೆಯಿತು ಜಗದಗಲ;
ನೆರೆಯಿತು ಮೊರೆಯಿತು ತಲೆತಲೆ–ಅಲೆಅಲೆ–ಕಡಲಾಗಿ–
ಬಂದಿತಂತೆ ಬಂದಿತಂತೆ ಮಹಾನಾಗ ಸಾಧುಸಮೂಹ:
ಸಾಕ್ಷಾದೀಶ್ವರರೂಪೀಸಾಧುದರ್ಶನ
ಸ್ನಾನದನಿತೆ ಪುಣ್ಯವೆಂದು ನಂಬಿತೀ ಜನ:
ಹೊರಳಿತು ಜನಕಡಲೀ ಕಡೆ, ತೊರೆಯುತ ಮೀಹ:
ಯಾವುದೀ ಸಮುದ್ರವನ್ನಣೆಯಬಲ್ಲ ಸಾಧನ?
ಉಕ್ಕಿಬಂದ ಭಕುತಿಕಡಲ ಮುಕ್ಕುಳಿಸುತ ಸಾಧುಕಲ

ತಾನು ಬದುಕಬಾರದೆ?
ಕಂಡಿತು ಜನಜಾಲ
ಸಾಲಿನ ತ್ರಿಶೂಲ!
ಬೆದರಿತು ಜನ, ಚೆದರಿತು ಜನ!
ಕಡಲಲ್ಲ, ಕಡಲಲ್ಲ–ಮೂಕಮಂದೆ ದನ, ದನ!
ತುಳಿಯಿತಯ್ಯೊ ತಾನು ತನ್ನ....
ಹೆಣ್ಣುಮುದುಕ ಮಕ್ಕಳು
ಚಣಕೆ ಯಮನ ಒಕ್ಕಲು!

೩

"ಏನಿದೀ ಮೌಢ್ಯ, ಜನಕ್ಕಿಲ್ಲ ಬುದ್ಧಿ.
ಶುದ್ಧ ಅಜ್ಞಾನಿಗಳು, ಯಾರು ಬರಹೇಳಿದರು?
ಬಂದು ಗಂಗೆಯಲಿ ಮೀಯಲಿಕೆಂದು ಕೊಂದುಕೊಂಡರು ತಮ್ಮ ತಾವೆ–
ಸ್ನಾನಮಾಡಿಹರಾಗಿ, ಸಗ್ಗ ಸಿಕ್ಕಿರಬಹುದು,
ಹಗ್ಗವಿರಲಿಲ್ಲವೇ ಮನೆಯೊಳಗೆ, ಬಾವಿ? ಅದುವೂ ಗಂಗೆ!
ಮುಳುಗದೆಯೆ ಮಡಿಯುವುದೆ? ಮುಳುಗಲೊಳ್ಳಿತಲಾ!
ಹಣತೆತ್ತು ಬರಬೇಕೆ ಹೆಣವಾಗಲಿಲ್ಲ?
ಹೊಣೆ ಯಾರು? ಪೌರಸಭೆಯಲ್ಲ; ಸರಕಾರವಲ್ಲ.
ಅಜ್ಞಾನ ಮೌಢ್ಯವವಿವೇಕವಿದಕೆ ಹೊಣೆ–
ಬಿಟ್ಟೇಕೆ ಬರಬೇಕು ತಮ್ಮೂರು ಮಠಮನೆ?
ಮೊದ್ದುಗಳು ಪೆದ್ದುಗಳು ಜನಕಿಲ್ಲ ಬುದ್ಧಿ."
–ನಿರ್ಣಯಿಸಿತೀ ರೀತಿ ಬಲ್ಲ ಮಂದಿ.

೪

ದಿನದಿನವು ಬಹುದು ಪತ್ರಿಕೆಯ ಬಿಸಿಬಿಸಿ ಸುದ್ದಿ:
'ರೈಲುರುಳಿ ಮಡಿದರಿನ್ನೂರೊಂದು ಮಂದಿ–
ಬಿದ್ದಿತು ವಿಮಾನ 'ಎಂಜಿನ್' ಸುಟ್ಟು, ಸತ್ತವರ ಲೆಕ್ಕ ಸಿಕ್ಕಿಲ್ಲ.
ಬಸ್ಸಿಗೂ ಲಾರಿಗೂ ಢಿಕ್ಕಿ; ಮೂವರ ಗಾಯ ಉಳಿದರ ಸ್ಥಿತಿಯಪಾಯ.
ಇತ್ಯಾದಿ ಇತ್ಯಾದಿ–ಬಿಸಿಬಿಸಿಯ ಸುದ್ದಿ.

ಯಂತ್ರನಿರ್ಮಾಪಕರು ಬಹು ಬುದ್ಧಿವಂತರು, ತಲೆಯೆಲ್ಲ ಬುದ್ಧಿ;
ಕಾರ್ಯಾರ್ಥಿ ಪಯಣಿಗರು ಬುದ್ಧಿವಂತರ ಬಾಲ.
ಇವರ ಸಾವಿಗೆ–ಮೌಢ್ಯ ಕಾರಣವೆ? ಅಲ್ಲ.
ಅಜ್ಞಾನ ಕಾರಣವೆ? ಅಲ್ಲ, ಖಂಡಿತ ಅಲ್ಲ.
ಯಾರು ಹೊಣೆ? ಬುದ್ಧಿವಂತರೆ ಎಲ್ಲ.
–ವಿಜ್ಞಾನಿ ಬಲ್ಲ!

೫

ಪರಮ ವಿಜ್ಞಾನಿಗಳ ಪರಮ ಸಂಸಿದ್ಧಿ
ಫಲಿಸಿತಣುಬಾಂಬಾಗಿ ಹತ್ತು ವರ್ಷದ ಕೆಳಗೆ:
ಯುದ್ಧವನು ನಿಲಿಸಿ ಶಾಂತಿಯನು ನೆಲೆಗೊಳಿಸೆ
ಲಕ್ಕ ಲೆಕ್ಕದ ಮಂದಿ–ನಿರಪರಾಧಿ–
ವಿಜ್ಞಾನದೇವತೆಗೆ ಮಹಮಹಾ ನೈವೇದ್ಯ:
ಯುದ್ಧ ನಿಂತಿತು–ಅದೇ ಪ್ರತ್ಯಕ್ಷ ಪುಣ್ಯ
ಗಂಗೆಮೀಹದ ಪುಣ್ಯ–ಕಾಣಲಾಗದ ಶೂನ್ಯ
ಅಜ್ಞಾನದುದಧಿ,
ಮೌಢ್ಯ ಪರಮಾವಧಿ!

೬

ವಿಜ್ಞಾನಿಯೇನೆಂಬ?–
'ನಂಬುವೆಯೊ ಕುಂಭ?
ನೀಶುದ್ಧ ಶುಂಭ.'
–ಇದು ಅವನ ಜಂಭ.
ಕುಂಭಭಕ್ತನ ಕೇಳೆ–
ಅವನದೇನೆಂಬ?
'ನಂಬಿಕೆಯೆ ಸತ್ಯ:
ನಂಬಿಕೆಯೆ ಬಾಳ್ತುಂಬ;
ಕಣ್‌ಕಾಣ್ಕೆ ಮಿಥ್ಯ'.

# ಎಲ್ಲಿಂದೆಲ್ಲಿಗೆ!

೧

ಬಳ್ಳಿಯ ಬೇರ್ ಬಿಸಿಲಿಲ್ಲದ ಬೆಳಕಿಲ್ಲದ ನೆಲದಾಳದಲಿ;
ಕವಲುಕವಲು ಕುಡಿಯೆಲ್ಲೆಡೆ ಮೇಲ್ಗಡೆ,
ಕುಡಿಯೆ ಗಾಳಿ, ಮೀಹಕೆ ಬಿಸಿಲು;
ಎಲೆಯೆಲೆಗೂ ತೊಂಗಲು–ಹೂಗಳು–ಮುಗುಳು.
ನೆಲಗರ್ಭದ ಮೌನತಪಸ್ಸಿನ ತ್ಯಾಗದ ತಾಯ್‌ಬೇರು
ಅಡಗಿಹುದೊಳಗಡೆ:
ಹೂವಿನ ತವರು.
ಜೀವನದ ಸೆಲೆ ಆ ತುದಿಯಲ್ಲಿ;
ಜೀವನದ ಕಲೆ ಈ ತುದಿಯಲ್ಲಿ.
ಅದನಿದಕೊಯ್ಯುವ ಬಲು ದೂರದ ವಿಸ್ತಾರದ ಬಳ್ಳಿ!
ಎಲ್ಲಿಂದೆಲ್ಲಿಗೆ!

೨

ಇಲ್ಲಿದೊ ಹೂಹಸುಳೆ
ತಾಯ ತೊಡೆಯ ಮೇಲೆ:
ಬಳವಿಯ ನಂಟಿನ ಹೊಕ್ಕುಳ ಬಳ್ಳಿ ಬೇರ್ಪಟ್ಟಿರಲು
ಒಲವಿನ ಕಾಣದ ಬಳ್ಳಿಯೊಳರಳುತ್ತಿದೆ ಮಗು–ಮುಗುಳು.
ಒಲವುಕ್ಕುತ್ತಿದೆ ಪಾಲಾಗಿ,
ತಾಯ್ತನ ತಾನೇ ಪಾಲಾಗಿ,
ಬೇರೊಣಗುತ್ತಿದೆ ಹೂವರಳಲಿಯೆಂದು;
ಬಳ್ಳಿ ಬಾಡುತಿದೆ ಹೂ ಕಾತು, ಹಣ್ಣಾಗಲಿಯೆಂದು;
ಒಣಗಿ, ಬಾಡಿ, ಸಾಯದು ತಾಯ್‌ಬಳ್ಳಿ;
ಬದುಕಿರುವುದು, ಹೂತು ಕಾತು ಹಣ್ಣಾಗಿಹ ಸಂತಾನದಲಿ.
ಈ ತಾಯ್‌ಬಳ್ಳಿಯ ಬೇರೆಲ್ಲಿ?
ಬತ್ತಿ ಸತ್ತಿರದ ಆ ಬೇರೆಲ್ಲಿ?
ಎಲ್ಲಿಂದೆಲ್ಲಿಗೆ?

೩

ಇಲ್ಲಿದೊ ಈ ಇಳೆ:
ಜೀವದ ತೊಟ್ಟಿಲೆ
ತಾನಾಗಿ,
ತೋರಲು ಜೀವ–ಜಡದ ಏಕ್ಯೈಕದ ಲೀಲೆ
ಸೂರ್ಯಚಂದ್ರನಕ್ಷತ್ರ ಮಂಡಲದ ನಿತ್ಯರಾಸದಲೆ,
ಎಲ್ಲವನೂ ಲಯಬಂಧದೆ ಬಿಗಿಹಿಡಿದಿರೆ ಕಾಣದ ಒಂದೇ ಸೆಳೆ–
ಆವರ್ತನಬಲೆ, ದೇಶಕಾಲಸ್ಥಿತ್ಯಾತ್ಮಕದೊಳ ಎಳೆ–
ಹುಟ್ಟಿತೊ ಈ ಇಳೆ ಆ ಎಲೆ ಹಿಡಿದು, ವಿಶ್ವದ ಬಸಿರಿನಲಿ–
ಬಳ್ಳಿಯ ಹೂವಿನೊಲೆ,
ತಾಯಿಯ ಮಗುವಿನೊಲೆ.
ನನ್ನ ನಿನ್ನ ಈ ಚೆಲು ಇಳೆಯಿಲ್ಲಿ:
ವಿಶ್ವದ ತೊಟ್ಟಿಲಲಿ.
ಎಲ್ಲೋ ಕಾಣದ ತಾಯ್‌ಬೇರು–ಆ
ತಾಯಿ–ತಂದೆ–ಗುರು!
ಎಲ್ಲಿಂದೆಲ್ಲಿಗೆ?

೨೨–೩–೫೫]

## ಆಗು ಬೆಳಕ ಚುಕ್ಕಿ

ಲಕ್ಷಲಕ್ಷ ದಶಲಕ್ಷ ಕೋಟಿ ಕೋಟ್ಯಂತರ ಲಕ್ಷಿತ
ಸೌರಮಂಡಲ ಗ್ರಹ ತಾರಾ ನೀಹಾರ ಪರಿವಾರ ವಿಶ್ವಸಂಪುಟದಿ
ಮಾನವನ ಸ್ಥಲವೀ ಭೂಮಂಡಲವೇನೆಂದರಿವೆ?
ಬರಿ ಚುಕ್ಕಿ!
ಭೂಂ ಭೂಮ ಭೂ ಮಂಡಲದಲ್ಲಿ
ನೀನೋ?
ಕೇವಲ ಕಿಕ್ಕಿರುಚುಕ್ಕಿ!
ಬೆಳಗುವ ತೊಳಗುವ ಬಲು ದೂರದ ಆ ಚುಕ್ಕಿಗಳು
ಬಲು ನಿಡುಗಾಲದ ಬೆಳಕಿನ ಬಳುವಳಿಯಾಂತು

ಅನಾದಿ ಬಸುರೊಳಗನಂತ ಸತ್ತ್ವವ ಹೊತ್ತು
ಯುಗ ಯುಗದಾಚೆಗೆ ಬೆಳಕನು ನೀಡಿ
ಖಗ ಖದ್ಯೋತಗಳೆನಿಸಿ
ನಿಯತಿಯ ಗತಿ ಗಂತವ್ಯದೊಳನುಗೂಡಿ
ಅಶ್ರುತಗಾನವ ಪಾಡಿ, ಪಾತ್ರವನಾಡಿ
ತೋರುವ ಭವ್ಯಮಹೋನ್ನತ ಲಯ ವಿನ್ಯಾಸದಲಿ
ನಿತ್ಯಜ್ಯೋತಿಃಪಟಲದಲಿ
ನೀನೇನು?
ಕೇವಲ ಮಸಿ ಚುಕ್ಕಿ!
ಬೆಳಕಿನ ಬರಹದ ಸಾಲಲಿ ಕಾಣದೆ ಮುಳುಗಿಹ
ಮಸಿ ಚುಕ್ಕಿ;
ಕಂಡೊಡನೆಯೆ ಕಣ್ಮರೆಯಾಗುವ ಚುಕ್ಕಿ!
ಏತಕೆ ಮೆರೆಯುವೆ ಸೊಕ್ಕಿ?
ಮೆರೆಯುವೆ ಕುಣಿಯುವೆ ಹಾರಾಡುವೆ ನೆಗೆಯುವೆ
ದಡದಡ ಧುಮ್ಮಿಕ್ಕಿ?

ಚುಕ್ಕಿಯನೇ ಮುಕ್ಕುವ ರಕ್ಕಸನ
ತುಳಿತಕೆ ಸಿಕ್ಕಿದ ನೀ ಕೀಟ;
ತಿಕ್ಕಿತೀಡುವನು ಕಣ್ಣ ಮಿಟುಕಿನಲಿ–
ಏತಕೆ ಈ ಪರೆದಾಟ?

ಮಂಗಳದಂಗಳಕೇರಿದರೇನು,
ಚಂದ್ರ ನನ್ನೆ ಸೃಜಿಸಿದೊಡೇನು?
ಕಂಗಳ ಮುಚ್ಚುವೆ, ಕತ್ತಲೆ ಕಡಲೊಳ–
ಗಾಳುವೆ,–ನಗುವನು ಭಾನು.

ಅಣುವ ಸೀಳಿಯದ್ಭುತವನು ಗೈದುದ್–
ಭೂತಮಾಡಿರುವೆ, ಎಲೆ ಚದುರ,
ಕುಣಿಯುವ ಮೋಹಿನಿಯನ್ನವಳೊಲಿಯೆ
ಕುಣಿವೆ ಮಣಿವೆ ಭಸ್ಮಾಸುರ!

ಭಯ ಭೀತನಾಗು ನಯ ನೀತನಾಗು
ವಿಶ್ವದತುಲದೆದುರು;
ಲಯಹಿಡಿದು ವಿಶ್ವಮಯನಾಗು, ನಿನ್ನ
ಕತ್ತಲೆಕೆಳೆಯನು ನೀಗು.

ಬೆಳ್ಳಂಬೆಳಕಿನ ಚುಕ್ಕಿಯ ಕಡಲಲಿ
ಆಗು ಬೆಳಕ ಚುಕ್ಕಿ:
ಸುಳ್ಳಿನ ಕತ್ತಲೆ ಮುತ್ತಿರಲೇನು?
ಹೊಳೆಹೊಳೆಯುವೆ ಉಕ್ಕಿ.

೪–೧೨–೧೯೫೭]

## ಮೇಘ ಲಿಂಗ

೧

ನೋಡ ನೋಡುತಿರೆ ಬಾನ ಬಯಲಿನಲಿ
ಮೂಡಿತೊಂದು ಲಿಂಗ:
ಕೂಡೆ ನನ್ನ ಬಗೆಯರಳಿ ಹೂವಾಗಿ
ಹೊಂದಿತದರ ಸಂಗ.
ಎಂದು ಕಾಣದಿಹ ನೋಟ ಕಂಡೆನ್ನ
ಹೃದಯ ಹಿರಿದು ಹಿಗ್ಗಿ
ಒಂದೆ ಭಾವದಲಿ ಮಿಂದು ಮುಳುಗಿರಲು
ಆಯ್ತು ನಲಿವ ಸುಗ್ಗಿ.

೨

ಏನು ಲಿಂಗವುತ್ತುಂಗ ಶಿಖರದೊಲು
ಬಾನ ನೆತ್ತಿ ಮುಟ್ಟಿ
ಭಾನುತೇಜಃಪ್ರಭಾವಳಿಯ ತಳೆದು
ಪೃಥ್ವೀಪೀಠ ಮೆಟ್ಟಿ
ದೆಸೆಯ ಕೊನೆಗಳನೆ ತಾಕಿ ಸರ್ವಕ್ಕೆ

ಸ್ವಾಮಿಯೆನಿಸಿ ನಿಂದು
ಎಸೆಯಿತೆದುರಿನಲಿ ಮೇಘಲಿಂಗವದು
ನನ್ನ ಕಣ್ಣ ಮುಂದು.

೩

ಅಂತೆಯಾಕ್ಷಣವೆ ಬಾನುಗೆಂಪಿನೆಡೆ
ಬಾಲಚಂದ್ರಮೂಡಿ,
ಕಂತುಹರನೆ ಕೆಂಜಡೆಯ ನಡುವೆಯೆನೆ
ಲಿಂಗವವನ ಸೂಡಿ
ಮೆರೆಯುತಿರಲು, ನಕ್ಷತ್ರನೂರರಳಿ
ಮೇಲೆ ಮಾಲೆಯಾಗಿ
ಪರಮಲಿಂಗಕರ್ಚನೆಯ ಗೈಯಿತಿರೆ
ನಿಂತೆ ಶಿರವ ಬಾಗಿ.

೪

ಬಾಗಿ ಶಿರವ ಕಣ್ಮುಚ್ಚಿ ಮೈಮರೆತು
ನಿಂತೆ ಚಣದ ಕಾಲ;
ಹಾಗೆ ಕಣ್ಣಿಡಲು ಹೀಗೆ ಮುಸುಕಿತ್ತು
ಸುತ್ತ ತಿಮಿರಜಾಲ.
ಚಣದ ಹಿಂದಣನುಭವದ ನೆನಪಿನಲಿ
ನಿಂತೆ ಭ್ರಾಂತನಾಗಿ:
ನಾನು ಬಾನು ನನ್ನಂಗ ಲಿಂಗ ತಾ–
ಮೆಲ್ಲವೊಂದೆಯಾಗಿ
ಧ್ಯಾನದಲ್ಲಿ ಚಿನ್ಮಯತೆವಡೆದಿತ್ತು
ದ್ವೈತಭಾವ ನೀಗಿ.
ನನ್ನ ಎಚ್ಚರವೆ ತಿಮಿರವಾಯ್ತಲಾ,
ಎಲ್ಲವಳಿಸಿಹೋಗಿ.

೫

“ಧ್ಯಾನದಲ್ಲೆ ನಿಂತಿರುವ ಶಕ್ತಿಯಿದೆ
ಸ್ಥೂಲಮಿರದೊಡೇನು
ನೀನೆ ಅದರಲ್ಲಿ ಅದುವೆ ನಿನ್ನಲ್ಲಿ
ಸೂಕ್ಷ್ಮ ತಾನೆ ತಾನು.
ನಿನ್ನ ಪುಣ್ಯದಿಂದಾದ ದರ್ಶನವು
ಕಣ್ಗೆ ಮೇಘಲಿಂಗ:
ಕಣ್ಣಮುಚ್ಚಿಯನುದಿನವು ನೆನೆಯುತಿರೆ
ಅಪ್ಪುದಾತ್ಮಲಿಂಗ.
ಕಣ್ಣ ಬಿಟ್ಟೆಯೇತಕ್ಕೆ ಮೂಢ ನೀ
ಧ್ಯಾನವನ್ನು ತೊರೆದು?
ಚಿಣ್ಣ! ಕೊರಗದಿರು: ಇಲ್ಲ ಸಾಧನೆಯೆ,
ಇನಿತೆ ನಿನಗೆ ಹಿರಿದು.
ಕಣ್ಣ ಬಿಟ್ಟು ನಡೆ; ಕತ್ತಲಾಗಿಹುದು;
ದಾರಿ ದೂರ ಮನೆಗೆ;
ಹಣ್ಣು ತಿರುಗೆ ಹೃದಯಕ್ಕೆ ಕಾಲವಿದೆ,
ಅಪ್ಪು ದೊಮ್ಮೆ ಕೊನೆಗೆ.
ತತ್ತ್ವವಿಂತಿಹುದು; ಭ್ರಾಂತಿಯೇತಕ್ಕೆ?
ಕಾಯ್ವುದೊಳಿತು”– ಎಂದು
ಲತ್ವದಾಕಾರದೊಡಲ ನೀಗುತ್ತ
ಕಾಣದಾದನಿಂದು.

೬

ಬಾರ ಬಾರ ಮನ್ಮನೋಮಂದಿರಕೆ
ಬಾರ ಮೇಘಲಿಂಗ;
ತರ ತೋರ ನಿನ್ನಿರವ, ಮಾಡದಿರು
ಆಶೆಗೆನ್ನ ಭಂಗ.
ಮಿಂಚುಮಾಲೆಯನೆ ಧರಿಸಿ ನಿಲ್ಲಯ್ಯ
ಮನೋಗಗನದಲ್ಲಿ;

ಪಂಚಭೂತಯುತ ದೇಹ ಜಡದಲ್ಲಿ
        ನಿನ್ನ ಚೇತ ನಿಲಲಿ.
ಮೊಳಗಿಸಯ್ಯ ವಿಶ್ವಾತ್ಮಘೋಷವನು
        ಅಂತರಂಗದಲ್ಲಿ;
ಬೆಳಗು ಬೆಳಗು ನುಡಿಮಿಂಚ ಹರಿಸಿ ಮದ್-
        ಭಾವರಂಗದಲ್ಲಿ.
ಸುರಿಸು ಆನಂದ ವರ್ಷ ತುಂದಿಲವ
        ನನ್ನ ಬಾಳ ವನಕೆ;
ಅರಳಿಸಯ್ಯ ನನ್ನಾತ್ಮ ಪುಷ್ಪವನು;
        ಅರ್ಪಿಸುವೆನು ನಿನಗೆ.
ವ್ಯಕ್ತನಾಗಿ ಅವ್ಯಕ್ತನಾಗಿ, ಸು-
        ವ್ಯಕ್ತನೆನಿಸು ನನ್ನ,
ವ್ಯಕ್ತನಾಗಿ ಅವ್ಯಕ್ತನಾಗಿ ನಾ
        ಹೊಂದುವಂತೆ ನಿನ್ನ.

## ಕಲ್ಲಡಿಯ ಹುಲ್ಲುಗರಿಕೆ

ಕಲ್ಲಡಿಯ ಹುಲ್ಲುಗರಿಕೆ:
ಅದಕಿಲ್ಲ ಹೆದರಿಕೆ
ಮೇಲೆ ಕೊಲೆಕುಳಿತ ಚಪ್ಪಡಿಯ
                ಭಾರವಪ್ಪಳಿಸುತಿದೆಯೆಂದು.
ಕತ್ತಲೆಯ ಗೋರಿಗವಿ ಸಂದುಬಾಯಿಂದ
ಹೊರಹಾಕಿಹುದು ಕಲೆಯ- ತನ್ನ ಹೊಸ ಬೆಳೆಯ
                ಎಳೆಯ ಎಲೆಯ ತಲೆಯ:
ಏನದರ ಧೈರ್ಯ ಶೌರ್ಯ!
ಅದ ಮೆಚ್ಚಿ
ಬದುಕೆಂದು ಹರಸಿದನು ಸೂರ್ಯ,
ತುಂಬಿದನು ಆಯುಷ್ಯ,
ಅಪ್ಪುಗೆಯ ಬಿಸುಪಿತ್ತು;

ಗಾಳಿ, ಬಾಳಿನ ಗೆಳೆಯ,
ಬಂದು ತಡವಿದ ಮೈಯ,
ಹೊಸ ಉಸಿರನಿತ್ತು.
ಮೈಯೊಲೆದು ತಲೆಕೊಡಹಿ
ನಿರ್ಭಯತೆಯಲಿ ನಲಿಯುತಿದೆ ಹುಲ್ಲುಗರಿಕೆ:
ಅದಕಿಲ್ಲ ಹೆದರಿಕೆ.
ಅಹುದು, ತೇನ ವಿನಾ ತೃಣಮಪಿ ನ ಚಲತಿ–
ಆದರೆ–
ಬಿದ್ದಾಗಲೆದ್ದು ನಿಲ್ಲುವ ಯತ್ನವಿಲ್ಲದಿರಲವನೂ
ಹಿಡಿಯ ಮೇಲೆತ್ತಿ.

೩–೩–೧೯೫೮]

## ನೂರು ಹೂವು ಅರಳಲಿ

ನೂರು ಹೂವು ಅರಳಲಿ
 ಒಂದೆ ವನದಲಿ;
ನೂರು ಹಕ್ಕಿ ಉಲಿಯಲಿ
 ಒಂದೆ ಮರದಲಿ.
ಅರಳುವ ಹೂವನು ಕಂಡು
 ಹಕ್ಕಿ ಹಿಗ್ಗಲಿ;
ಹಕ್ಕಿಯ ದನಿ–ಹನಿ–ಮಳೆಯಲಿ
 ಹೂ ಕಂಪಿಡಲಿ.
ಅದಕೆ ಇದು, ಇದಕೆ ಅದು,
 ಒಂದೊಂದಕ್ಕಾಸರೆ;
ಮನವೊಂದೇ, ತನುವೊಂದೇ,
 ನುಡಿತ ಮಿಡಿತ ಬೇರೆ.
ಬಗೆ ಬಗೆ ದನಿ ಬಣ್ಣಕೆ, ದಿಟ,
 ಒಂದೆ ಆಕರ;
ಅವನೊಂದೆನಿಸುವ ಜೀವದ

ಕೊಎಲ ಭಯಂಕರ.
ಜೀವ ಹೂವು ಹಕ್ಕಿಗಳಲಿ
ನೂರು ಮೆರೆಯಲಿ;
ಸಾವ ಸೊನ್ನೆ ನಿಬ್ಬಯಲಲಿ
ಏಕವಾಗಲಿ.
ಏಕವನೇಕದಲಿ ತೋರೆ
ಅದೇ ಜೀವನ–
ನೂರು ಬಣ್ಣ ನೂರು ಕೊರಲು
ಕೆಲಯೆ, ಚೆಲುವು ವನ.
ನೂರು ಅರಳು ನೂರು ಕೊರಲು
ನೆರೆಯೆ ನಂದನ;
ಏಕೆ ಬೇಕು? ಸಾಕು ನೂಕು
ಏಕತ್ವದ ಬಂಧನ
ಬಣ್ಣವೊಂದೆ– ಗೋಡೆಸುಣ್ಣ,
ಕರಿಮೋರೆಯ ಸಾದು;
ನೂರು ಕಾಗೆ ಸೇರಿ ಕೂಗೆ
ಗಾನವಾಗದು.
ಹೂವು ನೂರಕಿರಲಿ ನೂರು
ಬಣ್ಣದ ಮೆರುಗು;
ಹಕ್ಕಿಗಿರಲಿ ಹಲವಿಂಚರ
ತೋರುವ ಬೆಡಗು.
ಕಾಗದ ಹೂವಲ್ಲ–ಸದಾ
ಮೆರೆಯೆ ಧೂಳು ತುಂಬಿ;
ಭೋಗದ ಹೂ ಮಕರಂದದ,
ಬಂದು ಕುಡಿಯೆ ತುಂಬಿ.
'ಲೆಟ್ ಎ ಹಂಡ್ರೆಂಡ್ ಫ್ಲವರ್ಸ್ ಬ್ಲೂಮ್'
ಒಂದೆ ಹೂ ಬನದಲಿ;
ವಿವಿಧ ವರ್ಣ ರೂಪವಿರಲಿ
ಒಂದೆ ಹೂ ತನದಲಿ.

# ನಿನ್ನನೆ ನೀ ಗೆಲ್ಲು

೧

ಎಂದಿಗೆ ನಿಲ್ಲುವುದೀ ವೈಷಮ್ಯ?
ಇರಲಿ ದೇವತ್ವ;
ಸೇರ್ವೆವೆಂದು ಮಾನವತೆಯ ಗಮ್ಯ?
ದೂರ ದೂರ ಗುರಿ,
ಬಲು ದೂರ.
ಗುರಿ ಮುಟ್ಟಲು ಬೆಲೆ?
ಅಪಾರ, ಅಪಾರ!
ಇಲ್ಲವೊ ನಿಸ್ತಾರ?

೨

ಸತ್ಯಕೆ ಪ್ರೇಮಕೆ
ನಿತ್ಯ ನೆಮ್ಮದಿಗೆ
ಕಾಣುವ ದೇವಗೆ
ಕಾಣದ ಕೈವಕೆ
ಭಕ್ತಿಗೆ ಮುಕ್ತಿಗೆ
ಯುಕ್ತಿಗೆ ಯುಕ್ತತೆಗೆ
ಒಂದೇ ಸಿದ್ಧಿಗೆ
ಒಂದೇ ಋದ್ಧಿಗೆ
ನಡೆದರೆಲ್ಲರೊಂದೇ ದಾರಿ,
ಒಂದೇ ಒಂದೇ ಅವರೆಲ್ಲರ ಗುರಿ:
ದೇಹವನರ್ಪಿಸಿ,
ರಕ್ತವ ತರ್ಪಿಸಿ,
ಶಿಲುಬೆಯ ಹೊತ್ತು
ಪ್ರಾಣವ ತೆತ್ತು
ದುಡಿದರು ಮಡಿದರು ಕೆಡೆದರು ಪಡೆದರು
ಭಕ್ತವೃಂದ ಕೋಟಿ;

ಹಿಂದುಳಿಯುವ ಹಿಂಬಾಲಕತನದಲಿ
ಇಲ್ಲ ನಮಗೆ ಸಾಟಿ!
ದಾರಿಯ ನಡೆಯದೆ ಗುರಿಯನು ಮುಟ್ಟುವ
ವಚೋನಿಷ್ಠ ಬುದ್ಧಿ!
ಸಾರಿಬರುವುದೇ ಪಥಚ್ಯುತರೆಮಗೆ
ಕ್ರಿಯಾಲಬ್ಧಿ ಸಿದ್ಧಿ!

೩

ಹಣ್ಣಿಗಾಗಿ ಹಾತೊರೆಯುವೆವು,
ಬಿತ್ತಿದ ಮೊಳಕೆಯ ಕಿತ್ತು;
ಭೀಮಸಾಹಸವ ಮಾಡುವೆವು,
ಬೆಟ್ಟಕೆ ಕಲ್ಲನು ಹೊತ್ತು.
ದೇವಪ್ರತಿಮೆಗೆ ಪೂಜೆಮಾಡುವ
ಪೂಜಾರಿ ನಮಗೆ ಮಾನ್ಯ;
ಭಾವ ತುಂಬಿ ಕಲ್ಲನು ಕಡೆದಿಟ್ಟ
ರೂವಾರಿ ನಮಗೆ ಶೂನ್ಯ.
ಎಲ್ಲರು ಸಮವೆಂದೆಂಬ ಮಂತ್ರಗಳ
ಹೊಸಹೊಸ ಪರಿ ಉದ್ಘೋಷಿಸುತ
ಸೊಲ್ಲಿನ ಸವಿ ಮಂಟಪದಲಿ ಮೈಮರೆ–
ವೆವು ಆತ್ಮವ ವಂಚಿಸಿಕೊಳುತ.
ಇಂದ್ರಲೋಕಕ್ಕೆ ಪಯಣದ ಬೆಳಸೆ
ಎನಿತೋ ಆದುವು ಯುಕ್ತಿ;
ಚಂದ್ರಲೋಕಕ್ಕೆ ಹಾರಹೊರಟಿಹೆವು,
ಇಂತಾಯಿತು ಮಾನವ ಶಕ್ತಿ!
ಏನೋ ಹುಡುಕು, ಏನೋ ಬೆದಕು,
ನೀರಸವಾಯಿತೆ ಬದುಕು?
ಮಕ್ಕಳ ಮುದುಕರ ಕೊಲ್ಲಹೊರಟಹರು;
ಅಗ್ಗವಾಯಿತೇ ಬದುಕು?

೪

ಒಲವಿನ ತಿಂಗಳ ಲೋಕಕೆ ಹಾರು,
ಹಗೆತನ–ಕತ್ತಲೆ ಗೆಲ್ಲು;
ಆತ್ಮನನಂತಾಕಾಶಕೆ ಏರು,
ತಾಯ್ನೆಲದಲೆ ನಿಲ್ಲು!
ಗೆಲ್ಲು ಮಾನವ, ಗೆಲ್ಲು ಮಾನವ,
ನಿನ್ನನೆ ನೀ ಗೆಲ್ಲು–
ಜೀವನವಾಗಲಿ ನಿತ್ಯ ನವೋನವ,
ದೇವಪದದಿ ನಿಲ್ಲು.

೨೦–೧–೧೯೫೮]

## ಕೊಟ್ಟು ಬದುಕು

೧

ನೀನಿಲ್ಲದೆ ನೆಲವಿಲ್ಲ.
ನೆಲವಿಲ್ಲದೆ ನೀನಿಲ್ಲ:
ಆದರೇನು? ನಿಂತ ನೆಲ, ನಿನ್ನದಲ್ಲ ನಿನ್ನದಲ್ಲ.
ನಿನ್ನವೆಷ್ಟು ಮೂಟೆಗಾಳಿ, ನಿನ್ನವೆಷ್ಟು ಕುಡಿತೆ ಜಲ?
ಏಕೆ ನೆಲ ನೆಲ ಎಂಬ ದುರ್ಯೋಧನಚ್ಛಲ?
ಈಶಾವಾಸ್ಯಮಿದಂ ಸರ್ವಂ
ಯತ್ ಕಿಂಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾಃ
ಮಾಗೃಧಃ ಕಸ್ಯಸ್ವಿದ್ಧನಂ.
ನನ್ನದು ನಿನ್ನದು ಎಲದಲರದೀ ನೆಲ ಜಲ ಬಾನು ಬಯಲು
ಎಲ್ಲರದೆಲ್ಲವದೆನ್ನುತ ಕೂಡಿ ಬದುಕೆ ಸುಗ್ಗಿ ಕುಯಿಲು.

೨

ಅಹುದು ವರುಷಕ್ಕೊಮ್ಮೆ ಹೊಲಗದ್ದೆ ಕುಯಿಲು–
ಬೆಳೆವ ಕೈ ಬೇರೆ ತಿನ್ನುವ ಹೊಟ್ಟೆ ಬೇರೆ

ಕೈ-ಹೊಟ್ಟೆಗಳ ಕದನವಾಗೆ ಕೈ ಗೆಲ್ಲುವುದು-
    ಗುಣಪಹೊಟ್ಟೆಯ ಕಡುಬು ಸುಗ್ಗಿಸೂರೆ!
ಕುಳಿತಕಡೆ ಕುಳಿತು ಕಟ್ಟರೆಯುಂಬ ನೆಲದೊಡೆಯಾ
    ಕಾಣು, ಕಾಲನ ಕೈಯ ಬರಹದೆಚ್ಚರಿಕೆ:
ಅಳಿವುಳಿವುಗಳ ಆಯ್ಕೆ ನಿನ್ನ ಮುಂಗಡೆಯಿಹುದು,
    ಆಗು ಕೊಟ್ಟಳಿದರೂ ಬೆಳೆವ ಗರಿಕೆ.

೩

ದುಂಬಿಗೆಂದೆ ಹೂಗಿಡ ಹೂಬಿಡುವುದು.
ತಿಂಬರಿಗೆಂದೇ ತರು ಫಲ ಗೊಡುವುದು.
ತುಂಬಿದ ಕೆಚ್ಚಲದಾರಿಗೆ ಹಸುವಿನ?
ಉಂಬರಿಗಲ್ಲವೆ ಬೆಳೆ ತಾಯ್‌ನೆಲನ?

೪

ಮಳೆ ಬಂದು ಕೆರೆತುಂಬಿ ಕಟ್ಟೆಯೊಡೆಯದೆ ನಿಲ್ಲೆ
    ಹೆಚ್ಚುನೀರಿನ ಹರಿವಿಗಿರಬೇಕು ತೂಬು:
ಗಳಿಕೆಯುಳಿಕೆಗಳಲ್ಲಿ ಕೈಬೊಗಸೆ ತುಂಬಿರಲು
    ನೀಡುವುದೆ ನಿನ್ನ ಇಹಪರದ ಕಾಪು.
ಕೊಟ್ಟು ಕೆಟ್ಟವರಿಲ್ಲ; ಕೊಡದೆ ಒಡನೊಯಲಿಲ್ಲ;
    ಕೊಟ್ಟು ಕಟ್ಟಿಕೊ ನಿನ್ನ ಪಯಣಬುತ್ತಿ.
ಪೆಟ್ಟಗೆಯ ಧನವಿಟ್ಟು ಕಟ್ಟಿಗೆಯ ಮೇಲ್ಮಲಗಿ
    ಎಂತು ಸಾಧಿಸಬಹುದು ನಿನ್ನ ಮುಕ್ತಿ?

೫

ಕೊಂಡರೇನು ಮಳೆನೀರನು ಕಡಲು?
ಹಿಂದೆಗೆವುದೆ ಮತ್ತರ ಕೊಡಲು?
ಕೊಂಡ ನೀರ ಬಯ್ತಿಡುವುದೆ ಮುಗಿಲು?
ಸುರಿಯದೆ ಮಳೆಯಾಗೆಲ್ಲೆಲ್ಲು?
ಕೊಂಡಮೇಲೆ ಕೊಡಲೇಬೇಕು?

ಕೊಳ್ಕೊಡೆಯೇ ಜೀವನದ ಗತಿ:
ಕೊಂಡುದನ್ನು ಪಡೆದಲ್ಲಿಗೆ ಮುಟ್ಟಿಸು–
ನದೀನಾಂ ಸಾಗರೋ ಗತಿಃ.
ದೇವನೆ ಸರ್ವಸ್ವಕು ಆದಿಮೂಲ,
ದೈವರೂಪ ದೀನಾರ್ತ ಜನ;
ಕೆರೆಯ ನೀರನ್ನು ಕೆರೆಗೆ ಚೆಲ್ಲುವೊಡೆ
ಅವರಿಗೆ ಮೀಸಲು ನಿನ್ನ ಧನ.
ಎಲ್ಲರಿಗೊಬ್ಬಳೆ ನೆಲತಾಯಿ,
ನನ್ನವಳೆನಲಾದೀತೆ?
ಸೋದರರಿಗೆಲ್ಲ ಸಮಪಾಲಿರಲಿ,
ಎಲ್ಲರನೂ ಹರಸಲಿ ಮಾತೆ.

೧೪–೧೦–೧೯೫೭]

## 'ಕಗ್ಗ'ದ ಮಂಕುತಿಮ್ಮನಿಗೆ

ಜೀವನ ವನದ ಮಾವುಬೇವುಗಳ ಸಮನಾಗಿ
ಸೇವಿಸುತ ಪಡೆದಾತ್ಮಶಿಕ್ಷೆಯಲಿ ಗೆಲಿದು
ಭಾವಶುದ್ಧಿಯಿನೊಗೆದ ಸುವಿಚಾರಸೂಕ್ತಿಗಳ
ಓವಿ ನೀ ಜಗಕಿತ್ತೆ–ಮಂಕುತಿಮ್ಮ.

ಕಗ್ಗವೆಂದೆನಬಹುದೆ ನೀನೊರೆದ ವಚನಗಳ?
ಬಗ್ಗಡದ ಬಾಳ ತಿಳಿಯಾಗಿಸುತ ಬಿಸಿದು
ಸಗ್ಗದಿಂದಿಳಿದ ಗಂಗೆಯ ತೆರದೆ ಹರಿಯಿಸುವ
ಅಗ್ಗಳದ ನುಡಿಯಂತ್ರ–ಮಂಕುತಿಮ್ಮ.

ವೇಮನ್ನ ಸರ್ವಜ್ಞ ಭರ್ತೃಹರಿ ಮಾರ್ಗದಲಿ
ರಾಮಾಯಣಾದಿ ಉದ್‌ಗ್ರಂಥಗಳ ಸಾರ ಬೋ–
ಧಾಮೃತವ ಪಾನಗೈದೆಮಗೆ ಜೇನಾಗಿಸಿಹೆ:
ನೀ ಮಧುಪನೆಂತೊ ಪೇಳ್ ಮಂಕುತಿಮ್ಮ?

ಇಹದ ನೆಲವನು ಮೆಟ್ಟಿ ಪರದ ಬಾನನು ಮುಟ್ಟಿ
ಸಹಕರಿಸುವಂತೆ ಕಣ್ಣೆರಡೊಂದು ನೋಟದಲಿ
ಇಹಪರ ಸಮನ್ವಯದ ದರ್ಶನವ ಸಾಧಿಸಿದ
ಬಹು ಜಾಣನೆಂತೊ ನೀ ಮಂಕುತಿಮ್ಮ?

ಪಡುವಣದ ವಿಜ್ಞಾನ, ಮೂಡಣಾತ್ಮಜ್ಞಾನ-
ವೊಡಗೂಡೆ ವಿಶ್ವಕಲ್ಯಾಣ ಸಾಧಕವು
ಪಿಡಿಯಿರೀ ಮಾರ್ಗವೆಂದೆಡೆಬಿಡದೆ ಬೋಧಿಸುತ
ಪಡೆದೆ ನೀ ಗುರುಪದವ–ಮಂಕುತಿಮ್ಮ.

## 'ಶ್ರೀನಿವಾಸ'ನಿಗೆ

ಶ್ರೀನಿವಾಸ! ಕನ್ನಡ ತಾಯ್‌ಮೊಗದ ಮೃದುಹಾಸ!
  ನಗೆ ನಿನ್ನ ಬದುಕ ಒಳಗಹೊರಗುಗಳ ಮರ್ಮ,
  ಹಗೆಯಿಲ್ಲದೊಲು ಬಾಳ್ವ ನಿನ್ನ ಜೀವನಧರ್ಮ
ಮಾನವನ ಹೃದಯಮಂದಿರಕೆ ಪ್ರವೇಶ
ತಾನೆನಿಸಿ, ನಿನಗಾಯ್ತು, ಮಾನವನ ಗುಣದೋಷ
  ಬೋಧ; ಆ ಜಾತಿ ಈ ಜಾತಿ ಹೆಣ್‌ಗಂಡೆಂಬ
  ಭೇದವೆಣಿಸದೆ, ನಿನ್ನ ಕಥಾಲೋಕದ ತುಂಬ
ನಾನಾ ಜನಸ್ತೋಮಕಿತ್ತೆ ನೀನಾವಾಸ.
ನಿನ್ನ ಕಥೆಯ ಪ್ರಪಂಚದಲ್ಲಿ ಕನ್ನಡ ಜನದ
  ಹಿಂದಿನಿಂದಿನ ಚೆಲುವು ಬದುಕು ಬಗೆಗೊಳಿಸುತಿದೆ,
  ವಿಹರಿಸುತ್ತಿದೆಯಲ್ಲಿ ಓದುವ ಪಯಣಿಗನೆದೆ;
ಹೊನ್ನಹುದು ಹುಡಿವಸ್ತು ನಿನ್ನ ಚೆನ್ನ ಕಥನದ
  ಬಂಧದಲಿ; ನೀ ನಿಜದೆ, ಕೃತಕರುಚಿಲವಲೇಶ
  ರಹಿತರತ್ನ ವಿಭೂಷೆ–ಕಥನಶ್ರೀ–ನಿವಾಸ.

೧೯೫೭]

# ಪಂಜರದ ಬಾನಾಡಿ

(ದೇಹವನ್ನು ಒಂದು ಸೆರೆಮನೆ ಎಂದು ತಿಳಿದಿರುವವರೆಗೂ ಆತ್ಮಪಕ್ಷಿ ಅದರಿಂದ ಬಿಡುಗಡೆ ಹೊಂದಬಯಸುತ್ತದೆ, ದೇಹ ಆತ್ಮ ಎರಡೂ ಪರಸ್ಪರಾವಲಂಬಿ, ಅದಿಲ್ಲದೆ ಇದು ಇರಲಾರದು, ಆದ್ದರಿಂದ ಅವರಲ್ಲಿಂದೆ ನೆಮ್ಮದಿ ಪಡೆಯಬೇಕು ಎಂಬ ಅರಿವುಂಟಾದಾಗ ದೇಹ ಆತ್ಮಕ್ಕೆ ಹೊರೆಯೆನಿಸುವುದಿಲ್ಲ. ಇದು ಈ ಕವಿತೆಯ ಭಾವದ ತಿರುಳು)

ಬೇಸರದ ಪಂಜರದ ಕಾರ್ಪಣ್ಯವುಂಬ ಬಿರುಗಾಳಿಗೆಳೆಯ ಬಾನಾಡಿಯಂತೆ
ನೆಲಸಿಹುದು ಮಾನವನ ಮೇಲೇರುವಾತ್ಮ ತನ್ನಯ ಮೂಳೆಮನೆಯಲ್ಲಿ,
ಕೀಳುಮನೆಯಲ್ಲಿ;
ಆ ಸ್ವತಂತ್ರದ ತನ್ನ ಬಯಲ ನೆನಹಿಂದಾಚೆಗಾಹಕ್ಕಿ;
ಇದು ಬೆನ್ನು–ಮುರಿ–ದುಡಿತ; ಜೀವಿತಾಯುಷ್ಯದಲಿ ದಿನ–ದುಡಿತ–ಕಳೆತ;
ಮೇಲಿದ್ದರೇನು,
ಎರಡೂ ಹಾಡುವುವು ಕೆಲವೊಮ್ಮೆ ಬಲ್ಲವಿಯ ಬಲ್ಲವಿಯ ಸೋನೆಗಳ,
ಆದರೂ ಎರಡೂ ಮಡಿಗಂತೆ ಮುದುಡಿಬೇಖುವುವು ತಂತಮ್ಮ ಗೂಡಿನಲಿ,
ಇಲ್ಲದೊಡೆ ಭಯರೋಷಗಲಿ ಸಿಡಿದು ತಿರಿಚಿ ಮುರಿವುವು ತಮ್ಮ ತಡೆಗಟ್ಟುಗಳ;
ಸವಿಹಕ್ಕಿಗಾಹಾಡುಹಕ್ಕಿಗೆ ಬೇಕಿಲ್ಲ ವಿಶ್ರಾಂತಿ ಎಂದಲ್ಲ–
ಆಲಿಸಾಲಿಸದೋ, ತದಲುಲಿದು ಕೆಡೆದಿತ್ತು ತನ್ನ ಗೂಡಿನಲಿ,
ತನ್ನದೇ ಗೂಡಿನಲ್ಲಿ, ಕಾಡಗೂಡಿನಲಿ,– ಅಲ್ಲ ಸೆರೆಮನೆ.
ಮಾನವನ ಚೇತಸ್ಸು ತನ್ನುತ್ತಮಿಕೆಯಲ್ಲಿ ದೇಹಬದ್ಧ:
ಆದರದು ಹೊರೆಯಲ್ಲ: ಹುಲ್ಲುಗಾವಲಿಗೆ ಭಾರದ ಬೇನೆಯೇತರದು
ಮಳೆಬಿಲ್ಲು ಮೆಟ್ಟಿದೊಡೆ, ಅಂತೆಯೇ ಮನುಜನಿಗೆ ಮೂಳೆ ಕಟ್ಟಿದೊಡೆ.
೧–೩–೧೯೫೮]

(Gerard Manley Hopkins ಎಂಬ ಆಂಗ್ಲ ಕವಿಯ (ಕ್ರಿ.ಶ. ೧೮೪೪–೧೮೮೯) The Gaged Skylark ಎಂಬ ಅಷ್ಟಷಟ್ಪದಿಯ ಅನುವಾದ)

# ದೇವ ವೈಭವ

(ಪ್ರಕೃತಿಯೆಲ್ಲವೂ ದೇವದೇವನ ಪ್ರತಿಬಿಂಬ. ಮಾನವನಿಗೆ ಇದು ಏಕೆ ಅರ್ಥವಾಗದೆಂದು ಕವಿಗೆ ಅಚ್ಚರಿ. ಹತ್ತೊಂಬತ್ತನೆಯ ಶತಮಾನದಲ್ಲಿ ವಾಣಿಜ್ಯೋದ್ಯಮಗಳಲ್ಲಿ ನಿಮಗ್ನರಾದ ಪಾಶ್ಚಾತ್ಯರು ಹೇಗೆ ಪ್ರಕೃತಿಯನ್ನು ಅವಗಣಿಸಿದರೆಂಬುದನ್ನು ಕವಿ ಸೂಚಿಸಿದ್ದಾರೆ. ಆದರೂ, ಮಾನವನು ನಿಸರ್ಗವನ್ನು ತನ್ನ ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸಿಕೊಂಡು ಹಾಳುಮಾಡಿದರೂ ಅದು ಮತ್ತೆ ಮತ್ತೆ ಹೊಸಹೊಸದಾಗುತ್ತಲೇ ಇರುತ್ತದೆ. ಇದು ಪ್ರಕೃತಿಯಲ್ಲಿ ಪರಿವ್ಯಾಪ್ತವಾಗಿರುವ ದೇವನ ವೈಭವದ, ಪ್ರೇಮದ, ಕರುಣೆಯ ಪ್ರತೀಕ; ಪರಿಣಾಮ ಫಲ.)

ದೇವವೈಭವ ಪರಿವ್ಯಾಪ್ತವೀ ಪ್ರಪಂಚಂ:
ಭಗ್ಗನುರಿನುಗ್ಗುವುದು, ಝಳಂಪಿಸಿದಸಿಯ ಕಾಂತಿಯೊಲು;
ಒಗ್ಗೂಡುವುದು ಮಹಿಮೆಯಾಗಿ, ಮರ್ದಿತ ತೈಲ
ಸ್ರಾವದೊಲು, ಅವನಾಣತಿಯ ಮನಜರೇಕಲಕ್ಷಿಪರೊ?
ಈವರಂ ತುಳಿದು ತುತ್ತುಳಿದಿಹುದು ಕುಲಕೋಟಿ;
ಹೊಸಸುವಾಣಿಜ್ಯದಿಂ, ದುಡಿತದಿಂ ಕಲಸುಮೆಲಸು;
ಮಲಿನವ ಪೊದೆದು, ಪಾಲ್ಗೊಂಡಿಹುದು ಸೊಗಡ ಮಾನವನ;
ಈವೊತ್ತು ನೆಲ ಬರಿಯದರಿಯದದನಡಿ, ಜೋಡುಮೆಟ್ಟ,
ಇಂತಿರ್ದೊಡಂ, ಬೀಯಮಾಗದೆಂದಿಗು ಪ್ರಕೃತಿ;
ಹೊಸತನ ಹುದುಗಿರುವುದೆಲ್ಲದರಂತರಾಳದಲಿ;
ಕಂತಿದರು ಕಡೆಯ ಸೊಡರುಗಳೆಲ್ಲ ಕಪ್ಪು ಪಡುವಲಲಿ
ಎಸೆದು ಚಿಮ್ಮಿದೆ ಬೆಳಗು ಮೂಡಗಡೆ ಕಂದುಕರೆಯಲ್ಲಿ–
ಮುಂತಿಟ್ಟು ಬೆಚ್ಚನೆಯ ಎದೆಯ ಹೊಳೆವೆರಂಕೆಗಳ
ಬಿಸುಪುಕುಳಿತಿಹನಜಾಂಡದ ಮೇಲೆ ಪರಮಾತ್ಮ.

೯–೩–೧೯೫೮]

(Gerard Manley Hopkins (ಕ್ರಿ.ಶ. ೧೮೪೪–೧೮೮೯) ಎಂಬ ಆಂಗ್ಲ ಕವಿಯ
God's Grandeur ಎಂಬ ಅಷ್ಟಷಟ್ಪದಿಯ ಅನುವಾದ)

# ಬಿಡಿ ಹೂ

## ೧. ಕಾವ್ಯಸೃಷ್ಟಿ

ಕಾವ್ಯಸೃಷ್ಟಿಯೆನ್ನಲೇನು?–
ತನ್ನ ತಾನೆ ಕೊಡುವುದು;
ಅಕ್ಷರ ನಿರ್ವಾಯಲಿನಲ್ಲಿ
ತನ್ನ ಮುದ್ರೆ ಬಿಡುವುದು.

೧೧-೫-೧೯೪೭]

## ೨. ಬೆಳ್ಳೊಕ್ಕರೆಯ ಸಾಲು

ಬ್ರಹ್ಮ ಸೃಷ್ಟಿಯ ಕಾರ್ಯದಲಿ ಬಹಳ ಬೇಸತ್ತು
ವಿಶ್ರಮಿಸಿಕೊಳುತ, ಬಳಪವ ಪಿಡಿದು ಕರದೆ
ಬಾನ ಹಲಗೆಯ ಮೇಲೆ ಬಳ್ಳಿಗೆರೆಯೆಳೆವನೆನೆ
ಬೆಳ್ಳೊಕ್ಕರೆಯ ಸಾಲು ಮೆರೆವುದಾಗಸದೆ.

## ೩. ತಾಳೆಯ ಮೋತೆ

ಕಂಡೆ ಚಿತ್ತಾಪಹಾರಿಣಿ ಚೆಲುವೆಯ,
ಚಣದಲಿ ಚೆಲುವಿಗೆ ಮನಸೋತೆ;
ತಿಳಿವೆಚ್ಚರಿಸಿತು: ನಡೆನಡೆ ದಾರಿಗ,
ಅವಳೆಟುಕದ ತಾಳೆಯ ಮೋತೆ.

೧೬-೭-೧೯೪೮]

## ೪. ತುಟಿಗೆ ಕಟ್ಟಿಲ್ಲ

"ಥೂ ನನ್ನ ಮುಟ್ಟಬೇಡ"
"ಮುಟ್ಟಿದೆನೆ? ಮುತ್ತಿಟ್ಟೆ ನಿನ್ನ."
"ಸೋಕಿದಂತಾಯ್ತಲ್ಲವೇ?"
"ತುಟಿಗೆ ಕಟ್ಟಿಲ್ಲ, ಚಿನ್ನ."

೨೫-೬-೧೯೫೨]

### ೫. ದುಂಬಿಗೆ

ಬರಿದೆ ಹಾರಾಡುತಿಹೆಯೇಕಿಲ್ಲಿ, ಓ ದುಂಬಿ,
ಸವಿಯೆ ಹೂಸಂಗವುಂಟೆಂದು ನೆರೆನಂಬಿ?
ಮರಳು, ಮರಳ್, ಓ ಭ್ರಮರ! ಬಯಲೊಳೇಕೀ ಭ್ರಮಣೆ?
ಒಲಿದೊಲೆದು ಕರೆವ ಹೂವಿಲ್ಲ, ಸಖನೆ!

೨೧-೯-೧೯೪೬]

### ೬. ಮಗು-ತಾಯಿ

ಮಗು ನಕ್ಕಿತು ಸೊದೆಯುಕ್ಕಿತು
ನಲವೇರಿತು ತಾಯ್ಗೆ;
ಮಗುವತ್ತಿತು ಬಗೆ ಬತ್ತಿತು
ಮಗು ಹತ್ತಿತು ಮೈಗೆ.

೯-೯-೫೨]

### ೭. ಮನೆಯ ಆಭರಣ

ಹೊಲಸುಹೇಸುವ ಗಂಡ ಹೆಂಡತಿಗೆ ಹೇಳಿದನು:
'ನೆರೆಮನೆಯ ನೋಡು, ಎಂತೊಪ್ಪ ಓರಣ!
ನೆಲವೊ ಕನ್ನಡಿ! ಗೋಡೆ ಗೀಚಿಲ್ಲ! ಕಲಿ ಪಾಠ!'
ಅವಳೆಂದಳ್: 'ಅವರ ಮನೆಗಿಲ್ಲ ನಮ್ಮಾಭರಣ!'

೧೨-೫-೫೭]

### ೮. ಲಕ್ಷ್ಮಿಗೆ ಅಪಮಾನ

ನೀನು ಚಂಚಲೆಯಂತೆ: ಹಳತು ಈ ನುಡಿ, ಲಕುಮಿ:
ಅಪಮಾನಮಲ್ತೆ ಈ ಸಟೆಯ ಮಾತು?
ಸ್ಥಿರಚಿತ್ತದಿಂದ ನೀನೋಲೈಸುತಿಹೆಯಲ್ತೆ
ಬಹುಕಾಲದಿಂದ ಧನಿಕರನೆಯೋತು!

೩೧-೭-೧೯೪೮]

### ೯. ಮೇಲ್ಪಂಕ್ತಿ

ಕೌಪೀನ ಮಡಿಸಿಡುವ ಮಗನ ಕೇಳಿದ ತಂದೆ:
"ಏತಕೀ ಕೌಪೀನ?"
ಮಗನು ಹೇಳಿದ: "ನೀನು ಅಜ್ಜನಿಗೆ ಕೊಟ್ಟುದನೆ
ಮಾಡುತಿಹೆ ನಿನಗೆ ಜೋಪಾನ."

### ೧೦. ಫಲ ನಿರೀಕ್ಷೆ

ನೆರಳಿವ ಮರವ ಕಡಿದುರುಳಿಸುವೆಯೇತಕ್ಕೆ,
ನೆರಳು ಮಾತ್ರವೆ? ಉಂಟು ಹೂ ಹಕ್ಕಿ–ಹಣ್ಣು.
ಮರವು ಮುದಿಯಾಗೊಣಗೆ ಈಗ ಬಯಸಿದ ಫಲವ
ಕೊಡುವುದಿಮ್ಮಡಿಯಾಗಿ: ಕಾದು ಉಣ್ಣು.

### ೧೧. ಮುತ್ತು–ರತ್ನ

ಅಂಬುಧಿ ತರಂಗ ರಂಗದಿ ಕುಣಿದು ನಲಿಯುತ್ತ
ಮೆರೆವುದಾವುದು? ಬುರುಗು ಪಾಚಿ ಸೆತ್ತೆ.
ತುಂಬಿರುವ ಮುತ್ತು ರತ್ನಗಳು ಕಡಲಾಳದಲಿ
ಹುದುಗಿ, ದೊರೆವುವು ಮುಳುಗಿದವರಿಗಲ್ತೆ!

೧೯೫೨]

### ೧೨. ನಂದನ ವನ

ನಕ್ಕರೆ ಜೀವನ ನಂದನವನವೈ,
ಅತ್ತರೆ ಅದುವೆ ಶ್ಮಶಾನ.
ನಿಕ್ಕುವಮೀ ನುಡಿ: ನಗುತಿರು, ಜೀವವೆ,
ಬಿಡು ಬಿಡು ದುಮ್ಮಾನ.

೨೩–೭–೧೯೪೮]

### ೧೩. ಬರಿದೆ ಹುಡುಕಾಟ

ಅಕ್ಕ ಪಕ್ಕಗಳಲ್ಲಿ ನೇರ ಮುಂಗಡೆಯಲ್ಲಿ
ನಿನ್ನ ನಾ ಹುಡುಕಿ ಕಾಣದೆಹೋದೆ ದೊರೆಯೆ;
ಸಿಕ್ಕಿಯೂ ಸಿಕ್ಕದಂತೆನ್ನ ಬೆಂಗಡೆಯಲ್ಲಿ
ಬೆಂಗಾವಲಿರುವೆ ನೀನ್: ಇದನರಿತೆ-ಮರೆಯೆ.

೧೮-೧೨-೧೯೪೬]

### ೧೪. ಕಡೆಯಾಸರೆ

ತಾಯ್ತಂದೆ ಸತಿಸುತರು ಭ್ರಾತ್ರರಾಪ್ತರು ಬಾಳ
ಬಳ್ಳಿಗಾಶ್ರಯವೃಕ್ಷ ಮೊದಲು ನಡುವೆಯಲಿ;
ಅಯ್ತರದಿರದು ಕಾಲ; ಕೊಂಬೆ ತಾಳುಗಳೆಲ್ಲ
ಬೀಳುವುವು: ಆತ್ಮನಾಸರೆ ಕಡೆಯಲಿ.

# ಅರ್ಪಣೆ

ನನ್ನನ್ನು ಭ್ರಾತೃವಾತ್ಸಲ್ಯದಿಂದ
ನಡೆಸಿಕೊಂಡು ಬಂದ
**ರಾಜರತ್ನಂ**
ಅವರ
ನೆನಪಿಗೆ

# ಬಿನ್ನಹ

೧೯೭೧ರಲ್ಲಿ ಪ್ರಕಟವಾದ 'ಹಂಸಪಥ' ಕವನ ಸಂಕಲನದಲ್ಲಿ ಆವರೆಗೆ ಬರೆದ ಹೊಸ ಪದ್ಯಗಳನ್ನೂ ಹಿಂದೆ ಪ್ರಕಟವಾಗಿದ್ದ ಸಂಕಲನಗಳಿಂದ ಆಯ್ದ ಕೆಲವನ್ನೂ ಸೇರಿಸಿದ್ದೆ. ನನ್ನ ಪದ್ಯ ಬರೆಯುವ ಹವ್ಯಾಸ ಅಂದಿನ ಕೊನೆ ಮುಟ್ಟಿತು ಎಂದು ಭಾವಿಸಿದ್ದೆ.

ಉಗಾದಿ ದೀಪಾವಳಿಗೊಮ್ಮೊಮ್ಮೆ
  ಜೊತೆಗೂಡುತ್ತಿದ್ದಳು ಕವಿತೆ;
ಪಿಂಚಿನ್ನಾಯಿತು ನನಗೆಂದು
  ಅವಳೇ ಬಿಟ್ಟಳು ನನ್ನ ಜೊತೆ;
ಆದರು ಗೀಚುವೆ ಪದ್ಯದ ಸಾಲು,
  ಜೀವಕ್ಕಂಟಿದ ಗೀಳು!

ಎಂದು ೧೯೭೮ರಲ್ಲಿ ನಾನು ಅಧ್ಯಾಪಕ ವೃತ್ತಿಯಿಂದ ನಿವೃತ್ತನಾದಮೇಲೆ ಗೀಚಿದ್ದೆ. ಈ ಸಂಕಲನ ಈ ಜೀವಕ್ಕಂಟಿದ ಗೀಳಿನ ಪರಿಣಾಮಫಲ. ಗೀಳೊಂದೇ ಅಲ್ಲ ಪ್ರೇರಕಶಕ್ತಿ. "ಒಬ್ಬನೆ ಆಗಲಿ ಸಾವಿರವಾಗಲಿ ನಿಜವಾದ ಮೆಚ್ಚಿಗೆಯಲಿ ನನ್ನ ನೆಚ್ಚಿಗೆ. ಬದುಕಿರುವಂದು ಈ ಮೆಚ್ಚಿಗೆಗಾಗಿಯೂ ಬರೆಯುತಲಿರುವೆ." ಒಬ್ಬರು ಹಿರಿಯ ಮಿತ್ರರು ಇನ್ನೊಬ್ಬರು ಕಿರಿಯ ಮಿತ್ರರು ಸಂಕಲನದ ಪದ್ಯಗಳನ್ನು ಹಸ್ತಪತ್ರಿಯಲ್ಲಿ ಓದಿ ಮೆಚ್ಚಿಗೆ ಸೂಚಿಸಿದ್ದಾರೆ.* ಅಚ್ಚು ಮಾಡಿಸುವುದು ಬಲು ದುಬಾರಿಯಾದ ಈ ಕಾಲದಲ್ಲೂ ಪದ್ಯಗಳನ್ನು ಅಚ್ಚುಮಾಡಿಸಬೇಕು ಎಂದು ಮನಸ್ಸು ಮಾಡಿದ್ದು ಈ ಮೆಚ್ಚಿಗೆ ದೊರೆತ ಮೇಲೆ. ಭಾವಿ ವಾಚಕರಲ್ಲಿ ಸಹೃದಯತೆಯ ಮೆಚ್ಚಿಗೆಯನ್ನು ನಿರೀಕ್ಷಿಸುವ, ಕೋರುವ, ಮಾತು ಎತ್ತಿದರೆ ಈ ಇಬ್ಬರು ಸಹೃದಯರ ಮೆಚ್ಚಿಗೆಯಲ್ಲಿ ಸಂಶಯಪಟ್ಟಂತೆ ಆಗುತ್ತದೆ. ಇವರದ್ದು ದಾಕ್ಷಿಣ್ಯದ ಮೆಚ್ಚಿಗೆ ಅಲ್ಲ ಎಂಬ ವಿಶ್ವಾಸ ನನಗಿದೆ. ಮೆಚ್ಚಿಗೆಗೆ ಪಾತ್ರವಾದವು ಎಂದ ಮಾತ್ರಕ್ಕೆ ಎಲ್ಲ ರಚನೆಗಳೂ ಒಂದೇ ಗುಣಮಟ್ಟದವು ಎಂದು ತಾತ್ಪರ್ಯವಲ್ಲ. ಒಂದೊಂದು ಪದ್ಯವನ್ನೂ ಬೇರೆ ಬೇರೆ ಕಾರಣಕ್ಕಾಗಿ ಮೆಚ್ಚಿಕೊಳ್ಳುವುದು ಸಾಧ್ಯ.

---

* ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಮತ್ತು ನನ್ನ ವಿದ್ಯಾರ್ಥಿಯಾಗಿದ್ದ, ಈಗ ಅಧ್ಯಾಪಕರಾಗಿರುವ ಶ್ರೀ ಕೆ.ಎಸ್. ಮಧುಸೂದನ ಅವರು.

ಈ ಸಂಕಲನದ ಹಲಕೆಲವು ಪದ್ಯಗಳ ಬಗೆಗೆ ಎರಡು ಮಾತು: ಈ ಪದ್ಯಗಳನ್ನು* ದೇಸಿ ಛಂದಸ್ಸಿನ ಅಂಶಲಯವನ್ನು ಪ್ರಯೋಗಿಸಿ ಬರೆದದ್ದಾಗಿದೆ. 'ಗ್ರಾಮಗೀತ', ಒಂದು ಹಕ್ಕಿಯ ಹೇಳಿಕೆ', 'ಬುದ್ಧಿಯ ಮಾತು'–ಇವು 'ಸಮಬಂಧದ' ಪದ್ಯಗಳು. ಆಧುನಿಕ ಕಾವ್ಯದಲ್ಲಿ ಇದು ಹೊಸ ಪ್ರಯೋಗವೇನಲ್ಲ. ಆದರೆ, ಇನ್ನುಳಿದ ಅಂಶಲಯದ ಪದ್ಯಗಳ ನಿಯತ ಸಂಖ್ಯೆಯ ಗಣಗಳಾಗಲಿ ಪಾದಗಳಾಗಲಿ ಇರುವುದಿಲ್ಲ. ಇದು ಮುಕ್ತ ಛಂದದ ಪದ್ಯದಂತೆ ಕಂಡರೂ ನಿರ್ದಿಷ್ಟವಾದ ಅಂಶಲಯವನ್ನು ಹೊಂದಿರುತ್ತದೆ; ಅಂಶಲಯದ ಸೂಕ್ಷ್ಮಗಳನ್ನು ಬಲ್ಲವರು ಅದನ್ನು ಗುರುತಿಸಬಲ್ಲರು. ಇದರ ಲಯ ಆಡುಮಾತಿನ ಲಯಕ್ಕೆ ತೀರ ಸಮೀಪ. ಈ ಲಯ ಕನ್ನಡ ಮಾತಿಗೆ ಒಗ್ಗಿಬರುವ ಹಾಗೆ ಸಂಸ್ಕೃತಕ್ಕೆ ಸುಲಭವಾಗಿ ಒಗ್ಗಿ ಬರುವುದಿಲ್ಲ. ಎಂದರೆ ಸಂಸ್ಕೃತ ಪದಗಳ ಪ್ರಯೋಗಕ್ಕೆ ಅವಕಾಶವಿಲ್ಲ ಎಂದು ಅರ್ಥವಲ್ಲ. ಸಂಸ್ಕೃತಭೂಯಿಷ್ಠತೆ ಇದಕ್ಕೆ ಹೊರತು. ಇಲ್ಲಿ ದೇಸಿಗೆ ಪೂರ್ತಿ ಗೆಲವು. ಈ ಪ್ರಯೋಗ ಹೆಚ್ಚುಹೆಚ್ಚಾಗಿ ಬಳಕೆಗೆ ಬರಲು ತಕ್ಕದ್ದಾಗಿದೆ ಎಂದು ನನತೆ ತೋರುತ್ತದೆ.

ಇಲ್ಲಿಯ ಭಾವಗೀತೆಗಳ ಪೈಕಿ ಕೆಲವು ಈ ಮುನ್ನ ಆಕಾಶವಾಣಿಯಲ್ಲಿ ಪ್ರಸಾರವಾಗಿವೆ. ಇನ್ನು ಕೆಲವು (ಚೆದರಿದೆ ಚಿತ್ತ, ಬೇಡದವು, ಅರಿವು, ನಾಣ್ಯ, ಅಭಯಹಸ್ತ) ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವುಗಳನ್ನು ಪ್ರಕಾಶಪಡಿಸಿದವರಿಗೂ, ಕವನಗಳ ಹಸ್ತಪ್ರತಿಯನ್ನು ಓದಿ ಮೆಚ್ಚಿಗೆ ವ್ಯಕ್ತಪಡಿಸಿದ ಮಿತ್ರರಿಗೂ ನಾನು ಕೃತಜ್ಞ.

ಪುಸ್ತಕವನ್ನು ಅಂದವಾಗಿ ಬೇಗನೆ ಅಚ್ಚುಮಾಡಿಕೊಟ್ಟ ಲಿಪಿ ಮುದ್ರಣದ ಶ್ರೀ. ಬಾ.ಕಿ.ನ. ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

೧೫–೧೦–೧೯೮೦ ರಾಘವ
ಬೆಂಗಳೂರು –೧೯

---

* ತೆರೆ, ನಡಸುವ ಕೈ, ಮಹಾನದಿ, ಪರಿಹಾರ, ಗೊತ್ತಿರಲಿಲ್ಲ ಪಾಪ, ಇವು ತರಗೆಲೆ, ತಪ್ಪೊಪ್ಪಿಗೆ, ಸೊನ್ನೆ.

## ಚೆದರಿದೆ ಚಿತ್ತ

ಚೆದರಿದೆ ಚಿತ್ತ:
ಅತ್ತ ಇತ್ತ ಸುತ್ತ ಮುತ್ತ
ಹರಿದಿದೆ ಚಿತ್ತ:
ಈಗ ತಾನೆ ಎಚ್ಚತ್ತ
ಚರಿಸುವ ಚಿತ್ತ :
ಹುತ್ತ ಬಿಟ್ಟ ಹಾವಿನಂತೆ
ಗಾಳಿಯೆದುರ ತರಗಿನಂತೆ
ಹರಿದು ಎಸೆದ ಹೂವಿನಂತೆ
ಕಾವಿಗಿಟ್ಟ ಅರಗಿನಂತೆ
ಹರಿದಿದೆ ಚಿತ್ತ,
ತೂರಿದೆ ಚಿತ್ತ,
ಕರಗಿದೆ ಚಿತ್ತ–
ಹರಿದು ತೂರಿ ಹರಡಿ ಕರಗಿ
ಸೊರಗಿದೆ ಚಿತ್ತ.
ಎತ್ತ ಎತ್ತ ಎತ್ತ ಎತ್ತ
ನನ್ನಯ ಗುರಿಯೆತ್ತ?
ನಾಡ ತಾಯ ಮಗಳಲ್ಲವೆ
ನುಡಿಯ ತಾಯಿ ?
ಇವಳ ಸೇವೆಯವಳ ಸೇವೆ–
ಯೆಂದು ನನ್ನ ಬಾಯಿ
ಹಾಡ ಹೊರಟಿದೆ;
ನಾಡ ನೋವು ನಲಿವುಗಳನು
ಹಾಡ ತೊಡಗಿದೆ.
ಹಾಡ ಹೊರಟ ಕಂದನನ್ನು

ಹರಸು ತಾಯಿ,
ಚಿತ್ತವನ್ನು ಸೇವೆಯಲ್ಲಿ
ನಿಲಿಸು ತಾಯಿ,
ಓ, ನಾಡ ತಾಯಿ

೧೯೪೮

## ನೆರಳು

ರವಿಯೆದ್ದ :
ಪಡುವಣಿಂದೋಡಿ ಬಂದಳು
ನೆರಳು
ಅಪ್ಪಿಕೊಳಲು : ನುಡಿಯೆ
ಮರಮರಗಳಲಿ
ಕೊಳಲು.

ನಡುಹಗಲು :
ಓಡಿ, ಬಸವಳಿದು ಬಳಲಿ,
ಬೀದಿಯಲಿ
ಮಲಗಿಹಳು
ಸಾಲುಕೊಡೆಗಳ ಕೆಳಗೆ
ವಿಶ್ರಮಿಸಿಕೊಳಲು.

ರವಿ ಬಿದ್ದ :
ಓಡಿದಳು ಈ ಕಡೆಗೆ
ಮೂಡಣದೆಡೆಗೆ
ಉದ್ದುದ್ದ :
ರವಿದರ್ಶನಕೆ ಮರಳಿ
ನಾಳೆ ಸಿದ್ಧ–

ರವಿಯಿದ್ದ ಕಡೆ ನೆರಳು
ಅವನಿಗೆ ಬದ್ಧ
ರವಿಯ ಹೆಂಡತಿ ಛಾಯೆ
ನಿತ್ಯ ಸಂಗಾತಿ :
ಸತ್ಯ ಸೂರ್ಯನ ನೆರಳು
ಜಗದಿರವು ಮಾಯೆ.

೧೧-೧೦-೧೯೬೮

## ಚಂದ್ರಲೋಕ

ಹಾರಿದೆಯಾ ನೀ ಚಂದ್ರಲೋಕಕೆ?
ಏರಿದೆಯೋ ನೇತಿಯ ನಿಚ್ಚಣಿಗೆಯ
ಮೊದಲ ಮೆಟ್ಟಲಿಗೆ !
ಚಂದ್ರನವನು ತಾ ಚಂದ್ರನಲ್ಲವೋ :
ಚಿದ್ಘನದ ಹೃತ್ಕಿರಣವೊ,
ಸತ್ಯಸ್ವರೂಪಿ ಸೂರ್ಯದೇವನ
ಸೃಷ್ಟಿಸ್ಫೂರ್ತಿಯ ಸ್ಫುರಣವೋ !

## ಕನ್ನಡತನ

ಕನ್ನಡತನವನು ತೊರೆದರೆ ನಾವು
ತಿಳಿಯಿರಿ, ನಮಗಂದೇ ಸಾವು.

ಕನ್ನಡತನ ನಮ್ಮುಡುಪಿನಲಿಲ್ಲ–
ನಾಟಕ ಬೂಟಕತನ ಉಡುಪು;
ಕನ್ನಡತನ ನಮ್ಮೂಟದಲಿಲ್ಲ–
ಬೇಕು ದನಗಳಿಗು ಮೇವು.

ಕನ್ನಡತನ ನುಡಿಯೊಲವಿನಲಿಲ್ಲ–
ತಿಣುಕಿದರದು ತಾ ಬರದಲ್ಲ !
ಅನ್ಯರ ನುಡಿಯಲ್ಲಿಹ ವ್ಯಾಮೋಹ
ತಾಯ್ನುಡಿಗಿಲ್ಲದೆ ಇಹುದಲ್ಲ !

ಕನ್ನಡ ಬರಹಕೆ ಕನ್ನಡದೊಂದಿಗೆ
ಮನ್ನಣೆ ಕೊಡದರು ಕನ್ನಡರೆ ?
ಕನ್ನಡ ಹಾಡಿಗೆ ಕಿವಿತೆರೆಯದ ಜನ
ಕನ್ನಡ ಬಸಿರಲಿ ಬಂದವರೆ ?

೧೯೬೮

## ಪೂರ್ವ–ಪುನರ್–ಜನ್ಮ

ಪೂರ್ವಜನ್ಮವುಂಟೆ ?
ನಾನು ಕಾಣೆ, ಕಾಣೆ.
ಪುನರ್ಜನ್ಮವುಂಟೆ ?
ನಾನು ಕಾಣೆ, ಕಾಣೆ.

ತಂದೆ ತಾಯಿಗಳ
ಶುಕ್ಲಶೋಣಿತ
ಪೂರ್ವಜನ್ಮಗಣಿತ
ನಾನು ನನ್ನ ಮಡದಿ
ಕೂಡಿ ಕಲೆತ ಧಾತು
ಪುನರ್ಜನ್ಮ ಹೇತು.

ಜೀವ ಜಾಲ ಜಂತು
ಆದ್ಯಂತ ರಹಿತವಿಂತು
ತನಗೆ ತಾನು ವೋತು

ತನ್ನ ತಾನೆ ನೂತು
ಹರಿಯುತಿರಲು ಹೀಗೆ
ಪೂರ್ವಜನ್ಮವಿರದೆ ?
ಪುನರ್ಜನ್ಮ ಬರದೆ?

೧-೬-೧೯೭೦

## ಕೊಡೆ

ನೀ ಕೊಡೆ
ನಾ ಬಿಡೆ
ನೀ
ಕೊಟ್ಟರೂ
ಬಿಟ್ಟರೂ
ನೀನೇ
ನನಗೆ
ಇಂದೂ ಮುಂದೂ
ಎಂದೆಂದೂ
ಕೊಡೆ

೨೫-೪-೧೯೭೧

## ಬೇಡದವು

ಕೋಗಿಲೆಗೇತಕೆ ಸರಿಗಮಪಧನಿಸ
ಆದರಿಂಪಿನ ದನಿ ರಾಗರಸ
ಚೆಲುವೆಗೇಕೆ ಭೂಷಣಗಳ ಭಾರ
ಚೆಲುವಿನ ಸಿರಿಯೇ ಶೃಂಗಾರ

ಕವಿಗೇತಕೆ ಬಹುಮಾನದ ಬವಣೆ
ರಸಿಕರ ಮೆಚ್ಚುಗೆಯ ಮನ್ನಣೆ
ತವಸಿಗೇಕೆ ಹಣಹೊನ್ನಿನ ಹಂಬಲ
ತವನಿಧಿಯವನ ತಪೋಬಲ

ಭಕ್ತನಿಗೇತಕೆ ಬಾಹ್ಯದ ಪೂಜೆ
ಇರೆ ಭಕ್ತಿಭಾವದೋಚೆ
ವಿರಕ್ತನಿಗೇತಕೆ ವೇಷದ ಸೊಗಸು
ಅಂತರಂಗಸುಖ ಲೇಸು.

೨೯-೫-೧೯೭೨

## ಅರಿವು

ಅತ್ತಲಿತ್ತಲೆತ್ತಲು ಸುತ್ತಮುತ್ತ ಕತ್ತಲು
ಬೆಳಕು ಕಾಣದು । ಅರಿವ ಬೆಳಕು ಕಾಣದು ॥

ಅರಿವು ನಕ್ಷತ್ರವಾಗಿ ಬಗೆಯ ಬಾನಲಿ
ಮಿರುಗಿ ಬಾಳಿನಿರುಳು ದಾರಿ ಸುಗಮವಾಗಲಿ
ಪಯಣ ಸುಖದಿ ಸಾಗಲಿ.

ಅರಿವು ಗಂಗೆಯಾಗಿ ಶಿವನ ಶಿರದಿಂದಲಿ ಸುರಿಯಲಿ
ಮರೆವಿನ ಮೈಮಲಿನ ತೊಳೆದನಂತವಾಗಿ ಹರಿಯಲಿ
ಅನಂತದಲ್ಲಿ ಬೆರೆಯಲಿ.

ಅರಿವು ಖಡ್ಗವಾಗಿ ತಮದ ತೆರೆ ಹರಿಯುತ ಬೀಳಲಿ
ಹೊರಗಿನೊಳಗ ಪರಿಯ ತೋರಿ ಜಗದ ಕಣ್ಣು ತೆರೆಯಲಿ
ಜನದ ಕಣ್ಣ ತೆರೆಸಲಿ.

ಅರಿವು ಮರೆವು ಬೆರೆತು ವೊಂದೆಯಾಗಿ ಕೊನೆಗೆ ಕತ್ತಲೆ
ಹರಿಯೆ, ಇಹದ ಇರವು ಪರದ ಬೆಳಕಿನಲ್ಲಿ ಬತ್ತಲೆ
ಪರಂಜ್ಯೋತಿಯತ್ತಲೆ.

೨೯-೫-೧೯೭೨

## ಸಾಧನಪಥ

ಸ್ವಾತಂತ್ರ್ಯದ ಹೆಬ್ಬಾಗಿಲು ತೆರೆಯಿತು
ಹರಸೆ ನಮ್ಮ ನಾಡಿನ ತಂದೆ ;
ಸ್ವಾತಂತ್ರ್ಯ ಫಲದ ಸಾಧನೆ ಸಿದ್ಧಿಯ
ಪಥ ಕರೆಯುತ್ತಿದೆ ಮುಮ್ಮುಂದೆ

ಪ್ರಗತಿಯ ಪಥದಲಿ ಸುಖಸಂಪತ್ತು
ಮೀಸಲು ಸಾಹಸವಂತರಿಗೆ;
ನಗೆಗೇಡಿನ ಹಿಡಿಭಿಕ್ಷೆಯ ದುರ್ಗತಿ
ದುಡಿಯದೆ ಸುಮ್ಮನೆ ನಿಂತರಿಗೆ.

ದುಡಿಮೆಯೆ ಇಂದಿನ ದೇವರಪೂಜೆ,
ಬಡತನದ ನಾಶನೋಹಿ*ವ್ರತ;
ಒಡೆತನ ಶಾಂತಿಯ ಸಾಮ್ರಾಜ್ಯದಲಿ
ಪಡೆಯುವ, ಸಾಧಿಸಿ ಲೋಕಹಿತ.

ಸಾಧನಪಥದಲ್ಲಿ ಸಾಲೊಂದೇ ಸಮ,
ಹಿಂದು ಮುಂದುಗಳು ಅಲ್ಲಿಲ್ಲ;
ಸಿದ್ಧಿಯ ಶಿಖರದಿ ಬೆಳಗಿದ ದೀಪ
ಬೀರಲಿ ಬೆಳಕನು ಜಗಕೆಲ್ಲ.

ಸ್ವಾತಂತ್ರ್ಯದಾತನ ನೀತಿಯ ಪಥದಲಿ
ಕಾಯಕ ಕಲೆಗಳ ಯೋಗವನು

ಮಾತೆಯ ಸೇವೆಯೆಂದಾಚರಿಸಿ ಪಡುವ
ತ್ಯಾಗದೊಪ್ಪವನಿಟ್ಟ ಭೋಗವನು.

ಗ್ರಾಮದ ಗೆಳೆಯರೆ ತಾಮಸ ತೊರೆಯಿರಿ
ನೇಮವದಿಂದಿನ ಶುಭದಿನದೆ
ಗ್ರಾಮಸ್ಥರಾಜ್ಯದ ರಾಮರಾಜ್ಯಪ ಕಟ್ಟಿ
ಮಂಗಳ ಕೋರುವ ಸಕಲರಿಗೆ.

೨೭-೭-೧೯೭೨

## ನಾಣ್ಯ

೧

"ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು."
ಹೌದಯ್ಯ ಹೌದು, ದಿಟ ನಿನ್ನ ಮಾತು.
ಕರಣಿಕರನಾಗಿದ್ದೆ, ಭಂಡಾರಿಯಾಗಿದ್ದೆ,
ಲೆಕ್ಕಾಚಾರವನೆಲ್ಲ ಬಲ್ಲವ ನೀನು,
ಪುರುಷವೃಷಭ.
ಚಿನ್ನದ ನಾಣ್ಯದ ಬೆಲೆಯ ಬಲ್ಲವ ನೀನು,
ನಾಣ್ಯ ಟಂಕಿಸುವ ಕಲೆಯ ಬಲ್ಲವ ನೀನು.
ಸಲ್ಲುವ ದಾರಿಯ ಸಾರಿದೆಯಯ್ಯ:
'ಕಳಬೇಡ ಕೊಲಬೇಡ
ಹುಸಿಯ ನುಡಿಯಲುಬೇಡ
ತನ್ನ ಬಣ್ಣಿಸಬೇಡ
ಇದಿರ ಹಳಿಯಲುಬೇಡ.'
ನಮ್ಮ ನಾಡಿನ ಅಂದಿನ ಪುಣ್ಯ :
ನಡೆದದ್ದಾಯಿತು ನಾಣ್ಯ.
ನುಡಿ ನಡೆ
ನಾಣ್ಯದ

ಆ ಕಡೆ ಈ ಕಡೆ
ಒಂದಾದ
ಚಿನ್ನದ ನಾಣ್ಯವನು
ತಂದೆ ಚಲಾವಣೆಗೆ–
ನಡೆಯಿತು ನಾಣ್ಯ ತಾನು.
ಎಲ್ಲಿಗೆ ಹೋಯಿತು ಆ ಚಿನ್ನದ ನಾಣ್ಯ?
ಬೇಹಾರವರಿಯದ ಬೆಪ್ಪರು ಸಂತೆಯಲಿ
ನಾಣ್ಯದ ಕರಗಿಸಿ ಚಿನ್ನ ಮಾರಿದರೋ,
ನಾಣ್ಯದ ಬೆಲೆಯ ಗಾಳಿಗೆ ತೂರಿದರೋ:
ಮುರಿಸಿ ಮುರಿಸಿ ನಾಣ್ಯ
ಬರಿದಾಯ್ತು ಭಂಡಾರ ;
ಚಿನ್ನದ ಬದಲಿಗೆ ಬಂದಿತು ಬೆಳ್ಳಿ,
ಬೆಳ್ಳಿಯ ಬದಲಿಗೆ ಸಂದಿತು ತಾಮ್ರ;
ತಾಮ್ರದ ಜಾಗಕ್ಕೆ ನಿಕ್ಕಲ್ಲು ನೆಲಸಿತು,
ನಿಕ್ಕಲ್ಲಿನೆಡೆಯಲ್ಲಿ ಕಾಗದ ಹಾರಿತು–
ಎಲ್ಲೆಲ್ಲು ಕಂತೆಯ ನೋಟಿನ ಹಾರಾಟ,
ಮರ್ತ್ಯದ ಅಂಗೈಲಿ ಕೈಲಾಸ ತೋರಾಟ;
ಸಾಚವ ನಾಚಿಸಿ ಸಲುತಿದೆ ಖೋಟಾ
ನೋಟಿನ ಬೂಟಾಟ, ಆಟ, ದೊಡ್ಡಾಟ !
ಕರ್ತಾರನ ಕಮ್ಮಟ
ಕೈಲಾಸ ಸೇರಿತು;
ನೋಟಿನೋಡಾಟ
ಮರ್ತ್ಯದಲ್ಲುಳಿಯಿತು.
ನಡೆದದ್ದೇ ನಾಣ್ಯ, ನಡೆದಷ್ಟೇ ನಾಣ್ಯ;
ಇದರರ್ಥ ಹಿಡಿದು
ಅದರಂತೆ ನಡೆದು
ಗೆದ್ದವನೆ ಗಣ್ಯ,
ನಾಣ್ಯ ಹಿರಣ್ಯ.

೧–೧೧–೧೯೭೩

# ಅಭಯ ಹಸ್ತ

ದೊರೆಗಳ ದೊರೆಯೇ ದೇವಪುತ್ರನೇ
ಕನ್ಯಾಗರ್ಭದ ದಿವ್ಯರತ್ನವೇ
ನೋವಿನ ಸಾವಿನ ಕಡಲಿಗೆ ಒಡಲನು
ತೇಲಿಬಿಟ್ಟ ಚೈತನ್ಯಪ್ರಭುವೇ
ಮಾರುಹೋದುದೋ ನಿನಗೆನ್ನ ಮನ,
ಸಲ್ಲಿಸುತಿದೆ ಈ ನುಡಿ ನಮನ.

ಪಾಚಿಗಟ್ಟಿದ ಸರಸಿಗೆ ನುಗ್ಗಿದೆ,
ಮೊಸಳೆಯ ಬಾಯಿಗೆ ಮೈಗೊಟ್ಟೆ;
ತೆಗೆದೆಸೆದಾಚೆಗೆ ಪಾಚಿಯ, ನಿರ್ಮಲ
ಜೀವನ ಧರ್ಮವನುಕ್ಕಿಸಿದೆ–
ಬಾಯಾರಿದರ ದಾಹವ ಕಳೆದೆ,
ಸುತ್ತಲು ಹಸಿರನು ಬೆಳೆದೆ.

ಹಲ್ಲಿಗೆ ಹಲ್ಲು ಕಣ್ಣಿಗೆ ಕಣ್ಣು
ಕೊಳ್ ಎಂದಿತ್ತಾ ಪೂರ್ವನ್ಯಾಯ;
ಹೊಡೆಯಲೊಂದು ಕೆನ್ನೆಗೆ ಇನ್ನೊಂದನು
ತೋರು ಆಗು ನೀ ಸದಯ–
ಎನ್ನುತ ಮುಯ್ಯಿಗೆ–ಮುಯ್–ರೀತಿಯನು
ಅಳಿಸಿ, ಕಲಿಸಿದೆ ಹೊಸ ನೀತಿಯನು.

ಕುವುದಿಯ ಕೇಳಲು ಕವಚವನೂ ಕೊಡು,
ಈ ಕಯ್ ಕೊಟ್ಟುದನಾ ಕಯ್ಯಿ
ಅರಿಯದಿರಲಿ–ಎನ್ನುತ ಉಳ್ಳವರು
ಇಲ್ಲದವರಿಗೆ ಬೇಡಿತ ನೀಡಿ
ಸೈತಾನನ ಗೆಲ್ಲುವ ಪರಿ ತೋರಿದೆ,
ದಿವ್ಯರಾಜ್ಯ ಸಂದೇಶ ಸಾರಿದೆ.

ಹೊತ್ತಿಸಿ ದೀಪವ ಬೆಟ್ಟದ ಮೇಲ್ಗಡೆ
　　ಕಾಣುವಂತೆ ಲೋಕಕೆ ಹಿಡಿದೆ;
ಕತ್ತಲು ಕವಿದ ನಾಡಲಿ ಬೀಡಲಿ
　　ತೋರಿ ಬೆಳಕುದಾರಿಯ, ನಡೆದೆ.
　　ಬೆಳಕನು ಸಹಿಸದ ಗೂಬೆಗಳು
　　ತಲೆಯ ಮಏಲೆ ಹಾರಾಡಿದುವು.

ಲೋಕದ ಕಷ್ಟದ ಕಾಷ್ಠದ ಶಿಲುಬೆಗೆ
　　ಹೆಗಲನಿತ್ತೆ, ಅದನೇರಿದೆ ಕೊನೆಗೆ;
ನಾಕದ ಬಾಗಿಲ ತೆರೆದೆ, ಪಾಪಿಗೆ;
　　ಮರಳಲು, ತೆರಳಿದೆ ತಂದೆಯ ಮನೆಗೆ.
　　ಸಾವಿನ ತಟ್ಟೆಯಲಮೃತವ ಕುಡಿದೆ,
　　ಅದರ ಮರ್ಮವನು ಲೋಕಕರುಹಿದೆ.

ದೀನರ ದೈನ್ಯಕೆ ಬೆನ್ನೆಲುಬಾದೆ,
　　ಎತ್ತಿದೆ ಪತಿತರ ಪಾತಿತ್ಯ;
ಕುದಿದು ಮರುಗುವ ಕಂಬನಿಹೊಳೆಯಲಿ
　　ಪಾವನ ಮಿಸಿಸಿದೆ ಪಾಪಾತ್ಮರನು :
ಜಗದುದ್ಧಾರಕ, ಹೇ ಯೇಸೂಕ್ರಿಸ್ತ !
　　ಮುಕ್ತಿಯ ಭರವಸೆ ನಿನ್ನ ಅಭಯಹಸ್ತ

೧೯೭೩

## ಪು.ತಿ.ನ.ಗೆ

ರೂಪರಸಗಂಧದಲಿ ನಾಡಸೌಭಾಗ್ಯದಲಿ
　　ಚಿನ್ಮಯದ ಚೆಲುವಿಕೆಯ ನೊರೆಹಾಲ ಪಾನದಲಿ
　　ತನ್ಮಯತೆವಡೆದರೂ ಅರಿವಿನೆಚ್ಚರಗೆಡದೆ
ದೀಪಶಿಖಿಯೆಂತಂತೆ ನಿರ್ವಾತನಿಲಯದಲಿ

ಕೋಪತಾಪ ವಿದೂರನಾಗಿ ನಿಶ್ಚಲ ನೆಲಸಿ
ಹಿಂದಿನಿಂದ ಬದುಕೊಳಿದ್ದು ಅದ್ದುತಲೆದ್ದು
ಕುಂದುಗಳ ಕನಿಕರಿಸಿ ಅಂದಕ್ಕೆ ತಲೆಬಾಗಿ
ಶಾಪಮೋಚನಗೊಳಿಸಿ ಜಡವ ಚಿತ್‌ಸ್ಪರ್ಶದಲಿ–
ಪಡೆದ ಅನುಭವ, ನಿನ್ನ ವಚನ ರಚನಾರಸನೆ
ರಂಗವಾಗಲು, ಕಲ್ಪನೆಯ ಕಣ್ಣುಗಳ ತೆರೆದು
ರಂಗುರಂಗಿನ ಭಾವ–ಬಿಜ್ಜಣಿಗೆ–ಕೊಡೆ ಬಿಚ್ಚಿ
ಇಡುನುಡಿಯ ನಡೆಯ ನರ್ತನದರ್ಥಪೀಠದಲಿ
ರಸಸರಸ್ವತಿ ರಸಿಕ ದರ್ಶನ ಪ್ರತ್ಯಕ್ಷೆ–
ಹುಸಿಯಲ್ಲವೆನ್ನದೀ ನುಡಿ, ಸಹೃದಯ ಸುರಕ್ಷೆ.

೨೧–೬–೧೯೭೩

## ರಾಸಕ್ರೀಡೆ

ನೋಡೇ ಕೃಷ್ಣನ ರಾಸಕ್ರೀಡೆ,
ಮುರಲೀನಾದದ ದನಿಗೂಡೆ.

ಅದ್ಭುತ ನಿಗೂಢ ಕೃಷ್ಣನ ಚರ್ಯಾ
ದಿವ್ಯ ಪ್ರೇಮದ ಪ್ರಥಮಾಚಾರ್ಯ
ಮಧ್ಯದಲಿಹ ಪರಮಾತ್ಮನು ಸೂರ್ಯ
ಸುತ್ತಲು ಗ್ರಹಕಾರಾಪರಿಚರ್ಯಾ.

೧೯೭೩

## ಕೊಳಲನೂದುವನಾರೆ

ಕೊಳಲನೂದುವನಾರೇ । ಗೆಳತಿ ।
ಘಳಿಲನೆ ಬಾರೇ ಅವನದು ತೋರೆ ॥

ಬಿದಿರುಕೊಳಲಲಿ ಹೊಮ್ಮುವುದೇನೆ
ದಿವ್ಯಗಾನದಿಂಪಿನ ಸೋನೆ?
ಚದುರನಿವನು ಗೊಲ್ಲನೊ ಗಂಧರ್ವನೊ ?
ಇದರ ಒಳಗನರಿಯುವ ಬಾರೆ.

ಗಾನಸ್ನಾನದಿ ಗೋವರ್ಧನಗಿರಿ
ಮೌನವ ಮುರಿದಿದೆಯಂತೆ, ಸಖಿ
ಜೇನು ಮಳೆಗರೆದು ನೆಲ ಕೆಸರಂತೆ
ಬಾನಲಿ ದನಿ ಹೂವರಳಿದೆಯಂತೆ.

ತುರು ಕರೆಯದೆ ಸೊರುಬಿಟ್ಟಿವೆಯಂತೆ
ಕರು ತಾಯ್ಗೆಚ್ಚಲ ಮರೆತಿವೆಯಂತೆ
ಹರಿಯದೆ ಯಮುನೆ ಉಕ್ಕಿಹಳಂತೆ
ತಿರೆಮೈಯೆಲ್ಲವು ಕಿವಿಯಂತೆ.

೨೬-೮-೧೯೭೪

## ತೆರೆ

ತೆರೆ ತೆರೆ ತೆರೆ ತೆರೆ
ಸುತ್ತಮುತ್ತ ಎತ್ತಲೆತ್ತುಲು
ತೆರೆ-ಒಂದೇ ತೆರೆ.

ವರಿಸಿಹ ನಮ್ಮನಾವರಿಸಿಂಹ
ಸುಂದರ–ತರತರ–ತಮ ತೆರೆ
ರಂಗುರಂಗಿನ ತೆರೆ
ಬೆಳಕು–ಕತ್ತಲೆಗಳ
ಹಾಸುಹೊಕ್ಕಿನ ತೆರೆ.

ಊರ್ಣನಾಭವ ಪೂರ್ಣ
ಇಚ್ಛಾ ಸೂತ್ರದ ತೆರೆ
ಹಾರದ ಜಾರದ
ಹರಿಯದ ಸರಿಯದ
ವಜ್ರಲೇಪದ ತೆರೆ.
ತೆರೆಯ ಹಿಂದೆ ನೀ ಮರೆ
ಓ ನನ್ನ ದೊರೆ
ತೆರೆ ತೆರೆ–ತೆರೆಯ ತೆರೆ
ಕ್ಷಣಮಾತ್ರ ತೋರಯ್ಯ
ನಿನ್ನಿರವ–ನನ್ನ ದೊರೆ.

೨೫–೪–೧೯೭೫

## ಹದಗೆಟ್ಟ ಹಾಡು

ಯಾಕೋ ಹದಗೆಟ್ಟಿದೆ ಹಾಡು
ನನ್ನ ನಿನ್ನ ಹಾಡು । ನಿನ್ನೆಯ ಆ ಹಾಡು

ಬೆಟ್ಟಗುಡ್ಡದಲಿ ಚರಿಸಿ ವಿಹರಿಸಿ
ಚಿಟ್ಟೆಯಾದ ಹಾಡು
ನಟ್ಟಿರುಳಲಿ ಕನಸುಗಳನು ಕಟ್ಟಿ
ಗುಟ್ಟನೊಡೆದ ಹಾಡು.

ಮುಗಿಲಲಿ ಮಲ್ಲಿಗೆಯರಳನು ಬಿಡಿಸಿ
ನಲ್ಲೆಗೆ ಮುಡಿಸಿದ ಹಾಡು
ಬಗೆಬಾನಲಿ ಕಾಮನ ಬಿಲ್‌ಮೂಡಿಸಿ
ಮಕ್ಕಳ ನಲಿಸಿದ ಹಾಡು.

ಅರ್ಥದ ಕುಯಿಲಲಿ ಭಾವದ ಸುಗ್ಗಿಯ
ಕೊಂಡು ಉಂಡ ಹಾಡು
ಸಾರ್ಥಕ ಬದುಕಿನ ಬಿಸಿಲಿನ ಹಾದಿಗೆ
ಸಾಲ್ಮರ-ತಂಪಿನ ಹಾಡು.

ನುಡಿನುಡಿಯಲಿ ಕುಡಿದೀಪವ ಹೊತ್ತಿಸಿ
ಕಾಣದುದನು ಬೆಳಗಿದ ಹಾಡು
ನುಡಿಗುಡಿಯಲಿ ತಾಯನು ಬಿಜಮಾಡಿಸಿ
ನುತಿಸಿ ನಲಿದ ಹಾಡು.

ನಾಡಬಿಡುಗಡೆಗೆ ತಪಿಸಿದ ಹಾಡು
ನಾಡಿನೇಳಿಗೆಯ ಬಯಸಿದ ಹಾಡು
ನಾಡ ಜನೋದಯಕುದಿಸಿದ ಹಾಡು
ರೂಢಿಯ ಬಿಡಲಾರದೆ ಹಳೆ ಹಾಡು

೩೦-೯-೧೯೭೬

## ನಾಡಿಗೆ ಕಾಣಿಕೆ

ನನ್ನದೂ ದಿಟ ನಿಮ್ಮದೂ ದಿಟ ನಾಡ ಕಟ್ಟುವ ಯೋಜನೆ
ಭಿನ್ನ ಭಾವವ ಬಿಟ್ಟು ಮಾಡುವ ಜನ ಜನಾರ್ಧನ ಪೂಜನೆ ॥
ಎಂಥ ನಾಡು ! ಪುರಾತನೋನ್ನತ ! ಬೇಡ ಎರಡನೆ ಯೋಚನೆ ॥

ರಾಜಕೀಯ ವಿಶಾರದೆ ಈ ನಾಡ ಕಟ್ಟಿದ ಭವ್ಯರು ?
ತೇಜಃಪುಂಜರು ರಾಜರಾಜರು ಓಜರೋಹೋ ! ದಿವ್ಯರು !
ಬುದ್ಧ ಬಾಪು ಅಶೋಕ ಅಕಬರ ಹರ್ಷ ವಿದ್ಯಾರಣ್ಯರು !
ಅವರ ವಂಶಜರಿಂದು ನಾವ್ ಸಾಮಾನ್ಯರಾದರು ಮಾನ್ಯರು.

ನನ್ನ ದುಡಿಮೆಯ ಕ್ಷೇತ್ರದಲಿ ಸಂಪನ್ನನಾಗುವೆ ಗುಣದಲಿ
ಹೊನ್ನ ಮಣ್ಣಿನ ಸೆಳೆಗೆ ಸೋಲದೆ ನಲಿವೆ ಕೂಡಿಕೆ ಹಣದಲಿ
ನೆರೆನುಡಿಯ ನೆರೆನಾಡ ನಂಟಲಿ ಗಂಟು ಗೋಜನು ತಾರದೆ
ತೊರೆದು ಮೋಸವ ಮೆರೆದು ಸಾಸವ ನಡೆದು ನುಡಿಯುವ ನೇರದೆ.

ನನ್ನ ದುಡಿಮೆಯೆ ನನಗೆ ಆಸರೆ, ಬೇಡ ಪರಋಣ–ಕೆಸರೆ
ಚೆನ್ನ ಬದುಕಿಗೆ ಬಳಗ ಕಟ್ಟುವೆ, ನೀಡಿ ನೇಹದ ಉಡುಗೊರೆ
ಬನ್ನಿ ಸೋದರ ಸೋದರಿಯರೇ ಕೇಳಿರೇ ಕಳಕಳಿಕರೆ
ತನ್ನಿ ಗೆಲವನು ನಾಡ ಕಟ್ಟುವ ಯೋಜನೆಗೆ ನಿಮ್ಮ ಕಾಣಿಕೆ.

೨೬–೩–೧೯೭೬

## ಅತೃಪ್ತಿ

ಓ ಅತೃಪ್ತಿ ಬಾ ಅತೃಪ್ತಿ ಮಹಾಕಾರ್ಯಕಾರಣ
ಜಡಗಟ್ಟಿದ ಮೈಮನಕೆ ತಾ ವಿದ್ಯುತ್‌ಸ್ಫುರಣ

ತೃಪ್ತಿಯ ಹಾಸಿಗೆಯಲ್ಲಿ ಸಂತುಷ್ಟಿಯ ಹೊದೆದು
ಮಲಗಿಹ ತನುಮನವ ಹೊಡೆದೆಬ್ಬಿಸು ಒದೆದು
ಅಲ್ಪತೃಪ್ತಿಯಿಂದ ಯಾವ ಮಹತಿ ಬಾಳಿಗೆ?
ಅಲ್ಪತೃಪ್ತರಿಂದ ಯಾವ ನಾಡು ಹೊಂದಿತೇಳಿಗೆ?
ಅನ್ಯಮಿಂದ್ರಂ ಕರಿಷ್ಯಾಮಿ ಎಂಬ ಛಲ ಗಂಡಿಗೆ
ತಾರೆಗಳನೆ ಕೊಯ್ದು ಮುಡಿವೆನೆಂಬಪೇಕ್ಷೆ ಹೆಣ್ಣಿಗೆ

ಇರಲು ನಾಳೆ ನಮ್ಮ ನಾಡು ನಂದನವನವಾಗದೆ,
ಕಲ್ಪವೃಕ್ಷವಿಲ್ಲೆ ಬೆಳೆದು ಲೋಕ ನಾಕವಾಗದೆ?

ಹೊಸತು ಹೊಸತು ಸಾಹಸಗಳ ತೋರು ನಮಗೆ ಸಾಧಿಸೆ
ದಿಗ್‌ದಿಗಂತಕೊಯ್ದು ನಿಲಿಸು ಹೊಸಲೋಕವ ಶೋಧಿಸೆ
ಇದ್ದಲ್ಲಿಯೆ ಸಾಯಗೊಡುವ ತೃಪ್ತಮನೋಭಾವವ
ಕಿತ್ತುಹಾಕು ಬೇರುಸಹಿತ, ಮೊಳೆಯಿಸು ಹೊಸ ಜೀವವ.

೨೬-೯-೧೯೭೬

## ತೆರವು ಮಾಡೀ ಮನೆಯ

ಕರಾರುಮೇಲೀ ಮನೆಗೆ ಬಾಡಿಗೆಗೆ ಬಂದಿರುವೆ-
ನೀನಿದನು ಮರೆಯಬೇಡ:
ಕ್ಷಣಕ್ಷಣಕ್ಕೂ,
ಪ್ರತಿದಿನ ಪ್ರತಿವರ್ಷವರ್ಷವೂ
ಈ ಮನೆ ನನ್ನದಲ್ಲ
ಇದಕೆ ಬೇರೊಬ್ಬ ಮಾಲೀಕನಿರುವನು-
ಎನುವುದನು ಮರೆಯದಿರು, ಮಿತ್ರ
ಇಂದಲ್ಲ ನಾಳೆ
ನೀನೀ ಮನೆಯ ಬಿಟ್ಟು ಹೊರಡಲೇಬೇಕು,
ತೆರವು ಮಾಡಲೆಬೇಕು ಮನೆಯ
ನೀ ಬಂದು, ಮನೆಯಲ್ಲಿ ನಿಂದು,
ಆಗಾಗ್ಗೆ ನೋಟೀಸು ಕೊಟ್ಟರೂ
ಬಾಡಿಗೆಯ ಕೊಡದೆಯೇ
ಬಡಿವಾರದ ಬದುಕ ಮೆರೆಯುತ್ತ
ಠಿಕಾಣಿ ಹಾಕಿರುವೆ
ತಳಕಚ್ಚಿ ಕೂತಿರುವೆ

ಎಂಜಲುಣಿಸಿನಾಯಂತೆ
ಗೆದ್ದಲಗೂಡ ತಾವು ಮಾಡಿಕೊಂಡಂತೆ ಹಾವು.
ಹೋಗಲಿ–
ಮನೆಯನಾದರು ಒಪ್ಪವಾಗಿಟ್ಟುಕೊಂಡಿಹೆಯಾ?
ತನ್ನದಾಗಲಿ ಹೆರರದೇ ಇರಲಿ
ಚೆನ್ನ ವಾಗಿರಿಸಿಕೊಂಡರೆ ಮನೆಯ
ಮನಸೂ ಚೆನ್ನ.
ಎಂದೋ ಒಮ್ಮೆಗೆ
ಸುಣ್ಣ ಬಣ್ಣ ಕಾರಣೆ ಮಾಡಿಸಿದರೆ ಸಾಕೇನು?
ನಿತ್ಯವೂ
ನೆಲವ ಕಸಗುಡಿಸಿ
ಮೂಲೆಮುಡುಕಿನ ಜೇಡಬಲೆ ಇಲ್ಲಣವ ತೆಗೆದು,
ತೊಳೆದು ಸಾರಿಸಿ ಮನೆಯ ಮಾಡಿ ಕನ್ನಡಿಯ ಮನದ,
ಮನೆಯೊಡೆಯನೇ ಇರುವನೇನೋ
ಎನುವ
ಭ್ರಾಂತಿ ಬರುವಂತೆ ಮಾಡಿ
ಕೊಡದಿದ್ದರೂ ಚಿಂತೆಯಿಲ್ಲ ಬಾಡಿಗೆಯ
ಮಾಲಿಕ ಬಂದು ಸೂಚನೆಯ
ಕೊಟ್ಟೊಡನೆ ತೆರವು ಮಾಡು ಮನೆಯ
ಕೊರಗದಿರು
ಮನೆಯ ಬಿಡಬೇಕೆ ಅಯ್ಯೋ ಎಂದು.
ಮನೆಯೊಡೆದು
ಮೆಚ್ಚಿದರೆ ನಿನ್ನ ನಡೆಯ,
ಕಡೆಯ ಮನೆಯೊಂದ ನೀಡುವನು ತಾನಾಗಿ,
ನೀನೀರಲು
ನಿತ್ಯಸುಖಿಯಾಗಿ–
ತೆರವು ಮಾಡಬೇಕಾಗಿಲ್ಲ ನೀನು
ಆ ಮನೆಯನೆಂದೂ.
ಇಲ್ಲ ಬಾಡಿಗೆ ಅದಕೆ, ಅರಸಿನ ಅಂಕೆ,

ಮಡದಿ ಮಕ್ಕಳ ಹೊರಿಕೆ–
ಎಲ್ಲವೂ ನಿಶ್ಶಂಕೆ.

ಏನೆಂದೆ?
ಮನೆ ಅವನದಲ್ಲ.
ನಿನ್ನ ಅಪ್ಪನದು–ಪಿತ್ರಾರ್ಜಿತ
ಎಂದೆಯಾ?
ಮರುಳಿ !
ಮನೆ
ನಿನ್ನ ಅಪ್ಪನ ಅಪ್ಪನಪ್ಪನಪ್ಪನ ಅಪ್ಪನಪ್ಪನ
ಸ್ವಂತ ಮನೆ–
ಬಲ್ಲೆಯಾ ನೀನು ವಂಶಾವಳಿಯ ಕೊಟ್ಟಕೊನೆ
ಎಲ್ಲಿಗೊಯ್ಯುವುದೆಂದು?
ನೋಟೀಸು ಬಂದಾಗ
ತೆರವು ಮಾಡಯ್ಯ ಮನೆಯ.
ನಿನ್ನ ಹಣೆಯ–
ಬರಹವಿದ್ದಂತೆ ಬರುವುದು ನೋಟೀಸು–
ಅದೆ ಬಾಡಿಗೆಯ ಕರಾರು:
ಹೆಚ್ಚಿನ ತಕರಾರು
ಕೊಡದೆ ಬಿಡೆ ಮನೆಯ,
ಮುಂದಿನ ಮನೆಗೆ ಪಯಣ ಸಲೀಸು.

೫–೯–೧೯೭೭

## ಗಜೇಂದ್ರ ಮೋಕ್ಷ

ಇದು ಸಾಗರವೆಂದವರಾರು?
ಸಾಗರವೆಂದವರಾರು?
ಸಾಗರವೆಂದವರಾರು? ಸಾಗರವೆಂದವರಾರು?
ಸಾಗರವಾದರೆ ಯಾವುದೊ ಹಡಗು

ಬಂದು ನಿನ್ನ ಕಾಪಾಡುವುದು ;
ಯಾವುದೊ ತೆಪ್ಪ ತೇಲುತ ಬಂದು
ಕಡಲಿನ ಕರೆಗೆ ನಿನ್ನನೊಯ್ಯುವುದು
ಗಾಳಿಗೆಳೆಯ ಒಡ್ಡೋಡುತ ಬಂದು
ಅಲೆಕುದುರೆಮೇಲೆ ನಿನ್ನ ಕೂರಿಸಿ
ಮರಳದಂಡೆಯೆಡೆ ಇಳಿಸುವನು.
ತಿಳಿಯಿತೆ, ಇದು ಸಾಗರವಲ್ಲ,
ಇದು ಸಾಗರವಲ್ಲಾ, ಅಲ್ಲಾ ಅಲ್ಲಾ.

ಪಯಣದ ಮೊದಲಿಗೆ ಕಣ್ಣಿಗೆ ಬಿದ್ದ
ಕೊಳವೋ; ನೀರು ಮೇಲೆ, ತಳದಲಿ ಕೆಸರು.
ಕಮಲವ ಕಂಡು, ಅದನೇ ಕೊಂಡು
ಲೀಲಾಕಮಲವದಾಗುವುದೆಂಉ
ನಿತ್ಯವು ಕೈಲಿಹುದೆಂದು ತಿಳಿಯುತ
ಮುಂದನು ಕಾಣದೆ ಕೊಳಕ್ಕೆ ಇಳಿದು
ಕಮಲವ ಕೊಯ್ದು ಸಂತಸದಿಂದ
ಎದೆಗವಚಿಕೊಂಡೆ, ಅವಿವೇಕಿ,
ನಿಂತೆ ಕೆಸರಿನಲಿ, ಏಕಾಕಿ.
ಸೂರ್ಯನೊ, ಮೆಲ್ಲಗೆ ಏರತು ಬಂದ
ನಡುಹಗಲು ನೆತ್ತಿನೇರಕೆ ನಿಂದ
ತಲೆ ಸುಡುತಿರೆ ಕುದಿನೀರಿನ ಸ್ನಾನ
ಗರಗಸದ ಹಲ್ಲು ಕತ್ತರಿಯಲಗು
ಕರಕರ ಚರಚರ ಕೊಯ್ದುಕತ್ತರಿಸೆ
ಕೆಳಗೆ ಕೆಸರಿನಲಿ ಕಾಲ್ಗಗಳ ಕಚ್ಚೆ
ಮಂಡಿಯವರೆಗೂ ಏರಲು ಕೊಚ್ಚೆ
ಕಾಲನು ತೆಗೆಯಲು ಕೆಸರಿಂದ
ಮಾಡಿದ ಯತ್ನ ಕೊರಳಿಗೆ ಸುತ್ತೆ
ಇನ್ನೂ ಕಮಲವ ಕೈಲಿ ಹಿಡಿದಿರುವೆ,
ಪಾರಾಗಲು ಕೆಸರಿನ ಕೊಳದಿಂದ

ವ್ಯರ್ಥವಾಗಿ ಕೂಗುತ್ತಿರುವೆ.
ನೀನೋ ಕೆಸರಲಿ ಒಂಟಿಯ ಸಲಗ
ಸುತ್ತಲು ನೋಡುತ ನಿಂತಿರೆ ಬಳಗ
ಕೆಸರಲಿ ಹೂತಿರೆ ತಾವರೆದಂಟು
ದಿನೆಗಳೆದಂತೆ, ತಿನಲೇನುಂಟು ?
ದಿನದಿನಕೂ ಬಾಡುವುದು ತಾವರೆ
ಹೊಟ್ಟೆತುಂಬುವುದೆ ನೋಡುತ ನಿಂತಿರೆ?
ನಿನ್ನೀ ಕಷ್ಟಕೆ ಯಾರಾಗುವರು?
ನೆನೆ ಗತಕಾಲದ ಆ ಗಜೇಂದ್ರನ
ನೆನೆನೆನೆ ಅವನನು ಆ ಪೊರೆದವನ
ಬಿಸುಡು ಕೈಯ ಬಾಡಿದ ತಾವರೆಯ
ಹಿಡಿ ಹಿಡಿ ಬಾಡದ ಒಳತಾವರೆಯ
ತಾವರೆಹೊಕ್ಕುಳನಡಿದಾವರೆಯ
ಕೆಸರಿಲ್ಲದ ನಿರ್ಮಲ ಜಲದಲ್ಲಿ
ಬಯಸಿದಾಗ ಅರಳುವ ತಾವರೆಯ
ಬಯಸು, ಬೇಡು, ಅರಳೆಂದು ತಾವರೆಯ
ಹಿಡಿ ಹಿಡಿ ಬಾಡದ ಆ ತಾವರೆಯ
ಕೂಗಿ ಕರೆ, ನೆರವೀವನ, ಹರಿಯ
ಒಪ್ಪಿಸು, ತಪ್ಪೊಪ್ಪುತ ತಾವರೆಯ
ಓಡಿ ಬರುವ ಕೇಳುತ ಕರೆಯ
ನೋಡು ನೋಡು: ಆ ಕೆಸರಿನ ಸೆರೆಯ
ಬಿಡಿಸಿ ನಿನ್ನ ಮೇಲೆತ್ತುವ ಪರಿಯ,
ನಿನಗೆ ದೊರೆವ ಆ ಬಿಡುತೆಯ ಸಿರಿಯ!

೧೭-೯-೧೯೭೭

# ಬೀಸಿ ಬಂದ ಗಾಳಿ

ತೆರೆ ಕಿಟಕಿಯ ಬಾಗಿಲ
ಬೀಸಿ ಬರಲಿ ಗಾಳಿ
ನವಯುಗ ವೈತಾಳಿ.

ತಿರುಗಿ ತಿರುಗಿ ದೇಶವ
ಅಲ್ಲಿನ ಸಂದೇಶವ
ಹೊತ್ತು ತರಲಿ ಮಾರುತ
ಹೊಸ ದಾರಿಯ ತೋರುತ

ಬರಮಾಡಿಕೊ, ಬರಲಿ–
ದಿಗಂತಗಾನಕಿವ ಮುರಲಿ:
ನೂತನ ಚೇತನ ತರಲಿ,
ಅತಿಥಿಯಾಗಿ ನಿಲ್ಲಲಿ.

ಬಂದ ಬಂದ ಬಂದನಹ
ತಂದ ತಂದ ಗಂಧವಹ
ಹೊಸ ಹೂಗಳ ಪರಿಮಳ
ಹೊಸ ಬಾಳಿಗೆ ಹೊಸ ಬಲ.

ಏನಿದೇನಿದೆದ್ದೇಳಿ,
ಬಾಗಿಲನ್ನು ಮುಚ್ಚಿಕೊಳಿ–
ಅದನತಿಥಿ ಬಿರುಗಾಳಿ
ತಡೆಯಿರವನ ದಾಳಿ.

೧೦-೧-೧೯೭೭

# ನಡಸುವ ಕೈ

(ಒಂದು ಅನುಭವ)

'ದುಡ್ಡೆಷ್ಟು ಕೊಡಬೇಕು, ಹೇಳಪ್ಪ?'
'ಎರಡು ರೂಪಾಯಿ ಮೇಲೈವತ್ತು ಪೈಸೆ'
'ಕತ್ತಲೆ ಹೊತ್ತು, ಮುದುಕ ನನ್ನನ್ನ,
ಕೈಲಾಗದವನನ್ನ, ಮನೆಮುಟ್ಟಿಸಿದ್ದಕ್ಕೆ
ತೆಗೆದುಕೊ ಅಣ್ಣಾ, ಮೂರು ರೂಪಾಯಿ'
'ಮೀಟರ್‍ರು ತೋರ್‍ಸ್ಲೋ ದರದ ಮೇಲ್ನಂಗೆ
ಮೂರು ಪೈಸಾನು ಬೇಡೀ ಸ್ವಾಮಿ'.
'ಸರಿಯಪ್ಪ ಹಾಗಾದ್ರೆ, ತೆಗೆದುಕೊ ಅಣ್ಣಾ'.

'ಏನ್‌ಸ್ವಾಮಿ ಕತ್ಲೇಲಿ ಕನ್ನಡಕದ್ ಗೂಡನ್ನ
ತೆಗೆದ್ರಲ್ಲ ಜೇಬಿಂದ?'
'ಪರ್ಸ್‌ಗಿಂತ ಕನ್ನಡಕದ್ ಗೂಡೇ ವಾಸಿ,
ಮಡಗಿರೊ ದುಡ್ಡನ್ನ ತೆಗೆಯೋದಕ್ಕೆ.
ಪುಟ್ಟ ಪರ್ಸಿನ ಬಾಯಿ ಸೊಟ್ಟನ್ನ ಬೆರಳಿಗೆ
ಸರಿಯಲ್ಲ; ನೋಡಪ್ಪ ನನ್ನ ಬೆರಳ.
ಈ ಸೊಟ್ಟ ಬೆರಳಲ್ಲೆ ಬೇಕಾದಷ್ಟನ್ನ
ಬರೆದಿದೆ ಈ ಕೈ'.
'ನಿಮ್ ಬೆರಳು ಸೊಟ್ಟಾದ್ರೆ ನನ್ ಕಯ್ಯೆ ಸೊಟ್ಟಲ್ಲ?
ನೋಡೀ ಸ್ವಾಮಿ'
'ಏನಪ್ಪ, ಹಾಗೇನು !'
'ತೋಳಿನ ಜೊತೆಗೇನೆ ನೇತಾಡ್ತಿದೆ ನೋಡಿ'
'ಆ್ಯಕ್ಸಿಡೆಂಟ್ ಏನಾದ್ರೂ ಆಯ್ತೇನಪ್ಪಾ?'
'ನಾ ಹುಟ್ಟಿದ್ದೇ ಒಂದು ಆ್ಯಕ್ಸಿಡೆಂಟ್ ಸ್ವಾಮಿ–
ಈ ಸೊಟ್ಟ ಸೊರೇಕಾಯ್–ಕಯ್ ಸಂಗಾತ'.
'ನಡಸೋ ಕಯ್ ಬಲಗಯ್ಯೆ ಹಾಗಿದೆಯಲ್ಲಪ್ಪಾ?
ಹ್ಯಾಗಾದ್ರೂ ನಡಸ್ತೀ?'

'ನಾ ನಡಸೋದೇನ್ಬಂತು,
ನಡಸೋ ಕಯ್ಯೇ ಬೇರೆ'.
'ಹಾಗೆ ಅಂತೀಯಾ?'
'ಅಲ್ದೆ ಮತ್ತೆ? ಆರ್ ವರ್ಷ ಆಯ್ತು,
ಒಂದ್ಯಾಕ್ಸಿಡೆಂಟೂ ಆಗಿಲ್ಲ ಈ ತನಕ'.
'ಹೌದ್ಹೌದು, ನೀ ಹೇಳಿದ್ ಸತ್ಯ.
ನನ್ನ ಈ ಬೆರಳು ಏನ್‌ತಾನೆ ಬರೆದಾವು?
ಪಾಪ, ಪಾಪ'.

೨೭-೭-೧೯೭೭

## ಒಂದು ಹಕ್ಕಿಯ ಹೇಳಿಕೆ

ಚಿಕ್ಕಳ ಮೂಳೆಯ ಪಂಜರದೊಳಗೆ
ಸೋಹಂ ಪಕ್ಷಿಯು ನಾನಲ್ಲ;
ಕಾಳಿನಾಸೆಗೆ ಕಣಿ ಚೀಟಿಯೆತ್ತುವ
ಗೂಡಿನ ಗಿಳಿಯೂ ನಾನಲ್ಲ.

ಭೂತದ ಪಾತಾಳದಾಳಕ್ಕೆ ಇಳಿಯುವ
ಪಾತಾಳಗರುಡ ನಾನಲ್ಲ;
ಭವಿತವ್ಯದಾಕಾಶವೃಕ್ಷದ ಫಲಗಳ
ಭುಂಜಿಪ ಭೇರುಂಡ ನಾನಲ್ಲ.

ವರ್ತಮಾನದ ನೆಲದ ನೆಂಟರ ಜೊತೆಗೂಡಿ
ನಾಲ್ಕು ಕಾಳನು ತಿಂದು ನಲಿಯುವೆನು;
ತಿಂದುಂಡು ನಲಿವಾಗ ಬಂದ ಭವದ ಪರಿಯ
ನನ್ನ ನುಡಿಯಲಾನುಲಿಯುವೆನು.

೧೪-೯-೧೯೭೭

# ಅಂಶಿಕ ವಿಜ್ಞಾನ

ನಿತ್ಯವು ನಾ ಪರಮಾತ್ಮನಂಶದೊಳು
ಬೆರೆಯುತೆ, ತೊರೆಯುತ್ತಿಹೆ ಜಗವ;
ನಿತ್ಯವು ಸಮುಸಮೆಯುತೆ ತೀರಿಸುತಿವೆ
ಕರಣಗಳೂಳಿಗದಲಿ ಕಡವ.

ಬೆಳಗಿನ ಸಂಜೆಯ ರಂಜನೆ ತೋರುತ
ಹಸುರಿನಂಜನದಿ ತಂಪಿಸುತ
ಒಳಗಣ್ಣಿಗೆ ಹೊರಗಣ್ ದುಡಿಯುತ್ತಿದೆ
ರೂಪತನ್ಮಾತ್ರನ ತೋರಿಸುತ.

ಕಬ್ಬಿನ ಹುಣಿಸೆಯ ಮೆಣಸಿನ ಮಾವಿನ
ಬೇವಿನ ರುಚಿಗಳ ಸಂಗಡಿಸಿ
ಹಬ್ಬ ಮಾಡುತಿದೆ ರಸನೆ ವ್ಯಂಜಿಸುತ
ರಸತನ್ಮಾತ್ರನ ವಿಂಗಡಿಸಿ.

ಮಲ್ಲಿಗೆ ಜಾಜಿ ಪಾರಿಜಾತಗಳ
ಸುಗಂಧ ಸೌಸವವನು ನಾಸಿಕ
ಸಲ್ಲಿಸಿ ಪೃಥ್ವಿಯ ತನ್ಮಾತ್ರನನು
ಘ್ರಾಣೇಂದ್ರಿಯ ಕಾಣಿಸುತಿಹುದು.

ಮೇಘ ಮಂಚಿಕೆಯ ಮೇಲ್ಗಡೆ ಮಿಂಚಿನ
ಮೋಹಿನಿ ಬಳುಕುತ ಕುಣಿಯುತಿರೆ
ತಾರೆಗೆಜ್ಜೆಯಲಿ ಕೇಳಿಸಿ ಕರ್ಣಕೆ
ವೇದ್ಯ ಶಬ್ದತನ್ಮಾತ್ರಕನು.

ಮಡದಿಯ ಮಕ್ಕಳ ಮೊಮ್ಮಕ್ಕಳ ಮೈ-
ಸೋಂಕಿನ ಪುಲಕದ ನಲವಿನಲಿ
ತಂದೆ ತಾಯಿ ಗುರುಹಿರಿಯರಡಿಗಳಲಿ
ಸ್ಪರ್ಶತನ್ಮಾತ್ರನರಿವು ಘನ.

೧೦-೧೧-೧೯೭೭

## ವಿಶ್ವಕುಟುಂಬ ಗಾನ

ಕಣಜ ತುಂಬಿರಬೇಕು ಕರೆವ ಹೈನಿರಬೇಕು
ಮನೆಯ ಸುತ್ತಲು ಹಸಿರು ನಲಿಯಬೇಕು
ದಣಿವ ಕಾಣದ ದುಡಿಮೆ ಹಾಲು ಜೇನನು ಹರಿಸಿ
ಸಂತೋಷ ಸಾಗರವೆ ಉಕ್ಕಬೇಕು.

ತನ್ನ ಕಾಲಿನ ಮೇಲೆ ತಾನು ನಿಲ್ಲುವ ಗುರಿ
ಹಾಸಿನಳತೆಗೆ ಕಾಲು ಚಾಚುವ ಪರಿ
ಉನ್ನತದ ಚಿಂತನಕೆ ಸರಳ ಬದುಕಿನ ಸಿರಿ
ಕೂಡಿರಲು ಬದುಕು ಸಗ್ಗಕೆ ಸರಿ.

ಮನೆ ಮನೆಯಲ್ಲೂ ಜ್ಞಾನದೀಪ ಬೆಳಗುತ್ತಿರಲು
ಇರುಳೆಲ್ಲ ಹಗಲಾಗಿ ಬೆಳಗಬೇಕು,
ಮನೆ ಮನೆಯಲೂ ಸ್ನೇಹ ಸೌಹಾರ್ದ ತುಂಬಿರಲು
ಊರೆಲ್ಲ ಒಂದೇ ಕುಟುಂಬವಿರಬೇಕು.

ತೋಟ ಹೊಲಗದ್ದೆಗಳು ರಾಟೆ ಕೈಕಸಬುಗಳು
ಆಟ ಪಾಟದ ಕೂಟ ನಾಟಕದ ನೋಟ
ಸಾಟಿ ಯಾವುದು ನಮ್ಮ ಊರಿಗೆನ್ನುವ ಹಾಗೆ
ಊಟವಿಡಬೇಕು ಮೈಮನಸುಗಳಿಗೆ.

ಮನೆಯ ಕಲ್ಯಾಣವಾಗಲಿ ಊರ ಕಲ್ಯಾಣ
ಊರ ಕಲ್ಯಾಣವೇ ದೇಶಕಲ್ಯಾಣ
ದೇಶಕಲ್ಯಾಣವೇ ಲೋಕಕಲ್ಯಾಣ
ಲೋಕಕಲ್ಯಾಣ ವಿಶ್ವಕುಟುಂಬ ಗಾನ.

೧೯-೧೧-೧೯೭೭

## ಬುದ್ಧಿಯ ಮಾತು

('ಬುದ್ಧಿಯ ಮಾತು ಹೇಳಿದರೆ ಕೇಳಬೇಕಮ್ಮ ಮಗಳೆ' ಎಂಬ ದಾಸರ ಪದದ ಧಾಟಿ)

ಬುದ್ಧಿಯ ಮಾತು ಹೇಳಿದರೆ । ಕೇಳಬೇಕಮ್ಮಾ ತಾಯಿ ।
ಬದ್ಧಳಾಗಿ ಮನೆಯ ಸೌಖ್ಯ । ಚಿಂತಿಸಬೇಕಮ್ಮಾ ತಾಯಿ ॥

ಗಂಡಹೆಂಡಿರ ಕೊಂಡಿಯಾಗಿ । ಮಕ್ಕಳು ಬೇಕಮ್ಮಾ ತಾಯಿ ।
ಧಂಡಿಯಾಗಿ ಮಕ್ಕಳ ಹಡೆಯೆ । ಸುಖವೆಲ್ಲಿಹುದಮ್ಮಾ ತಾಯಿ ॥

ಹತ್ತುಮಕ್ಕಳ ಹೆತ್ತರೆ ಕುತ್ತಕೆ । ಪೀಳ್ಗವ ಕೊಡುವೆ ತಾಯಿ ।
ಮುತ್ತಿನಂಥ ಮೂರು ಮಕ್ಕಳು । ಸಾಕು ಸಾಕೋಕೆ ತಾಯಿ ॥

ಗಂಡು ಒಬ್ಬ ವಂಶದ ಕುಡಿಯು । ಹಬ್ಬಿ ಬೆಳಸೋಕೆ ತಾಯಿ ।
ಕಂಡೋರ ಮನೆಗೆ ಕೊಡೋಕೊಬ್ಬಳೆ । ಹೆಣ್ಣು ಸಾಕು ತಾಯಿ ॥

ಮೂರನೆಯ ಮಗನೊ ಮಗಳೊ । ನಿನ್ನಿಷ್ಟದಂತೆ ತಾಯಿ ।
ಸಾರಿ ಸಾರಿ ಹೇಳ್ತೀನಮ್ಮ । ಮೂರಕೆ ಮುಕ್ತಾಯ ತಾಯಿ ॥

ಮಕ್ಕಳ ಲೆಕ್ಕ ಮಿತಿಯಾಗಿದ್ರೆ । ರೊಕ್ಕ ಹೆಚ್ಚುತ್ತೆ ತಾಯಿ ।
ರೊಕ್ಕ ಹೆಚ್ಚಾಗಿದ್ರೆ ರೋಗ । ತಡೆಯಬಹುದು ತಾಯಿ ॥

ಹೊಟ್ಟೆ ಬಟ್ಟೆ ಪೂರೈಕೆಗೆ । ಕಷ್ಟದ ಕಾಲ ತಾಯಿ ।
ಇಷ್ಟಪೂರ್ತಿ ಮಕ್ಕಳಾದರೆ । ಭ್ರಷ್ಟ ನೀತಿ ತಾಯಿ ॥

ಸಾಲು ಸಾಲು ಮಕ್ಕಳು ಸಾಲದ । ಶೂಲ ಕಣೇ ತಲಯಿ ।
ಹಾಲಿನಂಥ ಸಂಸಾರಕ್ಕೆ । ಕಟ್ಟಿ ಕಟ್ಟಮ್ಮ ತಾಯಿ ॥

ಸಣ್ಣ ಸಂಸಾರವ ಸಲಹಿ । ಸುಖವಾಗಿದ್ರೆ ತಾಯಿ ॥
ಚೆನ್ನು ದೇಶದ ಬದುಕು ಕೂಡ । ತಿಳಿಯಮ್ಮ ನೀ ತಾಯಿ ॥

ಮಕ್ಕಳ ಅಂಕಿ ಕಡಮೆ ಮಾಡೋ । ಮರ್ಮ ಸುಲಭ ತಾಯಿ ॥
ತಕ್ಕ ವೈದ್ಯರ ಸಲಹೆ ನಿನಗೆ । ಪುಕ್ಕಟೆ ಉಂಟು ತಾಯಿ ॥

ಕಾಲಕೆ ತಕ್ಕ ಬುದ್ಧಿ ದೇವರು । ಕಲ್ಪಿಸುತಾನೆ ತಾಯಿ ॥
ಕಾಲಕೆ ತಕ್ಕ ಬುದ್ಧಿ ಮಾತು । ಹೇಳುತಿರುವೆ ತಾಯಿ ॥

೧೯-೧೧-೧೯೭೭

## ಹಾಸ್ಯ ಚಕ್ರವರ್ತಿ

ಓ ಚಾರ್ಲಿ, ನೀನಿಂದು ಕಣ್ಣು ಮುಚ್ಚಿದೆ ಎಂಟು–
ಹತ್ತರ ಮೇಲೆ ಎಂಟು ವರ್ಷಗಳ ಗಡುದಾಟಿ
ಕ್ರಿಸ್ತ ಕರುಣಾಂಕಿತದ ದಿನದಂದು, ಕರುಣಾಮೂರ್ತಿ:
ವಾಚಾಳಿಯಾಗದೆ ತೆರೆಯಮೇಲೆ ಮೌನಕೆ ನಾಟ್ಯ
ಗೋಚರ ವಿಶ್ವಭಾಷಾ ಪದವಿಯನ್ನು ಸಂಗಡಿಸಿ,
ವಿಶ್ವಜೀವನರಂಗದ ಭಿಕಾರಿ ಬೇವಾರ್ಸಿಯನು
ಶಾಶ್ವತ ಪಾತ್ರವಾಗಿ ನಿರ್ಮಿಸಿ ನಟಿಸಿ ಅದನು
ನೀಚ ಪಾತ್ರವರ್ಗದಲುಚ್ಚ ಗುಣಿಯೆನಿಸಿ ಮೆರೆದೆ.
ನಿನ್ನ ಬೀದಿ ಭಿಕಾರಿ ವೇಷದ ಸೊಗಸೇ ಸೊಗಸು:

ಕೊಳಗ ಟೋಪಿ, ದೊಗಲೆ ಷರಾಯಿ, ಬಳಕುವ ಬೆತ್ತ,
ಕೆಳ ಮೂಗ ನೊಣ ಮೀಸೆ, ಕಿಸಿಬಾಯಿ, ಲೊಡ ಲೊಡ ಬೂಡ್ಸು.
ನನ್ನಂಥ ಕೋಟಿ ಶತಕೋಟಿ ನೋಟಕರನ್ನು
ಹಾಸ್ಯದ ಹಡಗಿನಲ್ಲಿ ಕರೆದೊಯ್ದ ನಗೆಗಡಲ
ಮೇಲೆ ಅಳುವಿನಲೆಗಳ ನಡುವೆ–ಇನ್ನೆಲ್ಲಿ ಆ ಕಾಲ !

೨೫–೧೨–೧೯೭೭

## ಅದೆ ಅದೆತನ

ಅದೆ ಅದೆತನ ಬೇಡ । ಅದೆ ಅದೆತನ ಬೇಡ ।
ಏಕತಾನದಲ್ಲಿ ಬದುಕ ಬೋಳುಮಾಡಬೇಡ ॥

ಇರಲಿ ಕೊಂಚ ಅದು । ಇರಲಿ ಕೊಂಚ ಇದು
ಇರಲಿ ಅದೂ ಇದೂ ಉದೂ
ಇರಲಿ ಬದುಕಿನಲಿ ಸುಖ । ನಡುವೆ ಬರಲಿ ಎಷ್ಟೆ ದುಃಖ
ಬದುಕೆ ಹೀಗೆ ಇಮ್ಮುಖ.

ಗದ್ಯ ಬೇಕು ಗದಿಸಲು । ಪದ್ಯ ಬೇಕು ಹಾಡಲು
ಬೆರೆತರೆರಡು, ಅದೇ ಚಂಪು ;
ಇದ್ದರೆಲ್ಲರೂ ಗಂಡು । ಇದ್ದರೆಲ್ಲರೂ ಹೆಣ್ಣು
ಇರದು ಮಗುವ ತೊದಲಿಂಪು.

ಕಾಗೆಯಿಂದ ಕೋಗಿಲೆ । ಮಾಗಿ ವಸಂತ ಸೆಲೆ
ಒಂದಕೊಂದು ಮೂ, ನೆಲೆ–
ಮಾವು ಬೇವು ಹುಣಿಸೆ ನೆಲ್ಲಿ;
ಬೇರೆ ಬೇರೆ ರುಚಿಗೆ ಬೆಲೆ.

ದ್ವಂದ್ವವನ್ನು ಹರಿದು ಹಾಕಿ । ಬದುಕನೇ ಅತ್ತ ನೂಕಿ
ನಿಲ್ಲಲಹುದೆ ಏಕಾಕಿ?
ದ್ವಂದ್ವದಾಚೆಗಿರುವ ಅದೇ । ಅದೇತನವ ಪಡೆಯಲು
ಏನೂ ಉಳಿಯದು ಬಾಕಿ

೧೮-೨-೧೯೭೮

## ನೀಡಿದ ಕೈ

ಚಿಕ್ಕಂದಿನಿಂದಲೂ
ಚಿತ್ರಕಲೆಯಲಿ ನನಗೆ ಹುಚ್ಚು;
ಅಷ್ಟಿಷ್ಟು ಕಲತಿದ್ದೆನಾಗಾಗ
ಶಾಲೆಯೋದಿನ ಜೊತೆಗೆ ಕೆಲರು ಗುರುಗಳ ಬಳಿ;
ಒಂದು ಮಟ್ಟ ಮುಟ್ಟಿ ಇನ್ನೂ ಕಲಿಯಬೇಕು
ಎನ್ನವಾಸೆಯ ಗಗನದಲಿ ಗೋತ ಹೊಡೆಯುತ್ತ ಹೊಡೆಯುತ್ತ
ಗಿಡುಗನುಕ್ಕಿನ ಕೊಕ್ಕಿಗೆ ಸಿಕ್ಕುತ್ತ
ಸೂತ್ರ ಹರಿಯೆ,
ಕೆಳಕ್ಕೆ ಕೆಡೆದುಬಿದ್ದು,
ಆಸೆಯನೆ ತೊರೆದು,
ಓದಿನೊಯಸಿಸ್ಸಿನಲೆ ತಂಗಿ ತಣಿದು,
ಸ್ನಾತಕೋತ್ತರ ಶಿಕ್ಷಣವನು ಮುಗಿಸಿದ್ದಾಯ್ತು.
ಮುಗಿಸಿ, ಮರುಭೂಮಿಯಲಿ ಮುಂಗಾಣದಿರುವಂತು,
ನನ್ನ ಬದುಕಿನ ದೋಣಿ–ಚುಕ್ಕಾಣಿ–
ಗುರವರ್ಯ ವೆಂಕಣ್ಣಯ್ಯ–ಕಣ್ಣಯ್ಯ–
ಬೂದಿ ಮುಚ್ಚಿದ ಕೆಂಡ ಉರುಬಿದರು;
ಕಲ್ಕತ್ತೆಗೋ ಶಾಂತಿನಿಕೇತನಕೊ ತೆರಳಿ
ಚಿತ್ರಕಲೆ ಕಲಿಕೆಯಲಿ
ನಾ ನಿಷ್ಣಾತನಾಗುವ ಪರಿಯ ಕಾಣಿಸಿದರು.
ಹಿತವರು ಕೊಟ್ಟ ಹತ್ತು ರೂಪಾಯಿ

ಹಾರುವ ರೆಕ್ಕೆ ಮೂಡಿಸಲು ದೂರ ಪ್ರಯಾಣಕ್ಕೆ,
ಹೊರಡುವ ದಿನ ಬರಲು,
ರೈಲು ನಿಲ್ದಾಣಕ್ಕೆ ನಡೆದೆ ಪಯಣಿಸಲು:
ಹರಯಕ್ಕೆ ಬಂದ ಮಗನಲ್ಲಿ ಭರವಸೆಯಿಟ್ಟು,
ದೂರದೆಡೆಯಲ್ಲಿ ನಾನಿರಲೊಪ್ಪಿ,
ನನ್ನ ತಂದೆ
ಬಂದಿದ್ದರೆನ್ನ ಬೀಳ್ಕೊಡಲು :
ಆ ವೇಳೆಗೇ ಬಂದ ವೆಂಕಣ್ಣಯ್ಯ ಗುರು
ಕೂಡಿಕೊಂಡರು ನಮ್ಮನ್ನು.
(ಅನಿರೀಕ್ಷಿತದ ಬರವು, ಏನೆಂಥ ವಾತ್ಸಲ್ಯ !)
ರೈಲು ಹೊರಡುವ ವೇಳೆ ಹತ್ತಿರವಾಗಿ
ನಾನು ಗಾಡಿಯ ಹತ್ತಿ ಕುಳಿತೆ ಕಿಟಕಿ ಬಳಿ.
ನೀರು ಪೊರೆಗಟ್ಟಿದ್ದ ಕಣ್ಣನೊರಸುತ್ತ,
ಜೇಬ ತಡಕಾಡಿ, ನುಡಿದರು ತಂದೆ:
"ಮೂರು ಕಾಸೂ ಇಲ್ಲ, ಬರಿಗೈ, ನಿನಗೆ ಏನು ತಾನೆ ಕೊಡಲಿ"
ಎಂದು ಕೊರಳು ಬಿಗಿದಿರೆ ಸೆರೆಯುಬ್ಬಿ, ನಶ್ಯದ ಡಬ್ಬಿ
ಸಿಕ್ಕಿತು ಕೈಗೆ, ದುಃಖಶಮನೋಪಕಾರಿ.
ನಾನು ಕೆಳಗಿಳಿದು, ಇಬ್ಬರಿಗೂ ನಮಸ್ಕರಿಸಿ,
ಮತ್ತೆ ಗಾಡಿಯನೇರಿ ಕುಳಿತೆ–
ಅಗಲಿಕೆಯಳಲ
ಹೆಬ್ಬಯಕೆ ನೆರವೇರಲಿಹ ಕನಸು ನುಂಗಿರಲು
"ಈ ಹೊತ್ತೆ ನಿಮ್ಮನ್ನು ನೋಡಿದ್ದು; ನೀವು
ಪುಣ್ಯವಂತರು, ಇಂಥ ಬುದ್ಧಿವಂತ ಪುತ್ರನ
ಪಡೆದಿಹಿರಿ. ಏನು ಮಾಡುವುದು ? ನನ್ನದೂ ಬರಿಗೈ:
ಕೈತುಂಬ ಇರುವುದಾಶೀರ್ವಾದ ಮಾತ್ರ
ಈ ಶಿಷ್ಯನಿಗೆ ಕೊಡಲು.
ನಶ್ಯದ ಡಬ್ಬಿಯನೂ ಮರೆತೆ
ಹೊರಟುಬರುವಾತುರದಲಿ
ಕೊಡಿರಿ

ದಯವಿಟ್ಟು
ಒಂದು ಚಿಟಿಕೆ"-ಎಂದು
ಒಡ್ಡಿದರು ಅಂಗಯ್ಯ, ಗುರು.
ನೀಡಿದ ಕಯ್ಯೆ ಹೊರತು
ಎಂದೂ ಒಡ್ಡಿದ ಕಯ್ಯಲ್ಲ ಅದು,
ಒಡ್ಡಿತೊಮದು ಚಿಟಿಕೆ ನಶ್ಯಕ್ಕೆ
(ಒಂದು ಗುಮಾಸ್ತೆಯ ಕಯ್, ಇನ್ನೊಂದು ಪ್ರೊಫೆಸರದು!)
ಒಡ್ಡಿದಾ ಕಯ್ಯೆ ಮೇಲೆದ್ದು ಮುಂಗಯ್ಯಾಗಿ
ನೀಡಿತೆನಗಕ್ಷಯ್ಯ ನಿಧಿಯ, ಹರಕೆಯ ಹೊನ್ನ,
ಕಂಬನಿಯುದುರೆ ತಂದೆ ಕಣ್ಣಿಂದ ಅಕ್ಷತೆಯಾಗಿ
ಕೂಗೆ ರೈಲಿನ ಸಿಳ್ಳು ಬೀಳ್ಕೊಡಿಗೆ ಮೌನವ ಸೀಳಿ.

೨೪-೨-೧೯೭೮

## ಹಸು–ಪಶು

ಹಸುರು ಹುಲ್ಲು ಎಲ್ಲ ಕಡೆ
    ಒಂದೇ ತರ ಒಂದೇ ಪರಿ
ಅದನು ಮೇವ ಹಸುಗಳೂ
    ಒಂದೇ ಬಗೆ ಎಲ್ಲ ಕಡೆ:
ಹಸುವಿನ ಹಾಲ್ಕುಡಿವ ನಾವು
    ಒಮ್ಮೆ ಮನುಜ, ಒಮ್ಮೆ ಹಾವು.
(ಮನುಜ ಜಾತಿಯೊಂದೆ ವಲಂ!)
    ಹಸುವೆ ಮನುಜ? ಅಲ್ಲ, ಪಶು.

೨೩-೩-೧೯೭೮

# ಮಹಾನದಿ

ಹರಿಯುತ ಬಂದು ಹರಿಯುತಲಿಹುದು
ಹರಿದು ಬಂದೆಡೆಗೇ ಹರಿಯುತ ಮರಳಿ:
ನಿಲ್ಲದೆ ನಿಲ್ಲದೆ ನಿಲ್ಲದೆ ನಿಲ್ಲದೆ
ಎಲ್ಲವು ಎಲ್ಲವು ಎಲ್ಲವು ಎಲ್ಲವು
ಹರಿಯುತಲಿಹುದು ;
ಹರಿ ಹರಿ ಹರಿ ಹರಿ ಹರಿ ಎನ್ನುತ
ಹರಿಯುತಲಿಹುದು.
ಹೊರಟಲ್ಲೆ ನಿಂತರೆ ನಿಂತಲ್ಲೆ ನಿಂತರೆ
ಎಂತೀ ಆದ್ಯಂತವಿಲ್ಲದ ಪಯಣ?

ಹರಿವಿಗೆ ನಿಲುಗಡೆ ಬಾರದೆ ಇರಲು
ದೊರಕಿತು ಗಾಲಿಯ ಗಿರಗಿರ ತಿರುವು:
ನೆರವಿಲ್ಲದ ತಿರುವು ತಂತಾನೆ ತಿರುವು
ಬರವು ಇರವು ತೆರವು–ಇದರಿಂದ ತಿರುವು.
"ಸ್ಥಾವರಕಳಿವುಂಟು ಜಂಗಮಕಳಿವಿಲ್ಲ"–
ಹರಿವು ತಿರುವು ಸೇರಿ ಜಗ ಜಂಗಮ,
ಹುಟ್ಟು ಸಾವಿನ ಲೀಲೆಯಲಿ ಸರ್ವಸಂಗಮ.

ತಿರುವಿನ ತುಂಬೆಲ್ಲ ಬೆಳಕಿನ ಚುಕ್ಕಿ
ನೀಲಾಂಬರದಲ್ಲಿ ಚಿತ್ತಾರ ನಕ್ಕಿ
ಹರಿವಂತೆ ಕಾಂಚಿ ಹರಿವಿಲ್ಲದ ಪರಿಯ
ಅರಿವರೆ, ಬೇಕಯ್ಯ ಕೃಪೆ ಹರಿಯ.
ಅದಕಾಗಿ ಹರಿ ಹರಿ ಹರಿ ಹರಿ ಎನ್ನುತ
ಹರಿವಿನಲಿ ಅರಿವಾಗಿ ಬೆರೆ ಕರಗುತ

೨೯–೩–೧೯೭೮

# ಏಕಾಂತ

ಒಂದೇ ಒಂದೇ
ಕಡೆಗೆಲ್ಲ ಒಂದೇ
ಏಕಾಂತ
ಅದು ನೀನೇ
ನೀನೇ ಅದು–
ಅವಿಭಕ್ತಿಯಲ್ಲಿ
ಸವಭಕ್ತಿ :
ಸಪ್ತ ಭೂಮಿಕೆಯ
ಸಪ್ತ ವಿಭಕ್ತಿ :
ಏಕ
ಏಕವನು
ಏಕದೊಡನೆ
ಏಕದಿಂದಾಗಿ
ಏಕದ
ಏಕಾಂತದಲಿ
ಭಜಿಸು;
ತ್ಯಜಿಸು
ಏಕದ
ಅನೇಕವನು.
ಏಕಾಂತದಲಿ
ಏಕವಾಗಿದ್ದಿರುತ
ಎಲ್ಲದರೊಡನೆಲ್ಲವಾಗಿರು,
ನೀರಿನ ಜೊತೆ ಬೆಲ್ಲವಾಗಿದ್ದು
ಅನೇಕಾಂತವನು ಹೊದ್ದು.

೨-೪-೧೯೭೮

# ದಾನಿಗಳು

ನೀವು ದಾನಿಗಳು
ಮಹಾ ದಾನಿಗಳು
ಹಣದ ರಾಶಿಯ ಮೇಲೆ
ನಿಂತ ನೀವು
ಉದ್ದುದ್ದ ದಾನಿಗಳು
ಉದ್ದಾನಿಗಳು
ಅನ್ಯಾಯ ಗಳಿಕೆಯ
ಅನ್ಯರ ಹೊಲದಲ್ಲಿ
ಹುಸಿ ಬೀಜವನು ಬಿತ್ತಿ
ಪಾಪದ ಫಸಲನು
ಕೊಯಲು ಮಾಡಿ
ಕತ್ತಲು ಕಣದಲ್ಲಿ
ಒಟ್ಟಿದ ಧಾನ್ಯ
ಕಪ್ಪನೆ ಹಣವಾಗಿ
ಜಪ್ಪನೆ ಬೆಳೆಯೆ
ಕರಿಯ ಘಟ್ಟದ ಮೇಲೆ
ಸಿರಿರಮಣ ನೀವಾಗಿ
ನಿಡುನಿಂತ ನೀವು
ಉದ್ದನೆ ದಾನಿಗಳು
ಉದ್ದಾನಿಗಳು.
ಕಪ್ಪು ಕವಿದ ಹಣವ
ಬಿಳಿದಾಗಿ ಮಾಡಲು
ಕಲ್ಯಾಣ ಮಂಟಪ;
ಆಳುವ ರಂಗದ
ಪಾತ್ರದ ಪಟುಭಟರ
ದಿಬ್ಬಣದ ನಡೆಮಡಿಗೆ
ರತ್ನಗಂಬಳಿ ಹಾಸು;

ತಿರುಪತಿ ತಿಮ್ಮಪ್ಪನ
ಹುಂಡಿಗೆ ಧಂಡ್ಯಾಗಿ
ಚಿನ್ನದ ಕಾಸು
("ಪಾಪಿಯ ಧನ ಪ್ರಾ-
    ಯಶ್ಚಿತ್ತಕಲ್ಲದೆ
    –ಸತ್ಪಾತ್ರಕ್ಕೆ
    ಸಲ್ಲುವುದೇನಯ್ಯ?"–
ರಾಜಕಾರಣಿಗಳ
ಬೊಬ್ಬೆಯ ಬಾವುಟಕೆ
    ರನ್ನದ ಕೋಲು:
ಬೆಳಕೇ ಕಾಣದ
    ಸೊವೆನೀರು ಸಂಪುಟಕೆ
    ಸವರನ್ನು ಕಾಣಿಕೆ
ಇತ್ಯಾದಿ ಇತ್ಯಾದಿ
ದಾಂಭಿಕ ಮೆರೆತಕ್ಕೆ
ಗುಂಭಗುಸುಕನ್ನ
ಗಾರುಡಿ ವಿದ್ಯದ
ಮೋಡಿಕಾರರು ನೀವು
    ದಾನಿಗಳು,
    ಉದ್ದಾನಿಗಳು !
ಬಿಕ್ಕೆಯ ಬೇಡಲು
ಬಂದರ ಬಾ ಯೆಂದು
ಹೆಕ್ಕತ್ತಿಗೆ ಕಯ್ಯಿ–
ಭೂಬಿಟ್ಟ ನಾಯಿ.
ಗುಡಿಸಿಲಿನೆದುರಲ್ಲೆ
ಗಗನಚುಂಬಿಯ ಕಟ್ಟಿ,
ಕಳ್ಳಸಾಗಣೆ ಮಾಲು
ಕಳ್ಳರ ಪಾಲಾಗದಿರೆ
    ಗೂರ್ಖ ಸಿಪಾಯಿ,

ಅಲ್ಸೇಷನ್ ತೋಳಕ್ಕೆ
ಸಾವಿರ ರೂಪಾಯಿ.
ಜನಗಳ ಮಂದೆಯಲಿ
ನೀವು ಉದ್ಧಾನಿಗಳು
ಬಲು ಉಚ್ಚ ಉಚ್ಚ,
ಉಳಿದರೆಲ್ಲ ತುಚ್ಛ;
ಸರ್ವಸಮತೆಯ
ಕನಸನು ಕಾಣುವ
ಕವಿಯೊಬ್ಬ ಹುಚ್ಚ.

೮-೪-೧೯೭೮

## ಮಮತೆ

ನಮ್ಮ ಮನೆಯ ಅಂಗಳದಲಿ
ಮಾಮರವೊಂದಿದ್ದಾಗ
ಅದರ ರೆಂಬೆಕೊಂಬೆ ನಡುವೆ
ಗೂಡನು ಕಟ್ಟುವ ಸಡಗರ
ಕಾಗೆ ಹೆಣ್ಣುಗಂಡಿಗೆ

ಗೂಡುಕಟ್ಟಿ ಮೊಟ್ಟೆಯಿಟ್ಟು
ಕಾವುಕೂತು ಸರತಿಮೇಲೆ
ಮೊಟ್ಟೆಯೊಡೆದು ಮರಿಗಳಾಗಿ
ಅವಕೆ ತಿನಿಸು ತಂದು ಊಡಿ
ಪೋಷಿಸಿದವು ಮರಿಗಳ

ಒಂದು ದಿನ, ಕೂಗ ಕಲಿತ
ಮರಿಗಳ ಕ್ರ-ಕ್ರ-ಕ್ರೌ ಕರೆಯ
ತುಮುಲದಲ್ಲಿ ಇಂಪಿನ ದನಿ-
ತುಂತುರಹನಿ ಬಸಿದು ಬರಲು

ದನಿಯೊಡಲಿನ ಕುರುಹುವಿಡಿದು
ಕಾಗೆ ಜೋಡಿಯದನು ಕುಕ್ಕಿ
ಕೆಡವೆ ಕೆಳಕ್ಕೆ,-ರೆಕ್ಕೆ
ಬಲಿಯದಿದ್ದ ಕೋಗಿಲೆಮರಿ
ಕುಪ್ಪಿ ಕುಪ್ಪಿ ಹಾರಿತು.

ಕಾಗೆ-ತಾಯಿತಂದೆಗಿತ್ತ
ಸಂತಸವೋ ಸಂತಸ-
ತಮ್ಮ ತೆರನ ದನಿ ಕರ್ಕಶ
ಕವಿಗೆ ಮೆಚ್ಚಿ, ಕಾ-ಕಾ-ಕಾ
ಜೋಗುಳ ಹಾಡಿದವು.

೧೯-೪-೧೯೭೮

## ಪರಿಹಾರ

ಹೆಂಡತಿಯೆಂಬೋಳು ಮುನಿದೆದ್ದರೆ
ಅಡ್ಡದಾರಿಗೆ ತಾ ಬಿದ್ದರಾಗ;
ಮಗನೇ ಮನೆಯೊಡವೆಯ ಕದ್ದರೆ
ಸಹವಾಸ ದೋಷವ ಹೊದ್ದಾಗ ;
ಮೊಮ್ಮಗ ಕಾಲೆತ್ತಿ ಒದ್ದೊದ್ದರೆ
ಮನೆಯೇ ಮಸಣವಾಗಿದ್ದಾಗ-
ಮಾಡುವುದೇನಾಗ ಮನೆ ಯಜಮಾನ ?
ಬಿಡಿಸಿಕೊಳಲಾಪನೆ ಕೊರಳ ಗಾಣ ?
ಉಳಿದ ದಾರಿಯೊಂದೆ: ವಿಷದ ಪಾನ,
ಇಲ್ಲವೊ, ತತ್ತ್ವಸುಜ್ಞಾನದನುಷ್ಠಾನ.

೨೬-೪-೧೯೭೮

## ಪುರುಷೋತ್ತಮ

ಪ್ರಥಮ ಪುರುಷ
ಉತ್ತಮ ಪುರುಷ
ಮಧ್ಯಮ ಪುರುಷ
ಇವನಾವನೂ ಪುರುಷೋತ್ತಮನಲ್ಲ;
ಅವನು ಹೋದ
ನಾನು ಹೋಪೆ
ನೀನೂ ಹೋಪೆ
ತ್ರಿಕಾಲಾಬಾಧಿತನವನೊಬ್ಬನೇ
ಪರಾತ್ಪರ
ಪುರುಷೋತ್ತಮನವನೇ

೧-೬-೧೯೭೮

## ಆಕಾಶಛತ್ರ

ಮೇಲ್ಗಡೆ ತೆರೆದಿದೆ ಆಕಾಶಚ್ಛತ್ರ
ಅದರೊಡಲಿಗೆ ನೀಲಿಗಪ್ಪಿನ ವಸ್ತ್ರ
ವಜ್ರದ ಹೂಚಿತ್ರ ಲಕ್ಷ ನಕ್ಷತ್ರ
ಭೂದೇವಿಗೆ ರವಿ ಹಿಡಿದಿರುಳಿನ ಛತ್ರ

೩-೬-೧೯೭೮

## ಪಾರಿಜಾತ

ಏಕೆ ಬಯಸಿದೆನೊ ನಾ ಕಾಣೆ :
ಬಾಲ್ಯದ ಬಯಕೆ
ತೀರದೆ
ಯೌವನದ ಬಯಕೆಯಾಯ್ತು–
ನಮ್ಮ ಮನೆಯಲ್ಲೊಂದು ಪಾರಿಜಾತದ ಗಿಡವ
ಬೆಳಸಬೇಕೆಂದಿದ್ದೆ–
ಅಂಟ ನಟ್ಟೆನು, ಬೀಜ ಹುಟ್ಟಿಹಾಕಿದೆನು;
ಯಾವುದೋ ತೋಟದಲಿ ಕಂಡ ಸಸಿಯನು ಕದ್ದು ತಂದು
ಹುಟ್ಟಹಾಕಿದೆನು:
ಹುಡುಗುತನ ಹಂಬಲಿಸಿ ಹಾತೊರೆದ
ಹುರಿದ ಬೀಜವೊ ಏನೊ,
ಮೊಳೆಯಲೇ ಇಲ್ಲ,
ನನ್ನ ಬಯಕೆಯ ಪಾರಿಜಾತ

ಬಾಡಿಗೆಯ ಮನೆಯಲ್ಲಿ
ಪಾರಿಜಾತದ ಬಯಕೆ!
ಮತ್ತೆ ಮನದಲಿ ಬಯಕೆ ಬಿತ್ತವಾಯಿತ್ತು:
ಎದೆಯ ನೆಲದಾಳದಲಿ ಹೂತಿದ್ದ ಪರಾತ್ಪರದರಿವಿನ ಬೀಜ
ಮುಪ್ಪಿನಲಿ ಮಾನಸದ ಮೇಲ್ಪದರಕೊಗೆದು
ನೆನಪಿನ ನಂದನದ ಅಭಿಜಾತ ಪಾರಿಜಾತವಾಗಿ ಹೂತು
ಜನ್ಮ ಜನ್ಮಾಂತರದ ವಾಸನೆಯ ನರುಗಂಪ
ಬಾಳಿನ ಗಾಳಿಯಲ್ಲಿ ಹರಡಿ,
ವಾಸನಾಕ್ಷಯವಿಂತು
ಮುಕ್ತಿ ತಾನಿಂತು
ಎಂದು ತೋರುವ ಪರಿ
ನಾ ಕೊಂಡ ಕುಂಡದ ಪಾರಿಜಾತದ ಸಸಿ
'ನನ್ನ' ನೆಲದಲ್ಲಿ ಚೆನ್ನಾಗಿ ಬೇರುಕಚ್ಚಿ

ವರ್ಷವಾಗುವ ದಿನಕೆ ನನ್ನೆತ್ತರಕೆ ಬೆಳೆದು
ನನ್ನ ಆದರದ ಆರೈಕೆ ಹಾರೈಕೆಗಳ ಜಲವನುಂಡು
ಎಲೆಯೆಲೆಗೆ ಹತ್ತೆಂಟು ಮೊಗ್ಗು
        ಗಿಡಕೆ ಮುತ್ತಿನ ಮೂಗುತಿಗಳಾಗಿ
        ಅರಳಿಕೆಯ ಮುನ್ನವಿಯ ಸಿಗ್ಗು
ಎಸಳ ಭರಣಿಯಲಡಗಿ ಸೌರಭವಾಗಿ
        ನನ್ನ ಕರೆಯುತ್ತಿರಲು,
        ಒಂದು ದಿನ–
ಬಿಟ್ಟ ಹೂವನು ಬಿಟ್ಟಂತೆಯೇ ಕೊಡುವೆ
ಇಟ್ಟುಕೊಂಡರೆ ಕುಯ್ದು ನೋಯಿಸುವೆ
ಕಿತ್ತುಕೊಳ್ಳುವ ಮುನ್ನ ಕೊಡುವುದೇ ಲೇಸು
ಎನುವಂತೆ ಮೈಕೊಡವಿ ನಾಲ್ಕೆಂಟು ಹೂವನುದುರಿಸಿತು;
ಮರುದಿನದ ಹೂಕೊಡಿಗೆಗಾಗಿ ತೊಟ್ಟಿತ್ತು
        ಮುಗುಳ ತೊಡಿಗೆಯನು–
        ನನ್ನ ದೆನ್ನುವುದಿರಲೆ ಬೇಕು
        ನ ಮಮ ನ ಮಮ ಎಂದು ಬಿಡಲು–
        ಹೂಬಿಡಲು ಕೊಡಲು ಇರುವಂತೆ.
                ಈಗ
        ಬಿಡಲುಂಟು ನನ್ನ ಮನೆ–
        ಬಿಡಲುಂಟೆನ್ನ
        ಬಯಸಿ
        ಬೆಳಸಿದ
        ಪಾರಿಜಾತ

೩–೬–೧೯೭೮

## ನೀನಿಂದು ಜೀವಿಸಿರಬೇಕಿತ್ತು

ಓ ಗಾಂಧಿ ! ನೀನಿಂದು ಜೀವಿಸಿರಬೇಕಿತ್ತು:
ಭಾರತಕಗತ್ಯ ನೀನಿಂದು : ಅದು ನಿಂತ ನೀರಿನ
ಕೊಳ್ಳವಾಗಿದೆ; ನಮ್ಮ ಸಂಸ್ಕೃತಿವೃಕ್ಷದ ಬೇರು
ಜೀವರಸವೊಣಗಿ, ಬೆಳೆದಿದೆ ಸುತ್ತಲೂ ಹುತ್ತು;
ಇಹಪರದ ಗತಿ ಕೆಟ್ಟು, ನಾವು ಸ್ವಾರ್ಥಕೆ ತೊತ್ತು;
ಬಾ ಮರಳಿ, ಓ ಬಾಪು, ನಮ್ಮನ್ನು ಮೇಲೆತ್ತು,
ನೀಡೆಮಗೆ ನಯ ನೀತಿ, ಸ್ವಾತಂತ್ರ್ಯ, ನೀರ್ಭೀತಿ;
ನಿನ್ನಾತ್ಮವೆಮಗೆ ದಿಕ್ಸೂಚಿ ಧ್ರುವತಾರೆ ರೀತಿ.
ನಿನ್ನ ನುಡಿ, ಒಳ ದನಿ, ಕಡಲಂತೆ ಗಂಭೀರ,
ಬತ್ತಲೆ ಬಾನ ತೆರ ಸರ್ವ ಸ್ವತಂತ್ರ, ಘನ;
ಬಾಳ ಹೆದ್ದಾರಿಯಲಿ ಪಯಣಿಸಿದೆ ನೀ ಧೀರ,
ಆತ್ಮಾರಾಮ; ಆದರೂ ನಿನ್ನ ತನು ಮನ ವಚನ
ಮೇಲು ಕೀಳೆಂಬ ಭೇದವೆಣಿಸದ ಉದಾರ
ವೃತ್ತಿಯಲಿ, ತಾಯ್ನಾಡ ಸೇವೆಗಾಯ್ತು ಸಮರ್ಪಣ.

೬–೮–೧೯೭೮

## ಕಾಣದ ಕೈ

ತಾನೆ ಕೊಟ್ಟುದನ್ನು ಕೊಡದೆ
ಬಿಡದೆ ಹಿಡಿದಿದೆ
ಹಿಡಿತ ಬಿಡದಿದೆ
ತಾನಿ ಬಿಟ್ಟುದನ್ನು ಬಿಡದೆ
ಹಿಡಿದು ಬಿಡದಿದೆ
ಬಿಟ್ಟು ಹಿಡಿದಿದೆ.
ಕೈಕಾಣದು ಎಲ್ಲ ಮೆಯ್ಯೆ–
ಹಿಡಿತ ಬಿಡುತ

ಬಿಡದೆ ಸಾಗಿದೆ.
ಅಭಯ ಹಸ್ತ ವರದ ಹಸ್ತ
ಕಾವ ಹಸ್ತ ಕೊಲುವ ಹಸ್ತ
ಎಲ್ಲವೂ ಅದೇ,
ಕಾಣದೆ ಮರೆಯಾಗಿದೆ.
ಕಾಣದ ಕೈ ಬೆರಳ ಛತ್ರಿ
ನಮಗೆ ಆಸರೆ–
ಮತ್ತದೇ ಸೆರೆ.
ಕೈಯ ಹಿಡಿತದಿಂದ ಇಲ್ಲ
ನಮಗೆ ಬಿಡುಗಡೆ–
ಇರವು ಇದ್ದ ಕಡೆ.
ನಾವೆ ಕೈ ನಾವೇ ಮೆಯ್
ಎಂಬ ಅರಿವಿನಿಂದಲೆ
ಹಿಡಿಯಪಟ್ಟೆವೆಂಬ ಭ್ರಾಂತಿ–
ಯಿಂದ ಬಿಡುಗಡೆ.
ಅರಿತದಲ್ಲಿ ನೀನೆ ಕಯ್
ಮರೆತದಲ್ಲಿ ಕಯ್ಯದು;
ಕಯ್ಯ ಮೆಯ್ಯ ಕೀಲನರಿತ
ಬದುಕು ಬಿಡುತೆ ಲೇಸದು.

೨೨–೧೦–೧೯೭೮

## ಕೈವಾರ–ಕೈವರ

ಕೈವಾರದಿಂದಲೇ ಕೈ–ವರ:
ದೇವರಿಗೂ ಮನುಜರಿಗೂ ಒಂದೇ ಥರ !

ದೇವರಿಗೆ ಸಾಕು–ಮಂತ್ರಪುಷ್ಪ,
ಹೆಚ್ಚೆಂದರೆ ಗೀತ ಪುಷ್ಪಮಾಲೆ;
ಮರೆಯದಿದ್ದರೆ, ಕೊನೆಗೆ,

ಮಾತಿನ ಉಪಚಾರ:
'ಛತ್ರಂ ಸಮರ್ಪಯಮಿ'
'ಚಾಮರಂ ಸಮರ್ಪಯಾಮಿ'
'ಸಂಗೀತಮವಧಾರಯ'
'ನೃತ್ಯಮತಧಾರಯ'
ಇತ್ಯಾದಿ ಇತ್ಯಾದಿ ಸರ್ವೋಪಚಾರ.

ಮನುಜರಿಗೆ ಬೇಕು–'ಪತ್ರ' ಪುಷ್ಪಾರ್ಚನೆ,
ರೌಪ್ಯ ಪುಷ್ಪಾರ್ಚನೆ,
ಸುವರ್ಣಪುಷ್ಪ ಸಮರ್ಪಣೆ;
ಹೊಗಳಿಕೆಯ ಹೂಮಾಲೆ;
ಪಾನೀಯದಭಿಷೇಕ,
ನಾರೀಮಣಿಯ ನೃತ್ಯ.
        ಶಯನೋತ್ಸವ !
ನೀನು ಬಾಗಿಲು ಕಾಯ್ದು
ಸುಪ್ರಭಾತವ ಹೇಳು,
ನಿನ್ನೀ ಬಾಯ–ಕಾಯ–ಕೈವಾರಕ್ಕೆ
        ಪ್ರತಿಯಾಗಿ
ಬೇಕುಬೇಕಾಬಿಟ್ಟಿ
        ದೊರಕುವುದು
        ಅವರ ಕೈವರ.

೧೯೭೯

## ಸುಕೃತಿ ಪಡೆದ ಬಹುಮತಿ

ಶರನ್ನೀಲಗಗನದುದ್ದ–
ಅಗಲಕದೊ ಹಿಮಾಲಯ
ಹರನ ನಿಲಯ ತಾನೆ ಸಿದ್ಧ–
ನನಗದುವೇ ಶಿವಮಯ;

ಗೌರಾಂಗಿ ಗೌರಿಯೊಡನೆ
ಧವಳಿಮೆಯನು ಹೆಚ್ಚಿಸಿ
ಹಿಮವಲ್ಲ, ಬೆಳ್ಳಿ ತಾನೆ
ಬೆಟ್ಟವಾದುದೆನ್ನಿಸಿ

ಬಿಳಿಯ ಮುಗಿಲು
ಪಡೆದ ಮಹಾ-
ಶಿಲ್ಪಾಕೃತಿ
ನನ್ನಯ ಸುಕೃತಿ
ಪಡೆದ ಬಹುಮತಿ.

೧೯೭೯

## ಅರಳೆಲೆ ಅರವಿಂದ

ಅರಳು ಅರಳು ಅರಳೆಲೆ ಅರವಿಂದ
ತುಂಬಿಕೊ ಹೃತ್ಕೋಶದಿ ಮಕರಂದ
ಸೂರ್ಯನು ಮೂಡಲು ಕತ್ತಲೆಯೋಡಲು
ಬಿಡುಗಡೆ ನಲಿವಿನ ದುಂಬಿ ಹಾಡಲು
ನಿಂತಿರು ಅರಳಿ
ಕತ್ತಲೆ ಮರಳಿ
ಬಾರದೆ ಇರಲಿ
ಸೋಹಂ ಸೋಹಂ ಝುಂಕೃತಿನಾದ
ಕಡೆಯಲಿ, ಪಡೆಯಲಿ ತತ್ವದ ಬೋಧ.

೧೦-೧-೧೯೭೯

## ಚೈತ್ರಾರಂಭದ ಈ ದಿನ

ನೂತನ ಚೇತನದಾಹ್ವಾನ
ಚೈತ್ರಾರಂಭದ ಈ ಸುದಿನ

ಹೊಸ ಹುರುಪಿನ ಹೊಸ ಸಾಹಸಗಳಿಗೆ
ತೊಡಗಿರೆಂದು ಸಾರುವ ಸುದಿನ;
ಹಸನಾದ ಬಾಳ ಸಿರಿವಂತಿಕೆಗೆ
ಮೈಮನ ಮುಡಿಪಿಡಿ ಎನುವ ದಿನ.

ನೋವೋ ನಲಿವೋ ಸೋಲೋ ಗೆಲವೋ
ಎರಡುಕು ಸಮಬೆಲೆ ಎನುವ ದಿನ;
ಬೇವುಬೆಲ್ಲ ಬೆಳುದಿಂಗಳು ಬಿಸಿಲು
ಎರಡನು ಸಮ ಸೇವಿಸುವ ದಿನ,

ಸುಗ್ಗಿಯ ಭೋಗದ ಮಲ್ಲಿಗೆ ತ್ಯಾಗದ
ಮಾವನು ವರಿಸುವ ಮೋದ ದಿನ;
ಉಗ್ಗಡಿಸುತ ಉಲಿಯುವ ಕೋಗಿಲೆ ಗಿಳಿ
ಮಂಗಳ ಹಾಡುವ ಮಹಾದಿನ.

ಜಾತಿಭೇದಗಳ ಒಣಮರವೆಲ್ಲವ
ಕಡಿದು ಸುಡುವ ನವ ಯಜ್ಞದಿನ;
ಸಮಾನತಾ ಭೂಮಿಯ ಹದಮಾಡಿ
ಸ್ನೇಹದ ಸಸಿಗಳ ನೆಡುವ ದಿನ.

ಸುಗ್ಗಿಯ ಬೆಳಸಿನ ಭಾಗ್ಯವನೆಲ್ಲರು.
ಸಮಸಮ ಪಾಲ್ಗೊಂಡುಂಬ ದಿನ;
ಸಗ್ಗದ ಸುಖದುಯ್ಯಾಲೆಯ ಕಟ್ಟಿ
ತೂಗುತ ನಲಿವ ಯುಗಾದಿ ದಿನ.

ಯುಗಾದಿ, ೧೯೭೬

# ಜಗದಂಬೆಯೆ ನಮ್ಮ ತಾಯಿ

ಜಗದಂಬೆಯೆ ನಮ್ಮ ತಾಯಿ
ನಾವೆಲ್ಲರು ಮಕ್ಕಳು
ಸೊಗದಿ ಬಾಳಿರೆಂದು ಸಿರಿಯ
ಸೂರೆಗೊಟ್ಟಿರುವಳು.

ಖಂಡಖಂಡ ಮಾಡಿಕೊಂಡ
ಭೂಮಿ ನಮ್ಮ ಕಲ್ಪನೆ
ಅಖಂಡ ಭೂಮಂಡಲ
ಖಗಮೃಗ ಮಾನವರ ಮನೆ.

ಕರಿಯ ಬಿಳಿಯ ಕಂದಿನವ
ಎಂದು ಭೇದ ಬಗೆವ ಬಗೆ
ಕರುಳ ಬಳ್ಳಿ ಕೊಯ್ವ ಭಾವ,
ಮನೆತುಂಬ ಹಗೆಯ ಹೊಗೆ.

ಸಹಬಾಳ್ವೆಯ ಯುಗಧರ್ಮ
ಸಿಡಿದು ನಿಲ್ಲೆ, ಪ್ರಳಯ
ಸೋದರಿಕೆಯ ಸರ್ವೋದಯ
ತಾಯ ಹರಕೆ–ಅಭಯ.

ಮಾಡುತ ಸಂಶಯ ಭಯಗಳ
ಭೂತದ ಉಚ್ಚಾಟನೆ
ಜಗತ್‌ಪ್ರೇಮ ಸೌದಾಗ್ರದಿ
ನೆಡುವ ಬಿಳಿಯ ನಿಶಾನೆ

ಯುಗಾದಿ ೧೯೭೯

## ಧರ್ಮಾರಣ್ಯ

ಈ ಜಗ ಧರ್ಮಾರಣ್ಯ
ಸಾಧುಸಂತಸಜ್ಜನ ಮಾನ್ಯ
ಭೂಜ ಭವನವಿದು ಭುವನಶರಣ್ಯ
ಭೇದಭಾವ ಸಂಶೂನ್ಯ

ಧರ್ಮಸನಾತನವೃಕ್ಷಮೂಲದಿಂ–
ದುದಿಸಿ ಬೆಳೆದುದೀ ತರುವೃಂದ;
ಬ್ರಹ್ಮಜ್ಞಾನಿಗಳಿಂದ ಪಾಲಿತವು
ಬೆಳೆಯಿತು, ಹರಡಿತು ಸ್ವಚ್ಛಂದ

ಸುಜ್ಞಾನಿಗಳಿಗೆ ಸುಶಾಂತಿಧಾಮ
ಅಜ್ಞಾನಿಗಳಿಗೆ ರಣರಂಗ;
ವಿಜ್ಞಾನದ ವಿಷವಾಯು ಪ್ರಧೂಮ–
ನಿರೋಧಕಿದುವೇ ಶ್ರೀರಂಗ.

ಧರ್ಮಾರಣ್ಯ ವಿದಭಯಾರಣ್ಯ
ಮಾನವ ಖಗಮೃಗ ಸಂಕುಲಕೆ;
ಮರ್ಮವರಿತು ಮಾಡಿದ ವನರಕ್ಷಣ
ನಿತ್ಯಶುಭಂಕರ ಮನುಕುಲಕೆ

೧೯೭೯

## ತುಂಬೆ

ತುಂಬೆಯ ಹೂಮಿದರ್ಚಿಪೆ
ಸ್ವೀಕರಿಸು ಪ್ರಭೂ
ಸಾಂಬ ಸದಾಶಿವ ಶಂಕರ
ಪರಮೇಶ್ವರ ಶಂಭೂ

ಉಕ್ಕಿ ಹರಿದು ಭಕ್ತಿ ಭಾವ
ಮಕರಂದವು ತುಂಬೆ
ಸದಯ, ನಿನ್ನ ಅಡಿಗೆ ಮುಡಿಪು
ನನ್ನೆದೆವೂ, ತುಂಬೆ

೨೮-೬-೧೯೭೯

## ಗೊತ್ತಿರಲಿಲ್ಲ, ಪಾಪ

(ಒಬ್ಬ ಹೆಣ್ಣಿನ ಪಶ್ಚಾತ್ತಾಪ)

ನಾ ನಿನ್ನ ಕಂಡಾಗ ನನಗೆ ಗೊತ್ತಿರಲಿಲ್ಲ
ನಿನಗೊಬ್ಬ ಮಡದಿ ಇರುವಳೆಂದು
ನೀನೆರಡು ಮಕ್ಕಳಿಗೆ ತಂದೆಯೆಂದು;
ನಾ ನಿನ್ನ ಕಂಡಾಗ ನನಗೆ ಗೊತ್ತಿರಲಿಲ್ಲ
ನಿನ್ನ ಹೆಂಡತಿ ರೋಗಿ ನೀ ನಿರುದ್ಯೋಗಿ
ಎಂಬ ಸಂಗತಿ : ಮೋಸ ಹೋದೆನಲ್ಲ !
ನಾ ನಿನ್ನ ಕಂಡಾಗ ನನಗೆ ಗೊತ್ತಿರಲಿಲ್ಲ
ನಾ ಸಾಕಬೇಕೆಂದು ನಿಮ್ಮನೆಲ್ಲ !

೨೯-೬-೧೯೭೯

## ಚಿಕ್ಕ ಗಿಡದಲಿ ದೊಡ್ಡ ಗುಲಾಬಿ

ಚಿಕ್ಕ ಗಿಡದಲಿ ದೊಡ್ಡ ಗುಲಾಬಿ
ಅಂಗೈಯಗಲಕೆ ಅರಳಿಹುದು;
ಮಕ್ಕಳ ಕೆಂಗೆನ್ನೆಯ ಮೊಗದಲ್ಲಿ
ಕೆಂದುಟಿ ನಕ್ಕಂತಿಹುದು.

ಒಂಟಿ ಗಿಡದ ಚೊಚ್ಚಲುಹೂವು
ಅಂಗಳಕೆಲ್ಲ ರಂಗುಕಳೆ;
ನಂಟು ಬೆಳೆಯುವುದು ನೋಡಿದ ಕೂಡಲೆ
ಸಿಂಗರ ತೋಟಕೆ, ಕಣ್ಣಸೆಳೆ.

ಕುಂಕುಮ ವರ್ಣದ ಬಿಂಕದ ಹೂವಿದು
ಮೀಸಲು ರಸಿಕರ ನೋಟಕ್ಕೆ ;
ಪಂಕಜಮುಖಿಯ ಮುಡಿಗೊಪ್ಪಿದರೂ
ಮನವೇ ಬಾರದು ಕುಯ್ಯಲಿಕೆ.

ರಂಭೆಯ ರಕ್ತ ರಾಧೆಯ ರಕ್ತಿ
ಸಂಧ್ಯಾರಮಣಿಯ ಕೆಂಗಾಂತಿ
ತುಂಬಿಕೊಂಡು ಹೂವಾಯ್ತೆನುವ ರೀತಿ
ಇದೆ ವರ್ಣಕ್ರಮ ಸಂಪತ್ತಿ.

ಇದ್ದುಕೊಳ್ಳಲಿದು ಗಿಡದಲಿ ಕುಯ್ಯದೆ
ಕಳಲಿ ಬಾಡಿಯುದುರಲಿ ನೆಲಕೆ;
ಶುದ್ಧಾತ್ಮರ ಬದುಕೀ ತೆನಹುದು :
ಹುಟ್ಟುಸಾವು ಒಂದೇ ಸಲಕೆ.

೨೯–೯–೧೯೭೯

## ಇವು ತರಗೆಲೆ

ತರಗೆಲೆ ನೋಡಯ್ಯ ಇವು ತರಗೆಲೆ
ಗಾಳಿಯೆತ್ತಲೊ ಅತ್ತ
ಹಾರುವುವು ತೂರುವುವು
ಮೇಲೆ ಮೇಲೇರುವುವು
ರಸವಿಲ್ಲ ಚೆಲುವಿಲ್ಲ

ಹೂವಲ್ಲ ಹಣ್ಣಲ್ಲ
ಹೀಚೂ ತಾನಲ್ಲ
ತನ್ನತನದ ತೂಕ ಒಂದಿನಿತೂ ಇಲ್ಲ–
ನೆರವಿಲ್ಲದಿರೆ ಗಾಳಿ
ಬಿದ್ದಲ್ಲಿ ಬಿದ್ದಿಹವು–
ಇವು ತರಗೆಲೆ

೨೧–೧–೧೯೮೦

## ತಪ್ಪೊಪ್ಪಿಗೆ

ತಪ್ಪನೊಪ್ಪಿಕೊಳುವೆ ದೇವ
ತಪ್ಪನೊಪ್ಪಿಕೊಳುವೆ
ತಪ್ಪನೊಪ್ಪಿಕೊಳುವೆ ಶತಶತ
ತಪ್ಪನೊಪ್ಪಿಕೊಳುವೆ.

ನಾಲ್ಕು ಬೀದಿಯ ಸುತ್ತಿ
ಅದನೆ ಊರೆನುವಂತೆ
ಹತ್ತು ಊರನು ಸುತ್ತಿ
ಜಗಕಂಡೆನೆನುವಂತೆ
ಮುಖವ ಮೋಹಿನಿ ನಿನ್ನ–
ನೊಲಿದೆ ನಾನೆನುವಂತೆ
ಹಿಡಿಭಿಕ್ಷವಿತ್ತು ತಾ
ದಾನಿಯೆಂದರಿವಂತೆ
ನಿನ್ನ ಸಾಸಿರನಾಮ
ನಿತ್ಯ ಪಠಿಸುತ ನಾನು
ನಿನ್ನನರಿತೆನೆಂಬೆ !
ವಾಚಾಮಗೋಚರ ನೀ :
ಕಲ್ಲಲಿ ಮಣ್ಣಲಿ

ಲೋಹ ಲೋಷ್ಠದಲಿ
ನಿನ್ನ ಪೂಜಿಸಿ ನಾನು
ನಿನ್ನ ಕಾಂಬೆನೆಂಬೆ,
ವಿಶ್ವರೂಪನು ನೀನು
ನಾ ಬೇರೆ ನೀ ಬೇರೆ
ಎಂದು ದ್ವೈತವನೊಮ್ಮೆ
ನಾ ನೀನು ನೀ ನಾನು
ಎಂದದ್ವೈತವನೊಮ್ಮೆ
ನಾಲಿಗೆ ತುದಿಯಲ್ಲಿ
ನಿಲಿಸುವೆ ನಾ ನಿನ್ನ,
ತ್ರಿವಿಕ್ರಮನನ್ನ !
ಹೊರಗೆಲ್ಲ ಹುಡುಕುವೆ
ಒಳಗೆಲ್ಲ ತಡಕುವೆ
ಹೊರಗಿಹೆಯೊ ಒಳಗಿಹೆಯೊ
ಹೊರ ಒಳಗೆ ಕೂಡಿಹೆಯೊ
ಅರಿಯೆ ನಾನು ನಿನ್ನ
ಇರವಿನ ಪರಿಯ
ಬಲ್ಲೆನೊಂದನು : ನಿನ್ನ
ನಂಬುವ ಗುರಿಯ.

೨೩–೧–೧೯೪೦

## ಬಯಲ ಭಾಮಿನಿ

ಧಿಕ್ಕರಿಸಿ ರಾಣಿಪಟ್ಟವನರಮನೆಯ ಭೋಗ–
ಜೀವನ ವಿಭವದಾಮಿಷವನು, ತಾನೊಲ್ಲದೆ
ಸಾವ ಗಂಡನ ರೂಪರಂಜನೆಯ, ನಿಲ್ಲದೆ
ಇಕ್ಕಟ್ಟಿನಿಹದಲ್ಲಿ, ಬಯಲ ಭಾಮಿನಿ ರಾಗ–
ದುಕ್ಕಂದದಲಿ ತೇಲುತೊಲಿದು ಸರ್ವತ್ಯಾಗ

ವೈರಾಗಮಾರ್ಗವನು, ಅಂಗಜನ ಸಂಗವನು
ದೂರವಿಡುತಂಗಜಾರಿಗೆ ಅಂತರಂಗವನು
ಅಕ್ಕರೆಯ ಹಸೆಗೈದು ಮದುವೆ ನಿಲಲೆಂದಾಗ
ರೂವಿರದ ಸಾವಿರವ ಕೇಡಿರದ ಗಂಡನನು
ವರಿಸುತುರಿಸಂಗದಲಿ ಕರ್ಪೂರ ತಾನಾಗಿ
ತೊರೆದು ಲೋಕದ ಹಂಗ, ಉಡುತಡಿಯ ವೈರಾಗಿ
ಜೀವಭಾವದ ಜೊತೆಗೆ ಬಿಸುಟುಡುಗೆ ತೊಡಿಗೆಯನು
ಬಿರುಮುಡಿದು ಬಿಚ್ಚಿ ಮಾನವ ಮುಚ್ಚಿ ಪರಮಾತ್ಮ
ನೊಡವೆರೆಯೆ, ಹೆಣ್ಣಿಗಾಯಿತು ತೆರವು ಅಧ್ಯಾತ್ಮ.

೧೦-೪-೧೯೮೦

## ಸೊನ್ನೆ

ನಾನೀಗ ಮುದುಕ ನನಗೂ ಗೊತ್ತು
ಹತ್ತಿರ ಹತ್ತಿರ ಮೂರು ಇಪ್ಪತ್ತು
ಮೇಲೊಂದು ಹತ್ತು : ಮುಳುಗುವ ಹೊತ್ತು;
'ಸರ್' ಎಂಬ ಕರೆಯೆಡೆ 'ಯಜಮಾನ್ರೆ' ಬಂದಿದೆ
'ತಾತ'ನ ಪದವಿಗೆ ವೀಳ್ಯವನೆತ್ತಿದೆ
ಪಯಣದ ಕೊನೆಗಿನ್ನೂ ತುಸ ಹೊತ್ತಿದೆ.

ಆ ಹೊತ್ತು
ನೆತ್ತರ ಬಿಸುಪಲಿ
ಕಣ್ಣು ಬಾನಿನಲಿ ಕಡೆ ಅತ್ತಿತ್ತ ಸುಳಿದಾಟ
ಬೇಕಿತ್ತು ದಿನ ದಿನ ಹೊಸ ಹೊಸ ಚೆಲುನೋಟ
ಸವಿಯೂಟ ಆಟಪಾಟ
ನಡಗೆ ಬುದ್ಧಿ ಬಯಕೆ ಎಲ್ಲ ಚುರುಕು
ಕಂಡದ್ದೆಲ್ಲ ಬೇಕು.
ಯಾವುದಕೂ ಇಲ್ಲ ಬ್ರೇಕು.

ಈ ಹೊತ್ತು
ನೆತ್ತರ ತಣ್ಣು
ಕೈಕಲು ಕಿವಿಕಣ್ಣು ಎಲ್ಲ ಒಟ್ಟಿಗೆ ಕೂಡಿ
ಕಾಲಕ್ಕೆ ತಕ್ಕಂತೆ ಮುಷ್ಕರ ಹೂಡಿ
ಕಾಡುತ್ತ ಬೇಡಿವೆ ಪೆನ್‌ಷನ್ನು ಬೋನಸ್ಸು-
ಮುಷ್ಕರಕ್ಕೆ ಮುಂದಾಳು ಮನಸು

೨

ಇರಲಿ
ನಾನ್ಯಾರು ?
ನಾ ಕಣ್ಣೆ ? ನಾ ಕಿವಿಯೆ ? ನಾ ಮೆಯ್ಯೆ ಕೈಕಾಲೆ?
ಅಲ್ಲಾ ಅಲ್ಲ, ಖಂಡಿತ ಅಲ್ಲ.
ನಾ ರಾಜ–ಡಿಕ್ಟೇಟರ್ !
ಒಳಗಿನ ಒಳಗಡೆ ಬೇರೊಬ್ಬ ಡ್ರೈವರ್
ನಡಸುವನು ಮೋಟರ್ :
ಅವನೇ ಕ್ರಿಯೇಟರ್.

ನನ್ನ ಕೈಕಾಲು ಕಣ್‌ಕಿವಿ ಕರಣಗಳ
'ಮೋಟಾರಿನ ಬಾಡಿ' ನುಜ್ಜುಗುಜ್ಜಾಗುತ
ಅಪಘಾತ ನೂರಕ್ಕೆ ಮೈಗೊಟ್ಟು ಕೆಳಬಿದ್ದು
ತುಕ್ಡಿಡಿದು ಬಿದ್ದಲ್ಲೆ ಮುಕ್ಕಲು ಮಣ್ಣನ್ನು
ಬಿಟ್ಟಿದನು ಬೆನ್ನಲ್ಲೆ ಡ್ರೈವರ್ ತಾನೋಡುವನು,
ಮಾಲಿಕನ ಬಳಿಹೋಗಿ ಅವನೊಡಗೂಡುವನು;
ಡ್ರೈವರ್, ಮೋಟರ್–ಯಾವುದೂ ಕಾಣಿಸದು.
ಎಲ್ಲಾ ಸೊನ್ನೆ !

೩

ಹೌದಣ್ಣ ಹೌದು: ಸೊನ್ನೆ ಎಲ್ಲಾ ಸೊನ್ನೆ
ತಿಳಿಗೊಳಕೆ ಕಲ್ಲೆಸೆಯೆ ಸೊನ್ನೆ ಎಲ್ಲಾ ಸೊನ್ನೆ

ಸುಳಿ ಸುಳಿ ಸುಳಿಸೊನ್ನೆ ಒಂದರಾಚೆಗೊಂದು
ಒಂದರ ಒಳಗೊಂದು
ಸುಳಿದ ಕೂಡಲೆ ಅಳಿವು ಸುಳಿವಿನ ಸೂಳಳಿವು
ಒದರ ಮುಂದಿಟ್ಟ ಸಾಲ್‌ಸಾಲು ಸೊನ್ನೆ
ಒಂದಸಂಖ್ಯಾಕವಾಗುವ ಸೋಜಿಗದ ಚಿಹ್ನೆ.

೪

ಸರ್ವವನೊಳಗೊಂಡು ಸರ್ವವ ಬಳಸಿರುವ
ನಿಂತಲ್ಲೆ ನಿಂತಂತೆ ಕಂಡರು ತಿರುಗುವ
ನೂರ್ಕೋಟಿ ಬೆಳಕಿನಂಡಗಳ ಯಜ್ಞಕುಂಡಗಳ
ಬ್ರಹ್ಮಾಂಡಮಂಡಲ ವಿಶ್ವವಿರಾಟ್‌ಶೂನ್ಯ.

ಸೊನ್ನೆಯೊಳಗಿನ ಕನ್ನೆ ತಂಪು ಬೆಳಕಿನ ರನ್ನೆ
ಮೂಡಲು ಚೆಲುಚೆನ್ನ
ಮುಳುಗಲು ಬೆಂಕಿಬಳಿಯ ಬೆಣ್ಣೆ
ಸೊನ್ನೆಯಲ್ಲುದಯ–
ಸೊನ್ನೆಯಲ್ಲೇ ವಿಲಯ.

೫

ಸಾಂತ ಅನಂತವಾಗುವುದು ಸೊನ್ನೆ
ಸೊನ್ನೆ ಬೆಳಕಿನ ಒಡಲು ಚಿತ್ತೆಂಬ ಕಡಲು
ಕೊನೆನಲವ ನಿಬ್ಬಯಲು
ಹುಟ್ಟಿ ಸತ್ತು ನಾಮರೂಪಕಿ ತೆತ್ತು
ಅಳಿದರು ಉಳಿವುದೆ ಆ ಮೊದಲ ಬಿತ್ತು
ಅಳಿಯದ ಸತ್ತು
ಕಾಣ್ಕೆಯಸತ್ತು

ಬರಿಯ ಇಲ್ಲಮೆಯಲ್ಲವೀ ಶೂನ್ಯ
ಇದ್ದಿಲ್ಲವಾಗುವುದು

ಇರುವುದಕೆ ಮರಳುವುದು
ಇದ್ದೇ ಇರುವುದು.

ಶೂನ್ಯ ಬಣ್ಣದ ಬೀಡು ಉಲಿಗಳ ಕಿವಿಹಾಡು
ತನಿರಸ ತೊಟ್ಟಿಡುವ ಜೇನುಗೂಡು ;
ಕೋಟಿಸೂರ್ಯ ಪ್ರಕಾಶ ಸಂಕಾಶಪ್ರದೇಶ
ಇದ್ದುದಿಲ್ಲವಾಗಿ ಮತ್ತಿರಲವಕಾಶ.

ಬನ್ನಿರಿ ಮಾಡೋಣ, ಶೂನ್ಯಸುದರ್ಶನ ಚಕ್ರಸವಾರಿ;
ಸಾಕೀ ಗುಜರಿಮಾಲು ಹಳೆಮೋಟರ್ ರಿಪೇರಿ.

೪-೬-೧೯೮೦

# ಬಿನ್ನಹ

ನವೋದಯ ಕಾವ್ಯದ ಪತ್ರಕರ್ತರಲ್ಲಿ ಮುಂಚೂಣಿಯ ಕವಿಗಳ ಕಾವ್ಯ ಮಾರ್ಗ ಹಿಡಿದು ಅವರನ್ನು ಅನುಸರಿಸಿತೊಡಗಿದಾಗ ನಾನು ಇಟ್ಟ ಮೊದಲ ಹೆಜ್ಜೆಯನ್ನು ಈ ಸಂಕಲನದ ಪದ್ಯಗಳು ಪ್ರತಿನಿಧಿಸುತ್ತವೆ. ೧೯ಳಳರಲ್ಲಿ ಪ್ರಕಟವಾದ 'ಹಕ್ಕಿಹಾಡು' ಎಂಬ ನನ್ನ ಮೊದಲ ಕವನ ಸಂಕಲನದಲ್ಲಿ ಇವು ಸೇರಲು ತಕ್ಕವಾಗಿಲ್ಲ ಎಂದು ಆಗ ನಿಶ್ಚಯಿಸಿ, ಇವನ್ನು ಪ್ರಕಟಿಸದೆ ಉಳಿಸಿಕೊಂಡಿದ್ದೆ. ಇವನ್ನು ಬರೆದ ಹಾಳೆಗಳು ಜೀರ್ಣ ಸ್ಥಿತಿಯಲ್ಲಿ ಇದ್ದದ್ದರಿಂದ ನಕಲಾದರೂ ಮಾಡಿ ಇಡಬೇಕೆಂಬ ಯೋಚನೆ ಮಾಡಿದಾಗ, ಅಚ್ಚು ಮಾಡಿಸಬಾರದು ಏಕೆ ಎನ್ನಿಸಿತು. ಕಾವ್ಯಗುಣದ ದೃಷ್ಟಿಯಿಂದ ಪದ್ಯಗಳ ಮಟ್ಟ ಹೇಗಾದರೂ ಇರಲಿ, ನನ್ನ ಕಾವ್ಯಜೀವನದ ಬೆಳವಣಿಗೆಯಲ್ಲಿ, ನವೋದಯ ಕಾವ್ಯದ ಇತಿಹಾಸದಲ್ಲಿ, ಐತಿಹಾಸಿಕ ದೃಷ್ಟಿಯಿಂದ ಇವನ್ನು ಒಂದು ದಾಖಲೆ ಎಂದಾದರೂ ಪ್ರಕಟಿಸುವುದು ಅಗತ್ಯ ಎಂದೂ ತೋರಿತು. ನನ್ನ ೧೮–೧೯ರ ಪ್ರಾಯದ ಕೆಲವು ಪದ್ಯಗಳು ಮಾತ್ರ 'ಹಕ್ಕಿ ಹಾಡು' ಸಂಕಲನದಲ್ಲಿ ಸೇರಿದವು. ಉಳಿದ ಬಹು ಸಂಖ್ಯೆಯವು ಈಗ ಇಲ್ಲಿ ಅರ್ಧ ಶತಮಾನವೇ ಕಳೆದ ಮೇಲೆ ಬೆಳಕು ಕಂಡಿವೆ. ಕತ್ತಲೆಗೆ ಮರಳಲೂಬಹುದು.

ನನ್ನ ಕಾವ್ಯಜೀವನಾರಂಭಕ್ಕೆ ಪ್ರೇರಣೆ, ಸ್ಫೂರ್ತಿ, ಮಾರ್ಗದರ್ಶನ, ಎಲ್ಲವೂ 'ಶ್ರೀ' ಯವರ 'ಇಂಗ್ಲೀಷ್ ಗೀತಗಳು' ಸಂಕಲನದಿಂದ ಒದಗಿಬಂದವು. ಅದಕ್ಕೂ ಮೊದಲು ಷಟ್ಪದಿಗಳ ರಚನೆಯಲ್ಲಿ ಕೈ ಆಡಿಸಿದ್ದರೂ, ಆ ಪ್ರಯತ್ನಗಳ ಹೆಜ್ಜೆಗುರುತಾಗಿ ಉಳಿದು ಬಂದಿರುವುದು ಈ ಸಂಕಲನದ 'ಕುಮಾರವ್ಯಾಸ' ಮಾತ್ರ.

ನವೋದಯ ಕಾವ್ಯ ಮಾರ್ಗದಿಂದ ಬಲು ದೂರ ಸಾಗಿ ಬಂದಿದ್ದೇವೆ, ಇಂದಿನ ಕಾವ್ಯದ ರುಚಿಯೇ ಬೇರೆ. ಇಂದಿನ ರುಚಿಗೆ ಇಲ್ಲಿಯ ಪದ್ಯಗಳು ಹಿಡಿಸವು ಎನ್ನುವುದನ್ನು ಬಲ್ಲೆ. ನವೋದಯ ಕಾವ್ಯದ ಆರಂಭ ಕಾಲದ ಒಬ್ಬ ತರುಣ ಕವಿಯ ಪ್ರಯೋಗ ಮಟ್ಟದ ರಚನೆಗಳ ಬಗೆಗೆ ಕುತೂಹಲಿಗಳಾದ ಕಾವ್ಯಪ್ರೇಮಿಗಳ ಪರಿಶೀಲನೆಗೆ ಇಲ್ಲಿ ಸ್ವಲ್ಪ ಸಾಮಗ್ರಿ ಇದೆ ಎಂದು ತೋರುತ್ತದೆ. ಸಹಾನುಭೂತಿಯಿಂದ ಓದುವ ಸಹೃದಯರಿಗೆ ಅಲ್ಲಲ್ಲಿ ಹಸುರು ನೆಲ ಕಂಡರೂ ಕಂಡೀತು. ಹೊಸಗನ್ನಡ ಕಾವ್ಯಲೋಕದ ಗತಕಾಲದ ಒಂದು ಇಣಿಕುನೋಟವಂತೂ ಖಂಡಿತ ದೊರೆಯುತ್ತದೆ ಇಲ್ಲಿ.

ಜುಲೈ ೧೦, ೧೯೮೨ — ರಾಘವ




ಸ್ವಯಂ-ಚಿತ್ರ
೧೯೩೦



ಬೀದಿಯೊಳಗಲೆಯುತಿಹಳಾರಿವಳು?

## ಕಮಲೆ

(Genivieve)

ನನ್ನ ಪ್ರೇಮದ ಹೆಣ್ಣೆ ನನ್ನ ಜೀವದ ಜೀವ,
ನೀನು ಚೆಲುವಿನ ಬೊಂಬೆ ಚೆಂದದಲಿ ಚೆಂದ;
ನಿನ್ನ ಕಣ್ಣುಗಳೆರಡು ಸಂಜೆ ತಾರೆಗಳಂತೆ,
ನಿನ್ನ ಇಂಚರದ ನುಡಿ ದಿವ್ಯಗಾನ.

ನಿನ್ನ ಚೆಂದಕೆ ನಾನು ನಿನ್ನ ಮೋಹಿಸಲಿಲ್ಲ:
ಶೋಕಸಾಗರದಲ್ಲಿ ಮುಳುಗಿ ನಾನು
ನೊಂದು, ಬಳಲಿದ್ದಾಗ ಕಾವವರು ಇಲ್ಲದಿರೆ,
ನನ್ನಿರವ ನೀ ನೋಡಿ ಬಲು ಮರುಗಿದೆ.

ನಿನ್ನ ಮೆಲ್ನುಡಿಯಿಂಪು ದಯೆಯ ತೋರುವ ವಾಣಿ
ನಿನ್ನೆದೆಯ ಮರುಕ ಸುಳಿಸಿದುವಾಸೆಯನ್ನು ;
ಬದುಕಿಸಿದವೆನ್ನನ್ನು ಮೋಹವನು ಹುಟ್ಟಿಸುತ-
ಪ್ರೀತಿಸುವೆ ನಾನಿನ್ನನಿದಕೆ ಕಮಲೆ.

೧೮-೮-೧೯೨೮

## ಹಂಸಗೀತೆ

ಹಂಸಗಳು ಹಾಡುವುವು ಸಾವುದಕೆ ಮುನ್ನ;
ಕೆಲಮಂದಿ ಹಾಡದೆಯೆ ಸತ್ತರೂ ಚೆನ್ನ !

ಇಂಗ್ಲಿಷ್ ಮೂಲ : S.T. Coleridege-

# ನನಗೆ ಪುಟ್ಟವು ಎರಡು ರೆಕ್ಕೆಗಳು ಬಲಿತಿದ್ದು

ನನಗೆ ಪುಟ್ಟವು ಎರಡು ರೆಕ್ಕೆಗಳು ಬಲಿತಿದ್ದು
ಗರಿಗೂಡಿದೊಂದು ಗೆಡೆವಕ್ಕಿ ನಾನಾಗಿರಲು
ನಿನ್ನೆಡೆಗೆ ಬರುತಿದ್ದೆ ಹಾರಿ ನಲ್ಲೆ !
ಅದರೀ ಬಯಕೆಗಳು ಕೆಲಸಕ್ಕೆ ಬಾರದವು
ಅದರಿಮದ ಇರುವೆನಿಲ್ಲೆ.

ನಿದ್ದೆಯಲಿ ನಿನ್ನಡೆಗೆ ಹಾರಿ ಬರುವೆನು ನಾನು,
ನನ್ನ ನಿದ್ದೆಯೊಳೆಲ್ಲ ನಿನ್ನ ನೆಡೆಬಿಡದಿರುವೆ;
ತನ್ನದೇ ಆಗಿಹುದು ಲೋಕವಲ್ಲಿ !
ಆದರೆಚ್ಚರಗೊಳುವೆ; ಬಳಿಕ ನಾನೆಲ್ಲಿರುವೆ?
ಒಬ್ಬನೇ ಒಂಟಿಯಲ್ಲಿ.

ಅರಸೆ ಆಜ್ಞಾಪಿಸಲಿ ನಿದ್ದೆಯದು ನಿಂತಿರದು;
ಉಷೆಗೆ ಮುಂಚೆಯೆ ಏಳಲೆನಗಾಸೆ, ಏಕೆನಲು–
ನಿದ್ದೆ ನನ್ನನು ಬಿಟ್ಟು ನಡೆದಿದ್ದರೇನು,
ಬೆಳಕಾಗದಿರುವಾಗ ಕಣ್ಣನಿನ್ನೂ ಮುಚ್ಚಿ
ಕನಸನೇ ಕಾಣುತಿಹೆನು.

೩೦–೮–೧೯೨೮

ಇಂಗ್ಲಿಷ್ ಮೂಲ : Coleridege-
'Something childish, but very natural'

# ಗಟೆಯ (Goethe) ಕವಿತೆಗಳು

೧

## ವನಸುಮ

**(Found)**

ವನದಲಿ ಒಬ್ಬನೆ
ಹೋಗುತಲಿದ್ದೆ;
ಏನನು ಗೈಯದೆ
ಚಿಂತಿಸುತಿದ್ದೆ.

ಕಂಡೆನು ನೆಳಲಲಿ
ಸುಮವೊಂದನ್ನು,
ತಾರೆಗಳಂದದಿ
ಹೊಳೆಯುವುದನ್ನು.

ಕೀಳಲು ಹೋದೆನು–
ಇಂತೆಂದಿತು ಅದು:
"ಸೇರಲೆ ನಿನ್ನನು
ಬಾಡಲು ಮಾತ್ರ."

ಗಿಡವನೆ ಕಿತ್ತೆನು
ಬಲು ಜೋಕೆಯಲಿ;
ಮನೆಯೊಳು ನೆಟ್ಟೆನು
ಹೂದೋಟದಲಿ.

ಕಾಣದ ಮೂಲೆಯ–
ಲೊಂದೇ ಬೆಳೆಯಿತು;
ಇನ್ನೂ ಬೆಳೆಯುತ
ಕುಸುಮಿಸುತಿಹುದು.

೩೦–೯–೧೯೨೯

೨

**ಬೆದರಿಕೆಗಳು**

**(Different threats)**

ಎನ್ನ ರನ್ನೆಯ ಕಂಡು ಬಿಗಿಯಪ್ಪಿದೆನು ಅವಳ;
"ಹಾ ! ನಾನು ಕಿರಿಚುವೆನು"–ಬೆದರಿಸಿದಳಿಂತೆನ್ನ

"ನಿನ್ನೆಡೆಗೆ ಧೈರ್ಯದಿಂದೈತರುವ ಮನುಜನನು
ಮಣ್ಣು ಮಾಡುವೆ"ನೆಂದು ಪೌರುಷವ ಕೊಚ್ಚಿದೆನು.

"ಪ್ರಿಯತಮಾ ಸುಮ್ಮನಿರಿ; ಆಲಿಸುವರಿರಬಹುದು;
ಪ್ರಿಯತಮಾ ಸುಮ್ಮನಿರಿ" ಎಂದು ಪಿಸುಗುಟ್ಟಿದಳು.

೩೦–೯–೧೯೨೯

೩

**ಸೈನಿಕನ ಸಮಾಧಾನ**

**(The Soldier's Consolation)**

ಇಲ್ಲವು ; ಕೊರತೆಯು ಇಲ್ಲವು ಎಂದಿಗು:
ಗೋಧಿಯ ರೊಟ್ಟಿ, ಹೆಣ್ಗಳು ಕಪ್ಪು !
ಇನ್ನೊಂದೂರಿಗೆ, ಮರುದಿನದಿರುಳಲಿ :
ರಾಗಿಯ ರೊಟ್ಟಿ, ಹೆಣ್ಗಳು ಬಿಳುಪು !

೧–೧೦–೧೯೨೯

೪

**ಗಾದೆಗಳು**

**(Proverbs)**

ಮಾಲೆಯನು ಕಟ್ಟುವುದು ಬಲು ಸುಲಭವಹುದು;
ಬಲು ಕಷ್ಟ *ಸರಿಯಾದ ಮುಡಿವವರ*ನರಸುವುದು.

---

*_* ತೀನಂಶ್ರೀಯವರ ತಿದ್ದುಪಡಿ : ಮುಡಿವುದಕೆ ತಕ್ಕವರ.

ಒಂದು ಸಾಸಿರ ನೊಣಗಳನು ನಾ ಹಿಂದಿನಿರುಳಲಿ ಕೊಂದೆನು;
ಒಂದೆ ನೊಣವೆಬ್ಬಿಸಿತು ಎನ್ನನು, ಇಂದು ಇರುಳಾದೊಡನೆಯೆ.

ಮಾತೆಗೆ ಕೊಡುವೆ ;
ಮಗಳಿಗೆ ಇರುವೆ.

೮-೧೦-೧೯೨೯

೫

## ದುಂಬಿಗೆ

**(To the grasshopper : ಭಾವಾನುವಾದ)**

ಉಲ್ಲಸದಿಂದಿಹೆ ಎಲೆ ಮರಿದುಂಬಿ
ತಣ್ಣೆಲರಲಿ ನೀ ಹುರಿದುಂಬಿ !
ಹಾರುವೆ ಹೂಗಳ ಮೇಗಡೆ ನಲಿದು
ಬೀರುವೆ ಇಂಪನು ಬೀಗುತ ಒಲಿದು !
ಹೊಲ ವನಗಳಲಿಹುದೆಲ್ಲವನು
ನನ್ನವೆಯೆನ್ನುತ ಪಡೆದಿಹೆಯವನು;
ಇಂತೆಲ್ಲಿಯು ನೀ ರಾಜನವೋಲಿಹೆ,
ರೈತರ ನಡುವೆಯೊಳಂಜದೆ ನೀನಿಹೆ;
ಸೊಂಪಿನ ಚೈತ್ರದ ಪೆಂಪನು ಸಾರುವ
ಇಂಪಿನ ಗಾನದ ಪೆಂಪಿನ ದುಂಬಿಯೆ !
ನಿನ್ನನು ಜನರೆಂದಿಗು ಭೂಷಿಪರು,
ನಿನ್ನನು ಬಾಧಿಸಲಾರೆಳಸುವರು?
ಕವಿತೆಯ ವನಿತೆಯು ನಿನ್ನನು ಪಡೆದು
ಸವಿದನಿಯನು ನಿನಗಿತ್ತಿ ಹಳೊಲಿದು.
ಕಾಮನು ಕೂಡ ಕಾಮಿಸಿ ನಿನ್ನನು
ತನ್ನಯ ನೆರವಿಗೆ ಕರೆದಿಹನು.
ಮೊರೆಯುತ ಮೊರೆಯುತ ಕಬ್ಬಿಗರೆದೆಯೊಳು
ಆಸೆಯನುಸುರುವೆ ನೇಹದಿ ಅವರೊಳು.

ನಿನ್ನಯ ದನಿಯನೆ ಪಾಡುವರವರು,
ನಿನ್ನಯ ಮೈಮೆಯ ಪೊಗಳುವರವರು.
ಇಂತೆಲ್ಲರು ನಿನ್ನನು ಬಯಸಿರಲು
ನಿನಗೆಲ್ಲಿಹುದಳಲೀ ಭೂಮಿಯೊಳು !

ಉಲ್ಲಸದಿಂದಿಹೆ ಎಲೆ ಕಿರಿದುಂಬಿಯೆ,
ತಣ್ಣೆಲರಲಿ ನೀ ಹುರಿದುಂಬಿ !
ಹಾರುವೆ ಹೂಗಳ ಮೇಗಡೆ ನಲಿದು
ಚೈತ್ರದ ಇಂಪನು ಸಾರುತ ಉಲಿದು !

೮-೧೦-೧೯೨೫

## ಬಾಲನ ಬಿನ್ನಹ

ಅಮ್ಮ ನೀನು ಕಲಿಸಿದೆರಡು
ಮಾತುಗಳನು ಕಲಿತು ನಾನು
ಒಂದು ಕಿರಿಯ ಕೃತಿಯ ಮಾಡಿ
ಹಾಡಿ ತೋರುವೆ;
ತಪ್ಪುಹೆಜ್ಜೆ ಹಾಕುತದನು
ಹಾಡಿ ಕುಣಿಯುವೆ.

ತೊದಲಿ ತೊದಲಿ ಹಾಡುತಿರಲು
ಅದನು ನೀನು ಜರೆಯಬೇಡ–
ತೊದಲದಲ್ಲದೆಂತು ನಮಗೆ
ಮಾತು ಬರುವುದು;
ಚದುರ ಬಾಲಕೃಷ್ಣ ಕೂಡ
ತೊದಲಿ ನುಡಿದನು.

ನಿನ್ನ ಬಾಲರೆನಿತೊ ಮಂದಿ
ನಿನ್ನ ಕಣ್ಣ ಮುಂದೆ ಬಳೆದು
ನಿನ್ನ ಹಾಡ ಹಾಡುತಿಹರು–
ನೀನು ಅರಿಯೆಯಾ ?
ಅವರ ಹಾದಿಯಲ್ಲೆ ನಾನು
ಹೋಗುತಿರುವೆನು.

ಬಹಳ ಪೆಡಸು ದಾರಿಯಂತೆ–
ನನ್ನ ಕೈಗಳನ್ನು ಹಿಡಿದು
ದಾರಿಯನ್ನು ತೋರು ನಿನ್ನ
ಕಿರಿಯ ಕುವರಗೆ;
ಹಾರಿಬಂದು ನಿನ್ನ ಬಳಿಗೆ
ಮುತ್ತ ಕೊಡುವೆನು.

೧೯೨೯

## ಒಂಟಿ ಹೂ

(ಒಂದು ಆಂಗ್ಲ ಕವನದ ಭಾವಾನುವಾದ)

ಬೇಸಗೆ ಕೊನೆಯ ಗುಲಾಬಿಯ ಹೂವದು
ಗಿಡದಲೆ ಉಳಿದಿದೆ ಅರಳುತ್ತ;
ಜೊತೆಯಲಿ ಅರಳಿದ ಕುಸುಮಗಳೆಲ್ಲ
ಆಗಲೆ ಅಳಿದವು ಬಲುಬಾಡಿ;
ಅದರಲಿ ಸೂಸುವ ಅಂದವ ನಗಲು
ಮರುಕವ ತೋರಲು ಅದ ಕಂಡು
ಜೊತೆಹೂವುಗಳಾವುವು ಇಲ್ಲ,
ಗಿಡದಲ್ಲಿ ಮೊದಲೇ ಮೊಗ್ಗಿಲ್ಲ.

ನಾ ಬಿಡೆ ನಿನ್ನನು, ಒಂಟಿಯ ಹೂವೆ,
ಬಾಡುತ ಒಣಗಲು ಗಿಡದಲ್ಲಿ;

ಚೆಲುವಿನ ಹೂಗಳು ನಿದ್ದೆಯಲಿಹವು,
ನೀನೂ ನಿದ್ರಿಸು ಜೊತೆಯಲ್ಲಿ.
ಗಿಡದಡಿಯೆಡೆಯಲಿ ಒಣಗುತ ಕಂದಿ
ಪರಿಮಳವಿಲ್ಲದೆ ಬಿದ್ದಿರುವ
ಜೊತೆ ಹೂಗಳ ಜೊತೆ ಕರುಣದಿ ನಿನ್ನ
ದಳಗಳ ಬಿಡಿಸಿ ಹರಡುವೆನು.

ಕೆಳೆತನ ಬತ್ತುತ ನನ್ನನು ಬಿಟ್ಟು
ಮೆರೆಯುವ ಒಲವಿನ ಮಾಲೆಯಲಿ
ಹೊಳೆಯುವ ಮಣಿಗಳು ಬೀಳಲು ಕಳಚಿ
ಹಿಂಬಾಲಿಸುವೆನು ನಾನಂತೆ.
ನೆಂಟರು ಇಷ್ಟರು ಸ್ನೇಹಿತರೆಲ್ಲ
ಹೂವಿನ ತೆರದಲಿ ಹೋಗಿಲು
ನಿರ್ದಯವಾದೀ ಬರಡು ಲೋಕದಲಿ
ಯಾರಿಹರೊಬ್ಬರೆ ಒಂಟಿಯಲಿ?

೧೯೨೯

## ನವಿಲು

ರವಿ ಮುಳುಗುತ್ತಿರೆ ಪಶ್ಚಿಮದಲ್ಲಿ
ಹೊಂಬಿಸಿಲೇನ್ ಸೊಬಗಾಗಿಹುದು !
ಮಿಗಿಲಾಗಿಹ ಈ ಸೌಂದರ್ಯವನು
ನಗುತಿದೆ ಕುಣಿಯುವ ನವಿಲೊಂದು.

ನವಿಲಿನ ಬಣ್ಣವ ಬಣ್ಣಿಸಲೆನಗೆ
ಸಾಲದು ಮಾತು, ಬಣ್ಣವೆ ಬೇಕು;
ಕೆಂಬಿಸಿಲೊಳು ಮಿರುಮಿರುಗುತ್ತಿರುವ
ನವಿಲಿನ ಬಣ್ಣವ ಬಣ್ಣಿಪರಾರೊ?

ಹಸುರೆನಲಾಗದು ನೀಲಿಯದಿರಲು,
ನೀಲಿಯದಲ್ಲವು ಹಸುರೊಳು ಬೆರೆತು;
ಎರಡೂ ಬೆರೆತಿಹ ವರ್ಣವೆ ಎಂದರೆ
ಹಸುರೂ ನೀಲಿಯು ಕಲೆತಿಲ್ಲ.

ಇಂತಿಹ ಸೋಗೆಯ ನವಿಲಿಗೆ ಬಣ್ಣವ
ಬಳಿದಾ ಬ್ರಹ್ಮನ ಚತುರತೆಯೆಷ್ಟು !
ಚಿತ್ರವಿಚಿತ್ರದ ನವಿಲಿನ ಸೋಗೆಯ
ಚಿತ್ರಿಸಿದಾತನ ಹೊಗಳುವುದೆಂತೊ !

ಬೀಸಣಿಗೆಯ ತೆರ ಗರಿಯನು ಹರಡಿ
ತನ್ನನೆ ಮರೆಯುತ ಕುಣಿಯುವ ನವಿಲಿನ
ಬಗೆಬಗೆ ಬಣ್ಣದ ಕಂಗಳ ನೋಡಲು
ಸಾಲವು ನಮಗಿಹ ಕಣ್ಣೆರಡು.

ಜೋಲಾಡುವ ಈ ಸೋಗೆಯು ನವಿಲಿಗೆ
ಭಾರವಾಗದಿಹುದೇ ಹೊರಲು?
ತನ್ನಯ ಹೊರೆಯೇ ಸಾಕಾಗಿರಲು
ಬ್ರಹ್ಮನ ರಾಣಿಯ ಹೊರೆ ಬೇರೆ !

ಬ್ರಹ್ಮನು ಸೃಷ್ಟಿಯ ಕಾರ್ಯದಲಿರಲು
ಬಳಲಿಕೆಯಾಗದೆ ಇರಲೆಂದು
ಶಾರದೆ ವೀಣೆಯ ನುಡಿಸುತ ಹಾಡೆ
ಬಿಜ್ಜಣವಿಕ್ಕುವುದೀ ನವಿಲು.

೧೫-೧-೧೯೨೯

## ಕಿಚ್ಚು ಹಾಯಿರಿ

ತಮ್ಮಟೆಯು ತಾಳವನು ಕೊಡುತಿಹುದು ಬನ್ನಿ,
ಸುಮ್ಮಾನವನು ಸೂಸಿ ನೆಗೆಯಬನ್ನಿ?
ನಿಮ್ಮ ಹಸುಗಳ ಪಿಡಿದು
ಚಿಮ್ಮುತ್ತ ಬನ್ನಿ !
ಬನ್ನಿರಣ್ಣಾ ಬನ್ನಿ ಕಿಚ್ಚ ಬಳಿಗೆ
ಬನ್ನಿರಣ್ಣಾ ಬನ್ನಿ ತಮಟೆ ಮೊಳಗೆ !

ಕರುಗಳನು ಪಿಡಿದಿರುವ ಬಾಲರನು ಮುಂದೆ ಬಿಡಿ,
ಬಾಲರೆಂದೆನುತವರನಲ್ಲಗಳೆಯದಿರಿ;
ಕೆಚ್ಚೆದೆಯ ಬಾಲರನು ತುಚ್ಛರೆಂದೆನಬೇಡಿ,
ಕಿಚ್ಚನ್ನು ಹಾಯುವದಿ ಮುಂದೆ ಬಿಡಿರಿ.
ಅವರ ಜೊತೆಯಲಿ ನುಗ್ಗಿ ಕಿಚ್ಚನ್ನು ಹಾಯಿರಿ,
ಬಂದೆಡರುಗಳನೆಲ್ಲ ಒಡೆದುಬಿಡಿರಿ;
ಪಶುಗಳಾದರು ಮೇಲು ಹಾಯುವುವು ಕಿಚ್ಚ–
ಹೆದರಿ ಹಿಮ್ಮೆಟ್ಟುವವ ಹೇಡಿ, ಹುಚ್ಚ !
ತಮ್ಮಟೆಯು ತಾಳವನು ಕೊಡುತಿಹುದು ಬನ್ನಿ,
ಸುಮ್ಮಾನವನು ಸೂಸಿ ಹಾದು ಬನ್ನಿ !

೧೯೨೯

## ಏಕೆ ಕೊರಗುವೆ?

ಕೊರಗುತಿರುವೆಯೇಕೆ ನವಿಲೆ?
ಪರಮ ಹರುಷವಾಂತು ನೀನು
ಮೆರೆದು ನಲಿದು ಕುಣಿಯುತಿರದೆ
ಏಕೆ ಕೊರಗುವೆ?
ಹೊರಗೆ ಹಕ್ಕಿ ಉಲಿಯುತಿಹವು,
ಏಕೆ ಕೊರಗುವೆ?

ಬಿಸಿಲಿಗೇನು ಕೊರತೆಯಿಲ್ಲ–
ಎಸೆಯುತಿಹನು ಭಾನು ಬೆಳಗಿ;
ಹಸುರು ಗಿಡಗಳೆಲ್ಲ ಚಿಗುರಿ
ಕೆಂಪುವಡೆದಿವೆ;
ಮಸಗಿ ಗಿಣಿಗಳೆಲ್ಲ ಹಾರಿ
ಪೆಂಪ ಹಾಡಿವೆ.

ಎಲ್ಲೊ ದೂರದಲ್ಲಿ ಕುಳಿತು
ಎಲ್ಲರಂತೆ ತಾನೂ ನಲಿದು
ಉಲ್ಲಸದಿಂದುಲಿಯುತಿಹುದು
ಒಂದು ಕೋಗಿಲೆ;
ಎಲ್ಲವಂತಿಲ್ಲ ನೀನು,
ಏಕೆ ಕೊರಗುವೆ?

ಎಂದಿನಂತೆ ಕಂಠವೆತ್ತಿ
ಅಂದದಿಂದ ತಲೆಯ ತೂಗಿ
ಚಂದವಾಗಿ ಕೇಗುತ್ತಿಲ್ಲ,
ಏಕೆ ಕೊರಗುವೆ?
ಕುಂದು ನಿನಗದಿರುವುದೇನೊ,
ಏಕೆ ಕೊರಗುವೆ?

ನನಗೆ ಕೇಳುತಿಲ್ಲವಿಂದು
ಘನದ ನಿನದ ನಿನ್ನ ಕೂಗು,
ಮನವ ಸೆಳೆಯುವಂಥ ಸ್ವನವು–
ಏಕೆ ಕೊರಗುವೆ?
ನಿನ್ನ ಕಂದ ಸೊರಗಿರುವುದು,
ಏಕೆ ಕೊರಗುವೆ?

ಅರಿಯಿತೀಗ ನಿನ್ನ ಕುಂದು–
ಗರಿಗಳಿಲ್ಲ ನಿನಗೆ ಯಿಂದು;–
ಹೊರೆಯ ಹೊರುವ ಗೋಜೆ ಇಲ್ಲ,
ಏಕೆ ಕೊರಗುವೆ?
ಗರಿಯ ಸೋಗೆ ಹೋದ ಮಾತ್ರ–
ಕೇಕೆ ಕೊರಗುವೆ?

ಗರಿಯೆಲ್ಲವು ಉದುರಿತೆಂದು
ಕೊರಗುತಿರುವೆ, ಅರಿತೆ ನಾನು;
ಗರಿ ಬಎಳೆಯುವುದಿನ್ನು ಮುಂದೆ,
ಏಕೆ ಕೊರಗುವೆ?
ಗರಿಯ ಸಿರಿಯ ಪಡೆವೆ ನೀನು,
ಏಕೆ ಕೊರುಗುವೆ?

ಪಾಳುಗೋಡೆ ಮೇಲೆ ಕುಳಿತು
ಗೋಳನೇಕೆ ಕರೆಯುತಿರುವೆ?
ಮೇಲೆ ನೋಡು ನೀಲಿ ನಭವ,
ಸೊಗಸ ಪರಿಯನು;
ಸಾಲುಮರದ ತಳಿರ ನೋಡು,
ಖಗದ ಬೀಡನು.

ನಿನ್ನ ಮನವನರಿಯಲರಿದು–
ನನ್ನ ಮನವೊ, ನೊಂದು ಕೊರಗಿ
ಸುಣ್ಣ ಮರಳುವಂತಿರುವುದು–
ಕೊರಗ ನೂಕೆಲೆ;
ತಣ್ಣಸೀಯಲೆನ್ನ ಮನಕೆ
ಕೇಕೆ ಹಾಕೆಲೆ!

೨೯–೪–೧೯೨೯

## ವೀಣೆಯ ಮಹಿಮೆ

ಬೆಳುದಿಂಗಳೆಲ್ಲೆಲು ಶುಭ್ರತೆಯ ಹರಡಿರಲು
ಇಳೆಯೆಲ್ಲ ಶಾಂತಿಯಲಿ ಮುಳುಗಿದ್ದಿತು;
ಜನರೆಲ್ಲ ಸುಖನಿದ್ರೆಯಲಿ ಲೀನವಾಗಿರಲು,
ತನುವೆನದು ಬೇಗೆಯಲಿ ಕುದಿಯುತಿತ್ತು;
ನನ್ನ ಬಯಕೆಯ ಹಕ್ಕಿ ಕೈಬಿಟ್ಟು ಹೋಗಿರಲು
ನನ್ನ ಮನವಂದು ತಲ್ಲಣಿಸದಿಹುದೆ?
ನನ್ನೆದೆಯು ಬೇಗೆಯಲಿ ಇಂತು ಕುದಿಯುತ್ತಿರಲು
ನನ್ನಳಲ ತಣ್ಣದಿರನಾರಿಸದೆ ಹೋದ!
ನಿದ್ದೆಬಾರದೆ ಇರಲು ಅಲೆಯತೊಡಗಿದೆನು–
ಇದ್ದಕಿದ್ದಂತೆ ವೀಣಾಗಾನ ಕೇಳಿಸಿತು,
ಶಾಂತಿಯನು ಮೂಡಿಸಿತು ಲೋಕವನು ಮರೆಸಿ.
ಕಾಂತಿಯಲಿ ಬೆಳಗುತಿಹ ಚಂದಿರನ ನೋಡುತ್ತ
ನೀಗಿದೆನು ಎನ್ನಳಲ ಗಾನವನು ಕೇಳಿ.
ವೀಣೆಗಾನದ ಮೈಮೆಯನ್ನೆಂತು ಬಣ್ಣಿಸಲಿ !
ಕೋಗಿಲೆಯ ಇಂಚರವು ಇದಕೆ ಎಣಿಯಹುದೆ?
ವೇಣುನಾದವ ಕೇಳಿ ಗೋವುಗಳು ನಿಂತಂತೆ
ಈ ಗಾನವನು ಕೇಳಿ ಮೈಮರೆತು ನಿಂತೆ.
ಲೋಕವನೆ ಮೋಹಿಸುವ ಈ ಗಾನವೆಂತಹುದೊ?
ನಾಕದಿಂದೈತರುವ ದಿವ್ಯ ದನಿಯೋ!

೧೯೨೯

## ತಂಗಾಳಿ

ಉದಯದ ರಾಗವು ಮೂಡುತಿರೆ
ಅದರಲಿ ಬಿಂಬವು ತೇಲುತಿರೆ
ತಣ್ಣೆಲರೊಯ್ಯನೆ ಬೀಸಿತು ತೀಡಿ
ಬಾಳಿನ ಸವಿಯನು ನೆರೆ ಪಾಡಿ:

ನಗಿಸುತ ಸುಮಗಳ ಖಗಗಳ ನುಡಿಸಿ
ಮರದೆಳದಳಿರನು ಮರದಲೆ ನಗಿಸಿ
ಕಂಪಿನ ಬೆಳಗಿನ ಪೆಂಪನು ಸಾರಿ
ತಂಪನು ನೀಡಿತು ಮಿತಿಮೀರಿ.

ದುಂಬಿಗಳೆಲ್ಲವು ಅಂಬುಜವುಳಿದು
ತುಂಬಲು ಗಾನವನೆಲರಲಿ ಕೆಳೆದು
ಗಾಳಿಯು ಗಾನದಿ ತೇಲಿಸಿತಿಳೆಯ,
ಬಾಳಿನ ಹೊಸ ದಿನಮಣಿಕಳೆಯ.

* * *

ಸಂಜೆಯ ರಾಗವು ಮೂಡುತಿರೆ
ಅದರಲಿ ಬಿಂಬವು ತೇಲುತಿರೆ
ತಣ್ಣೆಲರೊಯ್ಯನೆ ಬೀಸಿತು ತೀಡಿ
ಬಾಳಿನ ಕೊನೆಯನು ಉಸಿರಾಡಿ:

ಸುಮಗಳು ಬಾಡುತ ಬರುತಿರಲು
ಅವುಗಳ ಕೆಡಹಿತು ಇರಲಿರಲು
ಹಣ್ಣೆಲೆಗಳನದು ಮಣ್ಣನು ಮಾಡಿತು
ಮಾನವ ನೀನೂ ಮಣ್ಣೆನುತ

ಇರುಳಲಿ ಇಳೆಯದು ತಮದಲಿ ಮುಳುಗಿ
ನೆರೆನಿದ್ದೆಯೊಳಿರೆ ಮೆರೆಯದೆ ಮಲಗಿ
ಜರೆಯುತ ನಗುವುವು ತಾರೆಗಳಳೆಯ
ಒರೆಯಲು ಗಾಳಯು ಬಾಳಿನ ಕೊನೆಯ.

ಗಾಳಿಯು ಬಾಳಿನ ಸವಿಯನು ಸಾರಿ
ಬಾಳಿನ ಕೊನೆಯನು ಕಣ್ಣಿಗೆ ತೋರಿ

ದೇವನ ಊಳಿಗವನು ಮಾಡಿ
ಮೆರೆವುದು ತರತರದಲಿ ಪಾಡಿ.

೧೯-೧೧-೧೯೨೯

## ಅವಳಿ ಸೋದರಿಯರು

ಬಣ್ಣದುಡುಗೆಗಳನು ತೊಟ್ಟು
ಹೊನ್ನಿನೊಡವೆಗಳನು ಧರಿಸಿ
ಕಣ್ಣಿಗೊಮದು ಹಬ್ಬವಿತ್ತು
ನಲಿದು ಮೆರೆದಿರಿ;
ಸಣ್ಣದೊಂದು ಹಾಡ ಹಾಡಿ
ಸೆಳೆದಿರೆನ್ನನು.

ಅತ್ತ ನಲಿದು, ಇತ್ತ ಸುಳಿದು,
ಹತ್ತೆ ಸಾರಿ, ಒಲ್ಮೆದೋರಿ
ಎತ್ತ ಹೋದರತ್ತ ಬಿಡದೆ
ನನ್ನ ತಡೆದಿರಿ;
ಸುತ್ತ ನಿಮ್ಮ ಒಲವಿನಿಂದ
ನನ್ನ ಬಿಗಿದಿರಿ.

ನೀವು ಅವಳಿ ಸೋದರಿಯರು:
ಯಾವಳನ್ನು ಒಲಿಸಲೆಂದು
ಭಾವಿಸುತ್ತ ಸುಮ್ಮನಿರಲು
ಮಾಯವಾದಿರಿ;
ನೀವು ನನ್ನ ಕಯ್ಯನುಳಿದು
ಹಾರಿಹೋದಿರಿ.

ತಿರುಗಿ ಬಂದು ಮೊಗವ ತೋರಿ
ಕರದಿ ಸನ್ನೆಯನ್ನು ಮಾಡಿ

ವರಿಸು ಒಬ್ಬಳನು ಬೇಗ
        ಎಂದು ನುಡಿದಿರಿ:
ಸರಸದಿಂದ ಬನ್ಣವುಟ್ಟು
        ಬಂದಳೊಬ್ಬಳು.

ಬಂದ ತರುಣಿ ಬಣ್ಣವುಟ್ಟು
ಅಂದವಾಗಿ ಹೂವು ಮುಡಿದು
ಇಂದುವಂತೆ ಹೊಳೆವ ಮುಖವ
        ತೋರುತೆಸೆದಳು
ಅಂದು ನನ್ನ ಮನವು ತಣಿದು
        ಹಾರಿ ಕುಣಿಯಿತು

ಕಡೆಗೆ ಇವಳ ನೊಲಿಸಿ ನಾನು
ಸಡಗರದೊಳು ಮೆರೆಯುತಿರಲು
ಓಡಿಹೋದಳುಳಿದ ಯುವತಿ
        ನೀಗಿ ನನ್ನನು;
ಒಡನೆ ಬಂದ ಯುವತಿಯನ್ನೆ
        ಬೇಗ ವರಿಸಿದೆ.

ಹರುಷಗಡಲಿನಲ್ಲಿ ಮುಳುಗಿ
ಮರೆತು ನನ್ನ ಇರವ ನಾನು
ನಿರುತ ಒಲಿದ ಹೆಣ್ಣ ಬಿಡದೆ
        ಅಪ್ಪಿಕೊಂಡರೆ
ಪರಮ ದಿವ್ಯಗಾನ ಸುಳಿದು
        ಚಲಿಸಿತೆನ್ನನು.

ಕಣ್ಣುಬಿಟ್ಟು ನೋಡುತಿರಲು
ನನ್ನನುಳಿದು ಹಾರಿ ಹೋದ
ಸಣ್ಣ ತರುಣಿ ಕಂಠವೆತ್ತಿ

ಹಾಡುತ್ತಿದ್ದಳು ;
ತನ್ನ ಕವಿತೆಗಳನೆ ತಾನು
ಹಾಡುತಿದ್ದಳು.

ಇವಳ ಗಾನ ದಿವ್ಯ ಗಾನ–
ಬವಣೆಗೊಂಡೆನದನು ಕೇಳಿ,
ಬವಣೆಯಿಂದ ಒಲಿದ ಹೆಣ್ಣ
ಮರೆತುಹೋದೆನು;
ಜವದಿ ನನ್ನನುಳಿದು ಅವಳು
ಹಾರಿ ಹೋದಳು.

* * *

ನನಗೆ ಆಸೆಯನ್ನು ತೋರಿ
ಕನಸಿನಲ್ಲು ಬಿಡದೆ ಬಂದು
ಮನವನಿಂತು ಅಲೆಸುತೇಕೆ
ಕಾಡುತಿರುವಿರಿ ?
ಮನವ ಸೆಳೆಯುವಂತೆ ಏಕೆ
ಹಾಡುತಿರುವಿರಿ ?

ನೀವು ಇಬ್ಬರೆನ್ನ ಜೀವ ;
ಸಾವು ಮೇಲು ನಿಮ್ಮನುಳಿದು;
ಜೀವದಿಂದ ಉಳಿಸಲೆನ್ನ
ತೊರೆಯಬೇಡಿರಿ,
ಕಾವರಿಲ್ಲದಿರಲು ನನ್ನ
ಮರೆಯಬೇಡಿರಿ.

೧೯೨೯

# ಕನ್ನಡ ಚೆನ್ನು

ಕನ್ನಡ ಚೆನ್ನು ! ಕನ್ನಡ ಚೆನ್ನು !
ಕನ್ನಡವೆನ್ನಯ ಬಾಳಿನ ಕಣ್ಣು ;
ಕನ್ನಡವೆನ್ನಯ ಜೀವದ ಉಸಿರು,
ಕನ್ನಡ ನಾ ಜನಿಸಿದ ಬಸಿರು !

ಕನ್ನಡ ನಾಡಿನ ಸೊಬಗನು ನೋಡೆ
ಕನ್ನಡದಲಿ ನಲ್ಗವಿತೆಯ ಮಾಡೆ
ಹೃದಯವು ಕುಣಿಕುಣಿದಾಡುವುದು.
ಮುದದಲಿ ಮನವದು ತಣಿಯುವುದು!

ಕನ್ನಡ ನಾ ಮಲಗಿಹ ನೆಳಲು,
ಕನ್ನಡ ನುಡಿಯೆನ್ನಯ ಕೊಳಲು !
ರಸವನುಗುವ ಕನ್ನಡ ವಾಣಿ,
ಎನ್ನಯ ಮನಮೋಹಿನಿ ರಾಣಿ !

ಕನ್ನಡವೆನ್ನುತ ಸುಯ್ದರೆ ಸಾಕು,
ಎನ್ನೆದೆಯ ಸುಮವು ಅರಳುವುದು;
ನಮ್ಮದು ನಮ್ಮದು ಕನ್ನಡವೆಂದು
ಹೆಮ್ಮೆಯ ಪಡಲೇನಚ್ಚರಿಯು?

ಕನ್ನಡ ! ಕನ್ನಡ ! ಇದೆನ್ನ ಜಪವು !
ಕನ್ನಡ ಸೇವೆಯೆ ಜನ್ಮದ ತಪವು !
ಕನ್ನಡವೇ ಎನ್ನಯ ರಕ್ತ;
ನಾ ಕನ್ನಡ ಮಾತೆಯ ಭಕ್ತ.

ಕನ್ನಡವುಳಿದೆನು–
ಗಿನ್ನೇನಿಹುದು?

ಕನ್ನಡ ಚೆನ್ನು ! ಕನ್ನಡ ಚೆನ್ನು !
ಕನ್ನಡದಲ್ಲಿದೆ ಬಯಸಿದ ಹೊನ್ನು !

೧೯೩೦

## ತೊಟ್ಟಿಲ ಹಾಡು

ಬಾನೊಳು ತಿರುಗುತ ಬೇಸರಪಟ್ಟು
ಇಳೆಯ ಸೊಬಗಿನಲ್ಲಿ ಮನವನಿಟ್ಟು
ಚೆಲುವು ವಸ್ತುಗಳೆಷ್ಟೊ ಅವನೆಲ್ಲ ಬಿಟ್ಟು
ಸೊಬಗಿನ ಕಣಿ ನಿನ್ನೊಳಾಸೆಯನಿಟ್ಟು
ತೊಟ್ಟಿಲ ಸುತ್ತಲು ರೆಕ್ಕೆಯ ಹರಡಿ
ನಿನಗೆ ಕಾವಲಿಹರು ಗಂಧರ್ವರು.

ಚಂದಿರನ ನಗುತಿಹ ನಿನ್ನ ಮೊಗವ ನೋಡಿ
ನಿನ್ನ ಕರೆದೊಯ್ಯೆ ಬಂದಿಹರಿಂದು;
ತೊಟ್ಟಿಲು ಬೆಳಗಿದೆ ನಿನ್ನೊಡಗೂಡಿ,
ನೀ ಬೆಳೆಯೆ ತೊಟ್ಟಲಿಗೊಂದು ಕುಂದು !

ಇತ್ತ ತಾ, ಕಂದಯ್ಯ, ಮುಖವ ನೀಡು !
ಮುತ್ತಿನ ಮಳೆಗರೆವೆ–ತೊಟ್ಟಿಲೊಳಾಡು !

(Yeats ಕವಿಯ A Cradle Song ಎಂಬ ಕವನದ ಭಾವಾನುವಾದ)

೨೫–೯–೧೯೩೦

## ಹೂವು–ಹಕ್ಕಿ

ದಾಳಿಂಬೆಯ ಮರದಲಿ ಜಗಿಯುತ್ತಿಹ
ಕೆಂಪು ಕುಸುಮಗಳ ಕಂಡಿಹಿರಾ?
ಹೂಗಳ ನಡುವೆ ಚಿಲಿಪಿಲಿಗುಟ್ಟುತ
ಕುಳಿತಿಹ ಹಕ್ಕಿಯ ನೋಡಿಹಿರಾ?

ಹಾಡದ ಹಳದಿಯ ಬಣ್ಣದ ಹಕ್ಕಿ
ಎಲ್ಲೋ ಕಾಣದೆ ಕುಳಿತಿಹುದು;
ಕಂಪಿಲ್ಲದ ಕೆಂಪಿನ ಕುಸುಮಗಳು–
ಯಾರಿಗು ಬೇಡದೆ ಕೊರಗುವುವು.

ಆದರೆ, ಬಾಲಕನೊಬ್ಬನು ಬಂದು
ಉದುರಿದ ಕುಸುಮವನೊಂದನು ಕಂಡು
ಕುಣಿಕುಣಿದಾಡಿದನದ ಕೊಂಡು–
ಹಾಡದ ಹಕ್ಕಿ ಹಾಡಿತು ಹಿಗ್ಗಿ!

೧೪–೭–೧೯೩೦

## ಜಗಳ

ಗುಲಾಬಿಯೆಂದಿತು : "ಏನೆಲೆ ಸಂಪಗೆ
ನೀನತಿ ಬೀಗಿಹೆ ನಿನ್ನಯ ಕಂಪಿಗೆ !
ನಿನ್ನಾ ಕಂಪನು ನಾ ಬಲು ಬಲ್ಲೆ ;
ನಿನ್ನತಿ ಕಂಪನು ಎಂದಿಗು ಒಲ್ಲೆ."

ಕೆಂಡಸಂಪಗೆಯು ಅದು ಮೊದಲೆ–
ಕೆಂಡ ಕೋಪವೆನ್ನಲು ಮಿಗಿಲೆ !

ದಳಗಳ ಕೆದರುತ ಕಂಪನು ಬೀರುತ
ಇಂತೆಂದಿತು ಅದು ಕೋಪವ ತೋರುತ :
"ಏನು ಗುಲಾಬಿ ! ಮುಳ್ಳಿನ ನಡುವೆ
ಏತಕೆ ಕೊರಗುತ ಸುಮ್ಮನೆ ಕೆಡುವೆ
ಯಾರೋ ಒಬ್ಬರು ನಿನ್ನನು ಮುಡಿದರೆ
ಎಲ್ಲರು ನಿನ್ನನು ಭೂಷಿಪರೆ?
ದಂಡೆಗೆ ಸೇರದೆ ಮಲ್ಲಿಗೆಯೊಡನೆ
ಏತಕೆ ಜಂಬ ನಿನಗೆನ್ನೊಡನೆ?

ಗುಲಾಬಿ ಹೇಳು ;
ಯಾರೆಲೆ ಕೀಳು ?"

ಕೇಳುತ ಮಲ್ಲಿಗೆ ಯೀ ಮಾತನ್ನು
ನುಡಿಯಿತು ವಹಿಸುತ ಸಂಪಗೆಯನ್ನು:
"ಕೇಳು ಗುಲಾಬಿ, ಇಬ್ಬರ ಮುಂದೆ
ಹೋರಾಡುವೆಯಾ ನೀನೊಂಟಿ ?
ಯಾರನ್ನಾದರೂ ನೆರವಿಗೆ ಕರೆದು
ತೋರು ಬಳಿಕ ಬಲ್ಮೆಯ ಮೆರೆದು."

ಗುಲಾಬಿ ಯೋಚಿಸಿ ಯೋಚಿಸಿ ಕೊನೆಗೆ
ಕಮಲವ ಕರೆಯಿತು ವಾದದ ನೆರವಿಗೆ.
ಬೆಡಗನು ಬೀರುತ
ನುಡಿಯಿತು ಕಮಲವು:
"ನೀರನು ಬಿಟ್ಟಿರಲಾರೆನು ನಾನು,
ಆದರು ಮಾತಾಡಲು ಏನು?
ರಮಣಿಯ ಕೆನ್ನೆ ಗುಲಾಬಿಯ ಬಣ್ಣ,
ಅವಳ ವದನವದು ಹೋಲುವುದೆನ್ನ;
ಇಂತಿರೆ ಚೆಲುವಾಗಿಹ ನಮ್ಮಿಬ್ಬರ
ಚೆಲುವೇ ಕಬ್ಬವು ಕಬ್ಬಿಗರ."

ನಕ್ಕು ನಕ್ಕು ಸಾಕಾಯಿತು ಸಂಪಗೆ.
ನಗು ತಡೆಯಲಾರದುದುರಿತು ಮಲ್ಲಿಗೆ,
ಇದೇ ಸಮಯವೆಂ–
ದೆಂದಿತು ಗುಲಾಬಿ:
"ಇನ್ನಾದರು ನೀ ನೋಡೆಲೆ ಸಂಪಗೆ,
ಮಲ್ಲಿಗೆಯುದುರಿತು ಬಾಡುತ ಭೂಮಿಗೆ.
ನಿನ್ನೀ ಗೆಳತಿಯ ಬಲವನು ನೋಡು.
ನನ್ನಾ ಗೆಳತಿಯ ಶಕ್ತಿಯ ನೋಡು !

ಸಂಪಗೆ ಸ್ವಲ್ಪವು ಕುಗ್ಗಲೆ ಇಲ್ಲ;
ಮಿತಿ ಮೀರಿಸಿತು ತನ್ನಾ ಸೊಲ್ಲ–
"ನನಗೇರಿ ಗೆಳತಿಯರಿಲ್ಲದ ಕೊರತೆ?
ಜಾಜಿಯ ಹೆಸರನು ಮುನ್ನವೆ ಮರೆತೆ."

ಇಂತಾ ಜಗಳವು ಸಾಗುತಿರೆ
ಕಮಲ ಗುಲಾಬಿಗಳ್ಸೋಲುತಿರೆ
ಮಧುಪಗಳ ದಂಡು ಧಾವಿಸಿ ಬಂದು
ಕಮಲವ ಹೊಕ್ಕವು ಬಂಡುಣಲೆಂದು;
ಬಂದಳು ಆಮೇಲೊಬ್ಬಳ ತರುಣಿ,
ಗುಲಾಬಿಯನು ಕೊಂಡಳು ನಿಷ್ಕರುಣಿ

ಹೇಗಾದರು ಆಗಲಿ ಇಂತು
ಜಗಳವು ತೀರಿತು ಕೊನೆಗಂತು.

೨೯–೧–೧೯೩೦

## ಇಂದ್ರಭವನದಲಿ

ಕೋಗಿಲೆಗಳೆಲ್ಲ ಬಲು ಇಂಪಾಗಿ ಹಾಡುವುವು–
ಹಾಡದಿಹ ಕೋಗಿಲೆಯದಿಲ್ಲದಿರಬಹುದೆ?
ತರುಣಿಯರು ಹಲಮಂದಿ ಇಂಪಾಗಿ ಹಾಡುವರು–
ಹಾಡದಿಹ ತರುಣಿಯರು ಹಲಹಲವರು !

ಗಿಣಿಗಳೆಲ್ಲವು ನೋಡುವುದಕಂದವಾಗಿಹವು–
ಅಂದವಿಲ್ಲದ ಗಿಣಿಯದೊಂದು ಇಹುದೆ?
ತರುಣಿಯರು ಹಲಮಂದಿ ಚೆಲುವೆಯರಹುದು, ದಿಟ–
ಅಂದವಿಲ್ಲದ ಸುಂದರಿಯರೆ ಹೆಚ್ಚು !
ಕೋಗಿಲೆಯು ಹಾಡುವುದು; ಆದರದು ಕಪ್ಪಂತೆ.
(ನಾನಿದನು ಸರಿಯಾಗಿ ಕಂಡರಿಯೆನು);

ಸೋಗೆನವಿಲಿನ ನೃತ್ಯದಾ ಸೊಟಗ ನೋಡೆ ಚೆಂದ,
ಆದರು ಹಾಡುವುದೆ? ನಾನು ಕೇಳರಿಯೆ,

ಚೆಲುವಿರುವ ತರುಣಿಯರಿಗಿಂಪು ದನಿಯಿಲ್ಲ–
ಕಂಠವಿಹ ಕೋಮಲೆಗೆ ಅಂದವಿಲ್ಲ;
ಕಂಠ ಚೆಲುವೆರಡೂ ಬೇಕೆಂದರಿಲ್ಲ !
ಒಂದೆ ಎಡೆಯಲ್ಲಿಹವು–ಇಂದ್ರಭವನದಲಿ !

೧೯೩೦

## ಕುಮಾರವ್ಯಾಸ

ನೀನು ವ್ಯಾಸನ ಕುವರನೆನುವುದ
ನೀನೆ ಸಾರ್ಥಕಪಡಿಸಿಕೊಂಡಿಹೆ
ಭಾನುವಿನ ಮುಂದಿಟ್ಟ ಕನ್ನಡಿಯಂತೆ ಮಾರ್ಪೊಳೆದು ।
ಸಾನುರಾಗದಿ ಜನದ ಮನವನು
ಏನು ಒಲಿಸುತ ಸೆಳೆದುಕೊಂಡಿಹೆ
ತಾನು ಕನ್ನಡ ಮಾತೆಯೊಲುಮೆಯ ಪುತ್ರನೆಂದೆನಿಸಿ ॥ ೧ ॥

ಎಲ್ಲ ಬಗೆಯಲು ನಿನ್ನ ಕಾವ್ಯವು
ಸೊಲ್ಲ ಹೊಗಳಿಕೆಯನ್ನು ಮೀರಿರೆ
ವಲ್ಲಭನು ನೀ ಕವಿಗಳಲಿ ಎಂದೆನ್ನಲತಿಶಯವೆ ।
ಸಲ್ಲಿತ ನುಡಿಗಾನದಲಿ ನೀ–
ನೆಲ್ಲರನು ನೆರೆ ಮೆಯ್ಯ ಮರೆಸುವೆ
ಕಲ್ಲೆದೆಯ ಕರಗಿಸುವೆಯೆನೆ ನೀನೇನು ಬಲ್ಲಿದನೊ ॥ ೨ ॥

ಬಲಿದ ಭಾವದ ಜಲಧಿಯೊಳು ಬಲು
ಲಲಿತ ನುಡಿಗಳು ಸುಳಿದು ಬರುವುವು
ಅಲೆಗಳಂದದಿ ಮೊದಲು ಚಲಿಸುತ ಮೆಲುಮೆಲನೆ ಉರುಳಿ ।

ಎಳೆಯತನವನು ಮೀರಿ ನಿನ್ನಯ
ಹೊಳಹಿನಿಂದುವು ಪೂರ್ಣನಾಗಲು
ಜಲಧಿಯುಬ್ಬುವುದಲೆಗಳವು ಬಲುಹಿನಲಿ ಬಡಿಯುತಿರೆ ॥ ೩ ॥

ಓದಿ ದಣಿಯೆವು ನಿನ್ನ ಕೃತಿಯನು
ಸಾದರದಿ ನಾವ್ಕೇಳಿ ತಣಿಯೆವು
ಓದಲಾರದ ಜನಮನವನದು ಸೂರೆಗೊಳ್ಳುವುದು ।
ನಾದ ಬೀರುವ ಬಿದಿರ ಕೊಳಲನು
ಆದರದಿ ತಿಳಿದವರು ನುಡಿಸಲು
ಮೇದಿನಿಯ ಜನರೊಲಿದು ತಲೆದೂಗುವುದು ಅಚ್ಚರಿಯೆ ॥ ೪ ॥

ಸಣ್ಣ ಮಾತಿನ ಗೆರೆಗಳೆಳೆಯುತ
ಬಣ್ಣಗಿಣ್ಣವ ಕೋರದೆಯೆ ನೀ–
ನುನ್ನತದ ಭಾವರಸದಲಿ ನೆರೆ ಬಣ್ಣ ತೋರಿಸುತ ।
ಹೊನ್ನ ಹೊಳಹಲಿ ಮಿರುಗಿ ಮೆರೆಯುತ
ಕಣ್ಣ ಮುಂದೆಯೆ ಚಲಿಪ ಚಿತ್ರಗ–
ಳನ್ನು ಚಿತ್ರಿಪ ಚಾರುತರ ಚಿತ್ರಕರ ಕೋವಿದನು ॥ ೫ ॥

ಹಾವ ಭಾವದ ರಸವ ನೆರೆವೊ–
ಯ್ದೋವಿ ಪಾತ್ರಗಳನ್ನು ಸೃಜಿಸುತ
ಜೀವ ಕಳೆಯನು ತುಂಬಿ ಅವುಗಳ ನುಡಿಸಿ ನಡೆಯಿಸುವೆ ।
ಕಾವ ದೇವನ ತೆರದಿ ಕರದಲಿ
ಆವ ಸೂತ್ರವ ಪಿಡಿದು ಎಳೆಯುವೆ
ಕೋವಿದನೆ ನೀನಿಂತು ಹಾಹೆಗಳನ್ನು ಆಡಿಸಲು ॥ ೬ ॥

ಅಳಸಿ ರೇಗಿಸಿ ದ್ರುಪದ ಸುತೆಯನು
ಮುಳಿಸಿ ಕಲಿ ಭೀಮನನು ರೋಷದಿ
ನಲಿವ ಕೃಷ್ಣನನೊಲಿಸಿ ಪಾಂಚಾಲಿಯನು ಅವ ಪೊರೆಯೆ ।
ಒಲಿದ ವಿದುರನ ಸಲಹಿದಾತನು

ಸುಲಭನೋ ಹರಿ ಭಕ್ತರನು ಅರೆ-
ಗಳಿಗೆ ಬಿಡದಿಹನೆಂದು ತೋರಿದೆ ವೀರ ನಾರಯಣ ॥ ೭ ॥

ಹಿಂದೆ ನಡೆದುದನಿಂದು ತೋರುವೆ
ಇಂದು ಅವುಗಳ ಮುಂದೆ ಕುಣಿಸುವೆ
ತಂದು ಹೃದಯಕೆ ಇಂದು ವೀರಾವೇಶದೇಳಿಗೆಯ ।
ಸಂಧಿಸುತ ಕೌರವರು ಪಾಂಡವ-
ರಂದು ರಣರಂಗದಲಿ ಕಾದಿದ
ಗೊಂದಲಕೆ ನಮ್ಮನ್ನು ಒಯ್ಯುವೆಯೊಂದು ಕ್ಷಣದಲ್ಲಿ ॥ ೮ ॥

ನಮ್ಮ ನಾಡಿನ ಕೀರ್ತಿಲತೆಯಲಿ
ಹೊಮ್ಮಿ ಹೂತಿಹ ಹೂಗಳ ನೀ-
ನಿಮ್ಮಡಿಯ ಚೆಲ್ವಾಂತ ಹೂವಲೆ ನೆರೆ ವಿಚಾರಿಸಲು ।
ನಮ್ಮ ನಾಡಿನ ಸಿರಿಯ ಸುಮವದು
ಸುಮ್ಮಸುಮ್ಮನೆ ಬಾಡುವುದೆ ತಾ-
ನಮ್ಮ ಗದುಗಿನ ವೀರ ನಾರಾಯಣನ ಸೇವಿಸಿರೆ ॥ ೯ ॥

೩-೧-೧೯೩೦

## ಬೀದಿಯೊಳಗಲೆಯುತಿಹಳಾರಿವಳು

ಬೀದಿಯೊಳಗಲೆಯುತಿಹ[೧]ಳಾರಿವಳು? ಚೆಲುವೆ;[೧]
ಮೈಯ ಮುಚ್ಚಲು ಒಳ್ಳೆ ಬಟ್ಟೆಯಿಲ್ಲ;
ಉಟ್ಟಿರುವ ಲಂಗವೂ ಹರಿದುಹೋಗಿಹುದು,
ತೊಟ್ಟಿರುವ ಕುಪ್ಪಸವು ಜಿಂದಿಚಿಂದಿ.

---

ತೀ.ನಂ.ಶ್ರೀ.ಯವರು ತಿದ್ದಿರುವ ಪಾಠದ ಮೂಲಪಾಠವನ್ನು ಇಲ್ಲಿ ಕೊಟ್ಟಿದೆ:
೧ ಚೆಲುವೆ ಯಾರಿವಳು. ೨ ಮಳೆ ಮುಗಿಲು. ೩ ಕಂದಿರುವುದು ೪ ಮಡಿವವರಿಲ್ಲ; ನೊಳ್ಪರಿಲ್ಲ.

ನಿಡಿಗರುಳ ಜಡೆಯಾಗಿ ಹೆಣೆದುಕೊಂಡಿಲ್ಲ.
ಧೂಳಡರಿ ಅತ್ತಿತ್ತ ಸರಿಯುತಿಹುದು;
<sup>೨</sup>ತಿಳಿಮುಗಿಲು<sup>೨</sup> ಕವಿದಿರುವ ಚಂದ್ರಮಂಡಲದಂತೆ
ಇವಳ ಮುಖವೇಕೆ ಬಲು ೩ಕಂದಿರುವುದು?<sup>೩</sup>

ಅಡಗಿರುವ ಅವಳ ಸೌಂದರ್ಯವನು ಭಾವಿಸಲು
ಸಿರಿಯುಳ್ಳ ರಮಣಿಯರ ಜರೆಯುತಿಹುದು;
ಸಿಂಗರಿಸಿಕೊಳ್ಳುವುದಕೊಂದು ಕಾಸಿಲ್ಲ,
ತಿರಿಮ ತಿನ್ನುವಳಿವಳು, ಈ ಚೆಲುವೆ ಹುಡುಗಿ.

ವನದಲ್ಲಿ ಮೆರೆಯುತಿಹ ಸುಮವಿದ್ದರೇನು,
ಅದನು ೪ನೋಡುವರಿಲ್ಲ, ಮುಡಿವರಿಲ್ಲ೪–
ತುಂಬಿದೀ ಪಟ್ಟಣವು ಇವಳ ಪಾಲಿಗೆ ಕಾಡು,
ಇವಳ ಕೇಳುವರಿಲ್ಲ, ಆರೈವರಿಲ್ಲ.

ಕಾಡುಹಕ್ಕಿಯ ಗಾನವನು ಕೇಳ್ವರಾರು ?
ಆದರೂ ಹಾಡುವುದು ವ್ಯರ್ಥವಾಗಿ–
ಇವಳು ಗಾಯಕಿಯಲ್ಲ; ಇಂಪಾಗಿ ಪಾಡುವಳು;
ಇವಳ ಹಾಡನು ಮೆಚ್ಚಿ ಕೇಳ್ವರಿಲ್ಲ

ಮನೆಮನೆಯ ಬಾಗಿಲಿಗೆ ಹೋಗಿ ಹಾಡುವಳು.
ಒಂದೆ ಹಿಡಿಯಕ್ಕಿಯನು ಬರಿದೆ ಬೇಡುವಳು ;
ಭಿಕ್ಷವನು ಹಾಕದಿರೆ ಮನದಲ್ಲಿ ನೊಂದು
೫ದೈನ್ಯದಲಿ ದೇವನಿಗೆ ಮೊರೆಯಿಡುವಳು.೫

೫ ದೇವನನು ದೈನ್ಯದಲಿ ಪ್ರಾರ್ಥಿಸುವಳು.

ಅವಳ ರೂಪನು ನೋಡಿ ತಲೆಯ ತೂಗಿದೆನು-
ಅವಳುಡುವ ನೋಡಿದರೆ ತುರುಕರವಳು !
ಬೇರೆ ಮತದವಳೆಂದು ಭಿಕ್ಷವನು ಕೊಡರು-
ದೂರ ನಡೆ, ತೊಲಗೆಂದು ಗದರಿಸುವರು.

ಎಲ್ಲರೂ ಅಟ್ಟುತಿಹ ಇವಳನ್ನು ನೋಡಿ
ಮರುಗಿದೆನು ಮನದಲ್ಲಿ ಶೋಕದಿಂದ;
ಯಾರಿಗೂ 'ಬೇಕಿಲ್ಲದವಳ'[೭] ಗಾನಕ್ಕೆ
ನನ್ನ ಹೃದಯದೊಳಾಗ ಎಡೆಯನಿತ್ತೆ.

ಹೆಣ್ಣಾಗಿ ಹುಟ್ಟಿಹಳು, ಕಷ್ಟಪಡುತಿಹಳು;
ಜನರೆಂತು ಇವಳನ್ನು ತೊರೆಯುತಿಹರು ;
ತಮ್ಮಂತೆ ಜೀವಿಯೆಂದೆಣಿಸದಿಹರು ;
ದೇವನಿಗು ಇವಳಲ್ಲಿ ದಯೆಯಿಲ್ಲವೆ?*

೧೯೨೯

---

೭. ಬೇಡದಿಹ ಅವಳ.
* 'ಹಕ್ಕಿಹಾಡು' ಸಂಕಲನದಲ್ಲಿರುವ ಇದೇ ಕವನವನ್ನು ಎಂ.ವಿ.ಸೀ. ಅವರ ಪಾಠದ ದೃಷ್ಟಿಯಿಂದ ಉಳಿಸಿಕೊಳ್ಳಲಾಗಿದೆ-ಸಂ.

# ನನ್ನ ಮಾತು

"ಕಾವ್ಯಾಲಾಪ", ೪೦-೫೦ ಪದ್ಯಗಳ ಒಂದು ತೀರ ಚಿಕ್ಕ ಪುಸ್ತಕ. ಪುಸ್ತಕ ಚಿಕ್ಕದಾದರೂ, ಅದರ ಪರಿಣಾಮ, ಅಂದಿನ ಸಾಹಿತ್ಯ ಪ್ರಪಂಚದಲ್ಲಿ ತಕ್ಕಮಟ್ಟಿಗೆ ಆಯಿತು. ರಷ್ಯದ ಅಕ್ಟೋಬರ್ ಕ್ರಾಂತಿಯ ಪ್ರಭಾವ ನನ್ನ ಮೇಲಾಗಿದ್ದರೂ, ನಾನು ಕಮ್ಯುನಿಸಮ್ಮಿನ ಸಿದ್ಧಾಂತವನ್ನು ಪೂರ್ತಿ ಒಪ್ಪಿರಲಿಲ್ಲ. ಮಹಾತ್ಮರು ಬೋಧಿಸಿದ ಅಹಿಂಸಾಯುತ ಕ್ರಾಂತಿಯಲ್ಲಿ ನನ್ನ ನಿಷ್ಠೆ ದೃಢವಾಗಿ ನೆಲೆಸಿತ್ತು.

೧೯೪೨-೪೩ರ ಸುಮಾರಿನಲ್ಲಿ, ಭಾರತದ ಎಲ್ಲಾ ಪ್ರಾಂತಗಳ ಸಾಹಿತ್ಯದಲ್ಲೂ, ಪ್ರಗತಿಶೀಲ ಸಾಹಿತ್ಯದ ಚಳವಳಿ ಜೋರಾಗಿ ಪ್ರಾರಂಭವಾಗಿತ್ತು. ಸಾಹಿತ್ಯ ಬಡವರ ಬವಣೆಯನ್ನು ಚಿತ್ರಿಸಬೇಕು, ಆ ಮೂಲಕ ಸರ್ವಸಮಾನತಾ ತತ್ವವನ್ನು ಪ್ರತಿಪಾದಿಸಬೇಕು-ಎಂಬ ನಿಲುವಿನಲ್ಲಿ ತಪ್ಪೇನೂ ಇಲ್ಲ. ಪ್ರಗತಿಶೀಲ ಪಂಥದ ಬರಹಗಾರರು ಇಷ್ಟಕ್ಕೆ ನಿಲ್ಲದೆ, ಸಮಕಾಲೀನ ಕವಿಗಳು ನಿಸರ್ಗದ ವರ್ಣನೆ ಮಾಡುತ್ತಿದ್ದುದನ್ನೂ ಪ್ರಾಚೀನ ಸಾಂಸ್ಕೃತಿಕ ಪರಂಪರೆಯಲ್ಲಿ ನಿಷ್ಠೆಯುಳ್ಳವರಾಗಿದ್ದುದನ್ನೂ ಕಟುವಾಗಿ ಟೀಕಿಸಿದರು; ಈ ಕವಿಗಳು ದಂತದ ಗೋಪುರದಲ್ಲಿ ಕುಳಿತು ಬರೆಯುವವರು-ಎಂದು ಹಾಸ್ಯ ಮಾಡಿದರು; ಇವರು ಪ್ರಗತಿಶೀಲರ ದೃಷ್ಟಿಯಲ್ಲಿ ಪ್ರತಿಗಾಮಿಗಳಾದರು. ಹರೆಯದ ಬಿಸಿರಕ್ತದ "ರಾಘವ"ನಿಗೆ ಇದು ಸಹಿಸಲಿಲ್ಲ. ಪ್ರಗತಿಶೀಲ ಸಾಹಿತ್ಯದ ನಿಲುವನ್ನು ಪದ್ಯರೂಪದಲ್ಲಿ ಪ್ರತಿಭಟಿಸುತ್ತಾ, ಆ ಗುಂಪಿನೊಂದಿಗೆ ಬಹುಮಟ್ಟಿಗೆ ಏಕಾಂಗಿಯಾಗಿಯೇ ಹೊರಾಡಿದನು. "ಕಾವ್ಯಾಲಾಪ" ಪ್ರಕಟವಾದ ಕೂಡಲೆ ಅದಕ್ಕೆ ಪ್ರತಿಕ್ರಿಯೆಯಾಗಿ "ವ್ಯರ್ಥಾಲಾಪ"ವೂ, ಪ್ರಗತಿಶೀಲ ಸಾಹಿತ್ಯಕ್ಕೆ ನಿಷ್ಠನಾಗಿದ್ದ ಕವಿಯಿಂದ ಹೊರಬಂದಿತು. ಕಾವ್ಯಾಲಾಪದ ಪದ್ಯಗುಚ್ಛ, ಪ್ರಗತಿಶೀಲ ಚಳವಳಿಯ ಮುಖ್ಯ ಆಪಾದನೆಗಳನ್ನು ನಿಮಿತ್ತ ಮಾಡಿಕೊಂಡು ರಚಿತವಾಗಿದ್ದರೂ, ಕಾವ್ಯದ ಸ್ವರೂಪ, ಕಾವ್ಯದ ವಸ್ತು, ಕಾವ್ಯದ ಕಾರ್ಯ, ಕಾವ್ಯದಲ್ಲಿ ಹೊಸತು-ಹಳತರ ಪ್ರಶ್ನೆ, ಕಾವ್ಯದ ಮಹಿಮೆ, ಮುಂತಾಗಿ ಪ್ರಾಚೀನ ಕವಿಗಳು ಕಾವ್ಯದ ಪೀಠಿಕಾ ಪ್ರಕರಣದಲ್ಲಿ ಏನೆಲ್ಲ ನಿರ್ವಚಿಸುತ್ತಿದ್ದರೊ ಅದೇ ಮಾದರಿಯಲ್ಲಿ ಸ್ವತಂತ್ರವಾಗಿ, ಸಮಕಾಲೀನ ಸಂದರ್ಭಕ್ಕೆ ಅನುಗುಣವಾಗಿ, ರಚಿತವಾಗಿದ್ದು. ಒಟ್ಟಿನಲ್ಲಿ, ಈಗ ನವೋದಯ ಕಾವ್ಯ ಎನ್ನುವ ಕಾಲದ ಕವಿಗಳ ಕಾವ್ಯದ ಸಮರ್ಥನೆ ಕಾವ್ಯಾಲಾಪದಲ್ಲಿದೆ. ಕಾವ್ಯತತ್ವದ ಜಿಜ್ಞಾಸೆಯ ಕೆಲವು ಮುಖ್ಯ

ವಿಚಾರಗಳು ಕಾವ್ಯಾಲಾಪದಲ್ಲಿ ಹಾಸು ಹೊಕ್ಕಾಗಿ ಬಂದಿವೆ. ಪ್ರಗತಿಶೀಲ ಸಾಹಿತ್ಯದ ಚಳವಳಿ "ಕಾವ್ಯಾಲಾಪ"ದಿಂದ ತಣ್ಣಗಾಯಿತು ಎಂದು ತಿಳಿಯಬಾರದು. ಅದರ ಸಿದ್ಧಾಂತ ತಳಹದಿಯೇ ಕಾವ್ಯತತ್ವಕ್ಕೆ ವಿರುದ್ಧವಾದದ್ದರಿಂದ, ಕಾವ್ಯ ವಸ್ತುವಿನ ಆಯ್ಕೆಗೆ ಸ್ವಯಂಕಲ್ಪಿತವಾದ ನಿರ್ಬಂಧ ಏರ್ಪಟ್ಟು, ಬಡತನದ ಚಿತ್ರಣ ಸಾಧ್ಯತೆಗಳೂ ಮುಗಿದು ಹೋಗಿ, ಅಶ್ಲೀಲ ವಸ್ತುವಿನ ವಿನ್ಯಾಸವೂ, ಪ್ರಗತಿಯಚಿಹ್ನೆ ಎನ್ನುವ ಕಡೆಗೂ ಚಳವಳಿ ವಾಲಿತು. ಹೊಸಗನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಇದೊಂದು ಪ್ರಮುಖ ಘಟ್ಟ. ಇದರಲ್ಲಿ ನನ್ನ ಪಾತ್ರವೂ ಪ್ರಮುಖವಾಗಿತ್ತು ಎಂಬ ಸಂಗತಿಯನ್ನು ಆಗಿನವರೇ "ಕಾವ್ಯಾಲಾಪ" ಮತ್ತು "ಹಕ್ಕಿಹಾಡ"ನ್ನು ಸಹೃದಯತೆಯಿಂದ ವಿಮರ್ಶಿಸಿದ ಮಾಸ್ತಿ ಮುಂತಾಗಿ ಕೆಲವರ ಹೊರತು, ಉಳಿದ ಅನೇಕ ಸಾಹಿತಿಗಳೇ ಗಮನಿಸಲಿಲ್ಲ– ಎಂದು ನಾನು ತಿಳಿದಿದ್ದೇನೆ. ನನ್ನ ತಿಳಿವಳಿಕೆ ತಪ್ಪಾಗಿರುವುದೂ ಸಾಧ್ಯ.

**"ರಾಘವ"**
**–ಎಂ.ವೀ. ಸೀತಾರಾಮಯ್ಯ**

# ಮುನ್ನುಡಿ

ಮಾನವನ ದೇಹರಚನೆಯಲ್ಲಿ ಜ್ಞಾನೇಂದ್ರಿಯ-ಕರ್ಮೇಂದ್ರಿಯುಗಳು ಜೋಡಿಯಾಗಿ ನಿರ್ಮಿತವಾಗಿವೆ. ಕಣ್ಣು, ಕಿವಿ, ಕೈ, ಕಾಲುಗಳು ಎರಡೆರಡು ನಿರ್ಮಿತವಾಗಿವೆ. ಇವು ಸಂಪುಷ್ಟವಾಗಿ ಬೆಳೆದು ತಮ್ಮ ತಮ್ಮ ಕೆಲಸಗಳನ್ನು ನಿರ್ವಹಿಸುತ್ತಿದ್ದರೆ ಮನುಷ್ಯನಿಗೆ ಕ್ಷೇಮಾಭ್ಯುದಯಗಳುಂಟು. ಇವುಗಳಲ್ಲೊಂದು ನ್ಯೂನವಾದರೂ ಕಾರ್ಯನಿರ್ವಹಣೆ ಸರಿಯಾಗಿ ಸಾಗದು. ಆದರೆ ನಾಲಗೆಯು ಮಾತ್ರ ಒಂದೇ ಇರುತ್ತದೆ. ತಿನ್ನುವುದು ಮತ್ತು ಮಾತಾಡುವುದು ಕಡಿಮೆಯಾಗಿರಲೆಂಬುದು ಪ್ರಕೃತಿಯ ಉದ್ದೇಶವಿರಬಹುದು! ಅಲ್ಲದೆ ತಿನ್ನುವಾಗ ಮಾತಾಡಬಾರದು, ಮಾತಾಡುವಾಗ ತಿನ್ನಬಾರದು ಎಂಬುದು ದೈವಸಂಕಲ್ಪವಾಗಿರಬಹುದು! ಒಂದು ಕಾರ್ಯವಾದ ಮೇಲೆ ಇನ್ನೊಂದು ಕಾರ್ಯವಾದಲ್ಲಿ ಪ್ರವೃತ್ತಿ ಸಂಗತವಾದದ್ದು. ಮೊದಲು ಜ್ಞಾನ ಸಂಪಾದನೆ, ಅನಂತರ ಗ್ರಂಥರಚನೆ.

ಸಾಹಿತ್ಯದಲ್ಲಿ ಸಹ ಶಾಸ್ತ್ರ-ಕಾವ್ಯ ಎಂಬೆರಡು ಜೋಡಿಗಳು ಅವಶ್ಯಕ. ಇವು ಸಮೃದ್ಧವಾಗಿ ಬೆಳೆದಾಗ ಸಾಹಿತ್ಯವು ಸಂಪುಷ್ಟವಾಗುತ್ತದೆ. ಯಾವ ಭಾಷೆಯಲ್ಲಿ ಈ ರೀತಿ ಸಾಹಿತ್ಯವು ಬೆಳೆದಿರುತ್ತದೆಯೋ ಆ ಭಾಷೆಯ ಜನರಿಗೆ ಕ್ಷೇಮಾಭ್ಯುದಯಗಳು ದುರ್ಲಭವಲ್ಲ. ಇಂದು ಕನ್ನಡದಲ್ಲಿ ಇವೆರಡು ಮಾರ್ಗದ ಗ್ರಂಥಗಳು ಬೆಳೆಯುತ್ತಿವೆಯೆಂಬುದು ಸಂತೋಷದ ಸಂಗತಿ. ಸಾಮಾನ್ಯವಾಗಿ ವೇದಾಂತಾದಿದರ್ಶನ ಶಾಸ್ತ್ರವು ಕಾವ್ಯಮಾರ್ಗವನ್ನನು ಸರಿಸುವುದಿಲ್ಲ. ಕಾವ್ಯದ ಕಡೆಗೆ ಕಣ್ಣೆತ್ತಿನೋಡದೆ ಅದು ಸಾಗಬಲ್ಲದು. ಅದರ ನಡೆ ಉದ್ಧತ. ಅದು ಏಕಾಕಿಯಾಗಿರಲು ಬಯಸುತ್ತದೆ. ಶಾಸ್ತ್ರವು ಸಹೃದಯಿಯಲ್ಲ. ಆದರೆ ಕಾವ್ಯದಲ್ಲಿ ನಮ್ರತೆಯಿರುತ್ತದೆ. ಅದು ಎಲ್ಲರೊಡನೆ ಸ್ನೇಹವನ್ನು ಬಯಸುತ್ತದೆ. ಅದು ಸಹೃದಯಿಯಾದ್ದರಿಂದ ಎಲ್ಲರೊಡನೊಂದಾಗಿ ಶಾಸ್ತ್ರದ ಬೋಧೆಯನ್ನು ಹೀರಿಕೊಳ್ಳುತ್ತ, ಅದರ ಉಪದೇಶಸಾರವನ್ನು ಮೆಚ್ಚುತ್ತ ತನ್ನಲ್ಲಿ ಅಳವಡಿಸಿಕೊಳ್ಳಬಹುದು. ಕಾಂತಾ ಸಂಮಿತವಾದ ತನ್ನ ವರ್ತನೆಯಿಂದ ಎಲ್ಲರನ್ನೂ ಮೆಚ್ಚಿಸಬಲ್ಲುದು. ಶಾಸ್ತ್ರಬೋಧೆಯ ಕಹಿಯನ್ನು ತನ್ನ ಮಧುರಲೇಪದಿಂದ ಸಿಹಿಮಾಡಿ ಕಾವ್ಯವು ಸಹೃದಯರಿಗೆ ಹಂಚುತ್ತದೆ. ಅದರ ಕ್ಷೇತ್ರ ವಿಸ್ತಾರವಾದದ್ದು. ಶಾಸ್ತ್ರಕ್ಕಿಂತ ಕಾವ್ಯ ಅಧಿಕವು ಪ್ರಭಾವಶಾಲಿಯಾದದ್ದು.

ಕನ್ನಡದಲ್ಲಿ ಸರ್ವಜ್ಞವಚನ ಒಂದು ಶಾಸ್ತ್ರಕಾವ್ಯ. ಅದರಲ್ಲಿ ನೀತಿ ಶಾಸ್ತ್ರದ ಬೀಜವು ದರ್ಶನಸಾರವನ್ನು ಹೀರಿಕೊಳ್ಳುತ್ತ ಚಿಗುರೊಡೆದು ಸುಂದರವಾದ ಒಂದು ಗಿಡವಾಗಿ ನಿಂತಿದೆ. ಅದರ ಬೇರುಗಳು ಹಿಂದೆ ಇದ್ದವಾದರೂ ಮೇಲೆದ್ದು ಕಂಗೊಳಿಸಿರುವುದು ಸರ್ವಜ್ಞ ವಚನ. ಇದು ಮುಂದೆ ಬೆಳೆಯುತ್ತ ಡಾ॥ ಡಿ.ವಿ.ಜಿ.ಯವರ ಎರಡು ಕಗ್ಗಗಳೆಂಬ ಮಹಾಸ್ಕಂಧಗಳೊಡನೆ ವರ್ಧಿಸಿ ಹೆಮ್ಮರವಾಗಿ ನಿಂತಿದೆ. ಪ್ರೊ॥ ಎಂ.ವಿ. ಸೀತಾರಾಮಯ್ಯನವರ ಕಾವ್ಯಾಲಾಪವೆಂಬ ಈ ಗ್ರಂಥವು ಆ ಹೆಮ್ಮರದ ಒಂದು ಕೊಂಬೆ.

"ಕಾವ್ಯಾಲಾಪಾಂಶ್ಚ ವರ್ಜಯೇತ್" ಎಂಬ ಒಂದು ಉಕ್ತಿಯನ್ನು ಕಾವ್ಯಮೀಮಾಂಸಕರು ಅಲ್ಲಲ್ಲಿ ಉದ್ಧರಿಸುವುದುಂಟು. ಆ ಉಕ್ತಿ ಅಸತ್ಕಾವ್ಯಕ್ಕೆ ಅನ್ವಯಿಸುತ್ತದೆಯೆಂದೂ ಸತ್ಕಾವ್ಯಕ್ಕೆ ಅನ್ವಯಿಸುವುದಿಲ್ಲವೆಂದೂ ಉತ್ತಮ ಕಾವ್ಯವು ಸರ್ವದಾ ಗ್ರಾಹ್ಯವೆಂದೂ ಕಾವ್ಯಮೀಮಾಂಸಕರೇ ಹೇಳಿದ್ದಾರೆ. ಆ ಉಕ್ತಿಯನ್ನು ನೆನಪಿಸಿಕೊಂಡೇ, ಪ್ರೊ॥ ಎಂ.ವಿ.ಸೀ.ಯವರು ಈ ಪುಸ್ತಕಕ್ಕೆ ಕಾವ್ಯಾಲಾಪವೆಂದೇ ಹೆಸರಿಟ್ಟಂತೆ ಕಾಣುತ್ತದೆ. ಇದು ಸತ್ಕಾವ್ಯವೊ–ಅಸತ್ಕಾವ್ಯವೊ, ಗ್ರಾಹ್ಯವೊ–ಅಗ್ರಾಹ್ಯವೊ? ನೀವೇ ತಿಳಿದು ಹೇಳಿರಿ ಎಂಬ ನಿರ್ಣಯವನ್ನು ಅವರು ಓದುಗರಿಗೇ ಬಿಟ್ಟುಕೊಟ್ಟಿದ್ದಾರೆ. ಈ ಗ್ರಂಥವು ಪೂರ್ಣವಾಗಿಲ್ಲ. ೨೮೩ ಪದ್ಯಗಳಿಗೆ ನಿಂತು ಹೋಗಿದೆ. ಗ್ರಂಥಕರ್ತರು ತೆಂಪಿಲ್ಲದೆ ಹಲವಾರು ಕಾರ್ಯಕ್ರಮಗಳನ್ನಿಟ್ಟುಕೊಂಡಿದ್ದವರು. ಯಾವಾಗಲಾದರೂ ಬಿಡುವು ದೊರೆತಾಗ, ಮನಸ್ಸು ಪ್ರಫುಲ್ಲವಾಗಿದ್ದಾಗ, ನಾಲ್ಕೈದು ಪದ್ಯಗಳಂತೆ ಬರೆದು ಸೇರಿಸುತ್ತ ಹೋಗಿರಬೇಕು. ಅಂತೂ ಇದರ ಪೂರ್ಣತೆಗೆ ಅವರು ತೀವ್ರವಾದ ಗಮನವನ್ನು ಕೊಡಲಿಲ್ಲವೆನಿಸುತ್ತದೆ. ಬರೆದದ್ದನ್ನು ಪುನರವಲೋಕಿಸುವುದೂ ಅವರಿಗೆ ಸಾಧ್ಯವಾಗಿಲ್ಲ. ಪದ್ಯಗಳೆಲ್ಲವೂ ಮುಕ್ತಕಗಳಾಗಿ ಸ್ವಯಮರ್ಥ ಪೂರ್ಣಗಳಾದ್ದರಿಂದ ವಾಚಕರಿಗೆ ತೊಡಕೇನೂ ಇಲ್ಲ, ಗ್ರಂಥಕರ್ತರ ಆಳವಾದ ಪಾಂಡಿತ್ಯ, ವಿಶಾಲವಾದ ಲೋಕಾನುಭವ, ಗಾಢವಾದ ಚಿಂತನ ಮತ್ತು ಕವಿತಾಸಿದ್ಧಿಗಳಲ್ಲಿ ಎರಡು ಮಾತಿಲ್ಲ. ಅವರು ರಚಿಸಿರುವ ವಿವಿಧ ಶಾಸ್ತ್ರ ಗ್ರಂಥಗಳು, ಕಥೆ ಕಾದಂಬರಿಗಳು ಮತ್ತು ಕವಿತೆಗಳು ಇದಕ್ಕೆ ಸ್ಪಷ್ಟ ಸಾಕ್ಷಿಗಳಾಗಿ ನಿಂತಿವೆ. ಈ ಪುಸ್ತಕದಲ್ಲಿರುವ ಕಾವ್ಯಾಲಾಪಗಳು ಅವರ ವಿಚಾರ ಮಂಥನಗಳ ಉದ್ದ ಅಗಲ ಆಳಗಳನ್ನು ಸ್ಫುಟವಾಗಿ ಹೇಳಬಲ್ಲವು. ಇದರಲ್ಲಿ ಮೊದಲ ಸುಮಾರು ೮೦ ಪದ್ಯಗಳು ಬರಿಯ ಕಾವ್ಯಚಿಂತನೆಗೆ ಮೀಸಲಾಗಿದ್ದು, ಮುಂದೆಯೂ ಕಾವ್ಯಕ್ಕೆ ಸಂಬಂಧಿಸಿದ ಎಚ್ಚರಿಕೆಯ ನುಡಿಗಳು ಕೆಲವು ಬರುತ್ತವೆ. ಅವರ ಕಾವ್ಯಪ್ರಿಯತೆಗೆ ಈ ವಿಸ್ತರವೇ ನಿದರ್ಶನವಾಗುತ್ತದೆ. ಅವರಿಗೆ ನಮ್ಮ ಪ್ರಾಚೀನ ಸಾಹಿತ್ಯವು ತುಂಬ

ಜೀವನಮೌಲ್ಯವುಳ್ಳದ್ದಾಗಿ ಕಂಡು ಬಂದಿದೆ.

ಪೂರ್ವ ಕವಿಗಳ ಮಾತು ನಾಡ ನಂದಾದೀಪ
ನಾಡದೇವೀಯ ಮುಂದೆ ಉರಿಯುತಿರಲಿ (೬೫)

ರಾಮಾಯಣ-ಮಹಾಭಾರತಗಳನ್ನು ತೆಗಳತಕ್ಕವರನ್ನೇ ಅವರು ತೆಗಳುವ ಬಗೆ ಸೊಸಗಾಗಿದೆ-

ರಾಮಾಯಣವ ಸುಡಿರೊ ಭಾರತವ ಬಿಸುಡಿರೋ
ಎಂದೆನಲು ಅವು ಬರಿಯ ಹಾಳೆ ಕಟ್ಟೆ?
ಆ ಮಹಾ ಕಾವ್ಯಗಳು ನಮ್ಮ ಜನಜೀವನದ
ಹಾಸು ಹೊಕ್ಕವ ತೆಗಳೆ ನೀನೆ ಕೆಟ್ಟೆ !

ನವ್ಯಕವಿಗಳು ಹೊಸ ಸಾಹಿತ್ಯವನ್ನು ರಚಿಸಲಿ. ಆ ರಚನೆಗೆ ಅಡಿಗಟ್ಟು ಹಳೆಯ ಕಾವ್ಯಗಳೇ ಎಂಬುದನ್ನು ಮರೆಯಬಾರದು-

ಹಳೆ ಕಾವ್ಯಗಳು ಹಲವು ಅಡಿಯ ಕಲ್ಕಟ್ಟಡವು
ಬೇಕಾದ ಮಂದಿರವ ಕಟ್ಟು ಮೇಲೆ ।
ನಿಲುವುದೇ ಮಂದಿರವು ಏಸು ಸೊಗಸಾದೊಡಂ
ಅಡಿಗಟ್ಟಡವೆ ಬೇಡವೆಂದು ಕೀಳೆ ? (೨೫)

ಕಾವ್ಯರಚನೆಯ ಉದ್ದೇಶಗಳು ಎರಡೇ. ಒಂದು ಮುಗ್ಧರಿಗೆ ಹಿತೋಪದೇಶ. ಇನ್ನೊಂದು ಸಿದ್ಧರಿಗೆ ರಸಪಾಕದ ಔತಣ-

ಮುಗ್ಧರರಿವಿಗೆ ಬೇಕು ಬುದ್ಧಿ ಹೇಳುವ ಕಾವ್ಯ
ಶುದ್ಧರಸಿಕರಿಗಿರಲಿ ಕಾವ್ಯರಸಭಾರ

ಇಂದು ದಲಿತರ ಸಾಹಿತ್ಯ, ಬಂಡಾಯ ಸಾಹಿತ್ಯ, ಮುಂತಾದ ಕೂಗು ಎದ್ದಿದೆ. ಈ ಕೂಗನ್ನೆಬ್ಬಿಸಿದವರಲ್ಲಿ ಎಷ್ಟು ಮಂದಿಗೆ ದಲಿತರ ಸಮಸ್ಯೆಯ ಅರಿವಿದೆ? ಬಡವರ ಕಷ್ಟದ ಪರಿಚಯವಿದೆ? ಸುಪ್ಪತ್ತಿಗೆಯಲ್ಲಿ ಮಲಗ ತಕ್ಕವನು ಸಾಹಿತ್ಯವನ್ನು ರಚಿಸಿ ದೀನದಲಿತರನ್ನು ಉದ್ಧರಿಸುತ್ತೇನೆನ್ನುವುದು ಪೊಳ್ಳು ಮಾತು-

ಹೊರಗೆ ಬಾ ಸಾಹಿತಿಯೇ ಬಡತನವನಪ್ಪುಕಯ್
ಬಡವನೊಡನಿರು ನೀನು ಬಡವನಾಗಿ (೪೭)
ಕಾಣದೆಯೆ ಬೆಳಕನ್ನು ಹುಟ್ಟು ಕುರುಡನು ತಾನು
ಆದರೆ ಪರಿ ಬಣ್ಣಿಸುವುದೆಂತು ಸಾಧ್ಯ (೪೬)

ಸಮತಾವಾದವೆಂಬ ರಾಜಕೀಯದ ಕಟ್ಟಡ ಇಂದು ತಾನಾಗಿ ನೆಲ ಕಚ್ಚುತ್ತಿದೆ. ಆ ವಾದದ ಪೊಳ್ಳುತನವನ್ನು ಕವಿದೃಷ್ಟಿ ಎಂದೋ ಕಂಡುಕೊಂಡಿದೆ-

ಸಮತೆಯೆಂಬುದು ಜಗದಿ ಕವಿಕಾಂಬ ನಲ್‌ಗನಸು
ಸಾಮ್ಯವಾದಿಯ ಸ್ವಪ್ನ ಹುಚ್ಚುಕೂಗು ।
ಮಮಕಾರ ಭೂತ ಮಾನವನ ಹೃದ್ರಂಗದಲಿ
ಕುಣಿವನಕ ಆ ಸಮತೆಯಿಲ್ಲ, ಹೋಗು

"ಜೀವಕ್ಕೆ ಜಯವೆನ್ನು ಜೀವನಕೆ ಜಯವೆನ್ನು" ಎಂದು ಡಿ.ವಿ.ಜಿ.ಯವರ ಮರುಳ ಮುನಿಯ ಉದ್ಘೋಷಿಸುತ್ತಾನೆ. ಅದರ ಪ್ರತಿಚ್ಛಾಯೆ ಇಲ್ಲಿದೆ–

ಬಾಳು ಬೇಸರವೆಂದು ಗೋಳಿಡುವೆಯೇತಕ್ಕೆ?
ಬಾಳಿನೊಳಗಿಹುದು ಬೇಕಾದುದೆಲ್ಲ ।
ಬೀಳುಗೈವರಿಗೆ ಬರಿ ಮಳಲೊಟ್ಟಲೀ ಬಾಳು
ಸವಿಯ ಬಲ್ಲಂಗದುವೆಯಚ್ಚು ಬೆಲ್ಲ (೯೫)

ಯಾವ ಮಾನವನೂ ಅನ್ಯರ ನೆರವಿಲ್ಲದೆ ಬಾಳಬಲ್ಲನೆಂಬುದು ಸುಳ್ಳು. ಒಂದಲ್ಲ ಒಂದು ವಿಧದಿಂದ ಪರರ ಸಹಾಯದಿಂದಲೇ ಅವನ ಬಾಳು ಸಾಗಬೇಕಾಗಿದೆ. ಜನೋಪಕಾರವೆಂಬ ಮಾತು ಭಾವಿಸಿ ನೋಡಿದರೆ ಅರ್ಥವತ್ತಾದಲ್ಲ. ಯಾವುದನ್ನು ನಾವು ಉಪಕಾರವೆಂದು ಹೇಳುತ್ತೇವೆಯೋ ಅದು ಸಮಾಜದಿಂದ ನಾವು ಪಡೆದ ಋಣವನ್ನು ತೀರಿಸುವ ವಿಧಾನವೇ ಸರಿ. ಆದ್ದರಿಂದ ದಾನ, ತ್ಯಾಗ ಎಂಬ ಶಬ್ದಗಳು ಮಹತ್ತನ್ನು ಪಡೆದಿವೆ. ಇದರ ಸುಂದರವಾದ ಅಭಿವ್ಯಕ್ತಿ ಹೀಗೆ–

ಎರಡು ಕೈಯಿರುವುದೇತಕ್ಕೆ ಹೇಳುವೆಯೇನು?
ಒಂದು ಕೈ ಕೊಡುವುದಕೆ ಒಂದು ಕೈ ಪಡೆವುದಕೆ (೧೨೦)

"ವಿದ್ಯಾ ದದಾತಿ ವಿನಯಂ" ಎಂಬ ನೀತಿಶಾಸ್ತ್ರವು ಕವಿ ಪ್ರತಿಭೆಯ ಕವಚವನ್ನು ತೊಟ್ಟು ಹೇಗೆ ಸೊಗಸು ಪಡೆದಿದೆಯೆಂಬುದನ್ನು ನೋಡಿ–

ಫಲಭಾರದಿಂದ ಜಗಿಯುವ ಕೊಂಬೆ ಬಾಗುವುದು
ಬಾಗುವುದೇ ಹೀಚಿಡಿದ ಕೊಂಬೆ ರೆಂಬೆ!
ತಲೆಬಾಗುವನು ತಾನೆ ವಿದ್ಯಾವಿಶಾರದನು
ತಲೆನಿಮಿರಿ ತಿರುಗುವನು ಬರಿ ಬಟ್ಟೆಬೊಂಬೆ (೨೪೬)

ಪ್ರೊ॥ ಎಂ.ವಿ.ಸೀ. ಯವರು ಸೂಕ್ಷ್ಮದರ್ಶಿಗಳು. ಸಾಹಿತ್ಯದ ವೈಶಾಲ್ಯವನ್ನು ಕಂಡು ಮೆಚ್ಚಿದವರು. ಹಳತನವನ್ನು ಮಾತ್ರ ಹೊಗಳಲಿಲ್ಲ. ಹೊಸತನ್ನು ಮಾತ್ರ ನಿಂದಿಸಲಿಲ್ಲ. ಎರಡರಲ್ಲಿಯೂ ಗುಣ ಉಂಟು. ಕಾಲವು ಅನಾದಿ ಅನಂತ. ಇದು ಯಾವುದು ನವೀನವೋ ಅದೇ ಕಾಲಗರ್ಭದಲ್ಲಡಗಿ ಪ್ರಾಚೀನವೆನಿಸಿಬಿಡುತ್ತದೆ. ಮರವು ಹಳೆಯದಾದರೂ ಹಣ್ಣುಬಿಡುತ್ತದೆ. ಅದು ಒಣಗಿದರೂ ತನ್ನ ಸಾರವತ್ತಾದ

ಬೀಜದಿಂದ ನವೋದಯುವನ್ನು ಹೊಂದಿ ಆಹ್ಲಾದವನ್ನೀಯುತ್ತದೆ. ಎಷ್ಟು ಮಾರ್ಮಿಕವಾಗಿ ಅವರು ನುಡಿದಿದ್ದಾರೆ, ನೋಡಿ–

ಹಳೆಯದೆಲ್ಲವು ಹೊಲ್ಲ, ಹಾಕು ಬೆಂಕಿಗೆ ಎಲ್ಲ
ಹೊಸದೊಂದೆ ನಲ್ಲದೆನುವೀ ಕೂಗು ಏಕೆ ?
ಹಳಬರೆನಿಸದ ನಿನ್ನ ಹಡೆನ ತಾಯ್ ತಂದೆಗಳ
ಕೊರಲ ಕೊಯ್ಯದೆ ಸುಮ್ಮನಿರುವೆ ಏಕೆ ? (೪)
ಒಳಗೆ ಹೂರಣವಿರಲು ಹಳತೇನು ಹೊಸತೇನು?
ಕಾಲಪುರುಷನಿಗಿಲ್ಲವದರ ತಂಟೆ

ಗಾದೆಗಳಂತೆ ಮೂಡಿಬಂದಿರುವ ಈ ಕಾವ್ಯಾಲಾಪಗಳು ಸದಾ ನೆನಪಿನಲ್ಲಿ ನಿಲ್ಲತಕ್ಕವು. ಕವಿಚಿಂತನೆಯ ಮಾಗಿದ ಫಲಗಳು–

೧. ಹಾಡು ಕಟ್ಟುವನವನು ನಾಡು ಕಟ್ಟುವನಲಾ
ಹಾಡಿನೊಳಗಡಗಿಹುದು ಮಂತ್ರ ಶಕ್ತಿ ।
೨. ಕಿರಿಯರಾಗದೆ ಮೊದಲು ಹಿರಿಯರಾದವರಿಲ್ಲ
೩. ಗರ್ವ ತಿಳಿವಿನ ಕೊಳಕೆ ಪಾಚಿಕಟ್ಟು
೪. ಹತ್ತು ಜನಕಲ್ಲದಿರೆ, ಬರೆಯದನೆ ಜಾಣ
೫. ಫಲಭರಿತ ವೃಕ್ಷಕ್ಕೆ ಕಲ್ಲೆಸೆಯೆ ಫಲವುಂಟು
೬. ಹೆಂಡಕುಡುಕನಿಗೆ ಸವಿಹಾಲು ರುಚಿಸುವುದೇನು?
೭. ಬದುಕು ದೇವನ ವರವೊ ಹದಗೆಡಿಸಬೇಡದನು
೮. ಅರಸಿಗಿಂತಲು ಮಿಗಿಲು ಜನಶಕ್ತಿ ಲೋಕದಲಿ
೯. ತನ್ನ ತೋಟದ ಮುಳ್ಳು ಚುಚ್ಚೆ ನೋಯದೆ ಪಾದ?
೧೦. ನಡೆದ ನಡತೆಯ ನಿಷ್ಠೆ ನುಡಿದ ಕಾವ್ಯಕೆ ಬೆಳಕು

ಗಂಭೀರ ಚಿಂತನದ ಫಲವಾಗಿ ಹೊಮ್ಮಿದ ಈ ದಾರ್ಶನಿಕ ಕಾವ್ಯಧಾರೆ ಸ್ವಲ್ಪ ಕಾಲದವರೆಗೆ ಸುರಿದು ಅಲ್ಲಿಗೇ ಇಂಗಿಹೋಯಿತಲ್ಲ ಎಂಬ ಕೊರಗು ನಮ್ಮನ್ನು ಬಾಧಿಸುತ್ತದೆ. ಇದು ನಮ್ಮ ದೌರ್ಭಾಗ್ಯವಾದರೂ ಇಷ್ಟಾದರೂ ಉಳಿದು ಪ್ರಕಟವಾಗುತ್ತಿದೆಯೆಂಬುದು ನಮ್ಮ ಸೌಭಾಗ್ಯ. ಬಿಡುವಾದಾಗ ಬರೆದಿಟ್ಟ ಈ ಪದ್ಯಗಳನ್ನು ಗ್ರಂಥಕರ್ತರು ಮತ್ತೆ ನೋಡಿ ಕೈಯಾಡಿಸಿಲ್ಲ. ನವ್ಯಶೈಲಿಯಲ್ಲಿ ರಚಿತವಾದ ಈ ಕಾವ್ಯಾಲಾಪಗಳಲ್ಲಿ ಹಲವಾರು ಛಾಂದಸ ದೋಷಗಳು ಉಳಿದುಕೊಂಡಿವೆ. ಪ್ರಕಟಿಸುವ ಮೊದಲು ಇದನ್ನು ಪರಿಷ್ಕರಿಸಬೇಕಾದ ಅವಶ್ಯಕತೆ ಇತ್ತು. ಸದ್ಯದಲ್ಲಿ ಇಷ್ಟಾದರೂ ಸ್ಥಿರವಾಗಿ ಉಳಿಯುವಂತಾಯಿತೆಂದು ಸಂತೋಷಿಸಬೇಕು.

ದಿವಂಗತರ ಪುಣ್ಯಸ್ಮೃತಿಯ ಸಂದರ್ಭದಲ್ಲಿ ಮಗನು ತಂದೆಗೆ ಅರ್ಪಿಸುವಂತೆ, ಈ ಪ್ರಕಾಶನವು ತನ್ನ

ಪಿತನಿಗೆ ಕಾವ್ಯಾಲಾಪದ ತರ್ಪಣವನ್ನೀಯುತ್ತಿದೆ.

ಬೇಕು ಬೇಕಿಂದಿರದೆ ಹಲುಬುತಿಪೆಯೇಕೊ
ಸಾಕೆನಿಸದೇಂ ನಿನಗೆ ಮಲ್ಲಿಗೆಯ ಗಂಧ ।
ಲೋಕದಲಿ ಪೂರ್ಣತೆಯನೆಂತು
ನೂಕು ಬಾಳನು ಲಭ್ಯದೊಳಗೆ ನೀನಂಧ ॥

**–ಎನ್. ರಂಗನಾಥಶರ್ಮ**

# ನಮ್ಮ ಮಾತು

ಸೀತಾರಾಮಯ್ಯನವರು ತಮ್ಮ ಗ್ರಂಥಗಳ ಪ್ರಕಟನೆಗಾಗಿಯೇ ಪ್ರಾರಂಭಿಸಿದ್ದ ರಾಘವ ಪ್ರಕಾಶನವು ಅವರ ನಿಧನಾನಂತರ ಪ್ರಕಟಿಸುತ್ತಿರುವ ಅವರ ಎರಡನೇ ಗ್ರಂಥ ಇದು (ಮೊದಲನೆಯದು ಇದೇ ದಿನ ಇವರೊಂದಿಗೆ ಬಿಡುಗಡೆಯಾದ ಪ್ರತಿಮಾಗೃಹ).

ಕಾವ್ಯಾಲಾಪ ದಿವಂಗತರ ಬಹುದಿನಗಳ ಕನಸಿನ ಫಲ. ೧೯೪೪ರಲ್ಲಿ ಇದೇ ಹೆಸರಿನ ಒಂದು ಪುಟ್ಟ ಪುಸ್ತಕವನ್ನು ಪ್ರಕಟಿಸಿದ್ದರು. ಆ ಬಗೆಗೆ ಅವರ ಅಭಿಪ್ರಾಯವನ್ನು "ನನ್ನ ಮಾತು"ವಿನಲ್ಲಿ ನೋಡಬಹುದು. ಸೀಮಿತವಾದ ಉದ್ದೇಶಕ್ಕಾಗಿ ಬರೆದು ಪ್ರಕಟಿಸಿದ ಆ ಪದ್ಯಗಳ ರಚನೆ ಅಲ್ಲಿಗೇ ನಿಲ್ಲದೆ ವಿಶಾಲವಾದ ವಸ್ತು ವೈವಿಧ್ಯತೆಯನ್ನು ಪಡೆದುಕೊಂಡು ಮುಂದುವರಿಯುತ್ತಲೇ ಇತ್ತು. ಬದುಕಿನ ಎಲ್ಲ ಹರಹುಗಳಿಗೂ ಪ್ರತಿಸ್ಪಂದಿಸುವ ಈ ಪದ್ಯಗಳು ಒಂದು ರೀತಿಯಲ್ಲಿ ದಿವಂಗತರ ಜೀವನಾನುಭವದ ಗಟ್ಟಿರೂಪಗಳು. ೮೦ ವರ್ಷಗಳ ಅವರ ತುಂಬು ಜೀವನದ ಸಾರಸಂಗ್ರಹ ಈ ಪದ್ಯಗಳಲ್ಲಿದೆ. ತಮ್ಮ ಬದುಕಿನ ಕೊನೆಯವರಿಗೂ ಈ ಪದ್ಯಗಳ ರಚನೆಯಲ್ಲಿ ತೊಡಗಿದ್ದರು. ಡೈರಿಯಲ್ಲಿ ಕಾವ್ಯಾಲಾಪದ ಪದ್ಯಗಳಿಗೆ ಅನುಕ್ರಮವಾದ ಕ್ರಮಸಂಖ್ಯೆಗಳನ್ನು ಹಾಕಿದ್ದುದರಿಂದ ಆ ಪದ್ಯಗಳನ್ನೆಲ್ಲ ಸಂಗ್ರಹಿಸಿ ಈ ಮೊದಲಿನ ೪೮ ಪದ್ಯಗಳನ್ನೂ ಸೇರಿಸಿ ಇಲ್ಲಿ ಮೊದಲಬಾರಿಗೆ ಎಲ್ಲ ಪದ್ಯಗಳನ್ನು ಪ್ರಕಟಿಸಲಾಗಿದೆ.

ಈ ಪದ್ಯಗಳಲ್ಲಿ ಬಹುಮಟ್ಟಿಗೆ ಒಂದೇ ರೀತಿಯ ಲಯವನ್ನು ತಂದಿದ್ದರೂ ಕೆಲವು ಪದ್ಯಗಳಲ್ಲಿ ಅದು ವ್ಯತ್ಯಾಸವಾಗಿದೆ. ಹಾಗೆ ವ್ಯತ್ಯಾಸವಾದ ಪದ್ಯಗಳಲ್ಲಿ ಕೆಲವು ಅವರ ಪ್ರಕಟಿತ ಕವನ ಸಂಕಲನಗಳಲ್ಲಿ ಪ್ರಕಟವಾಗಿದೆ. ಆದರೂ ಅವಕ್ಕೆ ಕಾವ್ಯಾಲಾಪ ಪದ್ಯಗಳ ಕ್ರಮಸಂಖ್ಯೆಯನ್ನು ಹಾಕಿದ್ದುದರಿಂದ ಇಲ್ಲಿ ಸೇರಿಸಿಕೊಳ್ಳಲಾಗಿದೆ. ಡೈರಿಯಲ್ಲಿ ಹಲವಾರು ಅರ್ಧರಚಿತ ಪದ್ಯಗಳಿವೆ. ಒಂದು ಎರಡು ಸಾಲುಗಳಿಗೇ ಅವು ನಿಂತಿದ್ದು ಅವಕ್ಕೂ ಕ್ರಮಸಂಖ್ಯೆಯನ್ನು ಹಾಕಿದ್ದಾರೆ. ಪ್ರತ್ಯೇಕವಾಗಿ ಪ್ರತಿಮಾಡಿದ್ದ ಪುಸ್ತಕದಲ್ಲಿ ಮೊದಲ ಕೆಲವಕ್ಕೆ ವಿಷಯಸೂಚಿಯನ್ನು ದಿವಂಗತರೇ ನೀಡಿದ್ದರೂ ಅವು ಸಮರ್ಪಕವಾಗಿರಲಿಲ್ಲ. ದಿವಂಗತರ ೮೧ನೇ ಜನ್ಮದಿನದಂದೇ ಈ ಗ್ರಂಥವನ್ನು ಹೊರತರಬೇಕೆಂಬ ಉದ್ದೇಶವಿಟ್ಟುಕೊಂಡು ಆದಷ್ಟು ಬೇಗ ಅಚ್ಚಿಗೆ ಸಿದ್ಧಪಡಿಸಬೇಕಾಗಿ

ಬಂದುದರಿಂದ ಪದ್ಯಗಳನ್ನು ವಿಷಯವಾರು ವಿಂಗಡಿಸಿ ಮುದ್ರಿಸಲು ಸಾಧ್ಯವಾಗಲಿಲ್ಲ. ಈ ಗ್ರಂಥಕ್ಕೆ ಪುನರ್ಮುದ್ರಣವಾಗುವ ಯೋಗ ಬಂದಲ್ಲಿ ಆ ಮುದ್ರಣದಲ್ಲಿ ಈ ಅರೆಕೊರೆಗಳನ್ನು ಸರಿಪಡಿಸಿಕೊಳ್ಳುವುದಲ್ಲದೆ ಓದುಗರ ಅಭಿಪ್ರಾಯಗಳಿಗೂ ಸ್ಪಂದಿಸಲಾಗುವುದು.

ಈ ಗ್ರಂಥವನ್ನು ಮುದ್ರಣಕ್ಕೆ ಅಣಿಮಾಡುವಲ್ಲಿ ದಿವಂಗತರ ಐದನೇ ಮಗ ಎನ್ನುವಷ್ಟರ ಮಟ್ಟಿಗೆ ಆತ್ಮೀಯರಾಗಿದ್ದ ಪ್ರಿಯ ಸೋದರ ಮಿತ್ರ ಶ್ರಿ.ನಾ. ಗೀತಾಚಾರ್ಯ ಅವರು ಅಪಾರವಾಗಿ ಶ್ರಮಿಸಿದ್ದಾರೆ. ಅಚ್ಚುಕಟ್ಟಾಗಿ ಪ್ರಕಟವಾಗುವಂತೆ ನೋಡಿಕೊಂಡಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ನಮ್ಮ ಕೋರಿಕೆಯನ್ನು ಮನ್ನಿಸಿ ಹಿರಿಯರಾದ ವಿದ್ವಾನ್ ಎನ್.ರಂಗನಾಥಶರ್ಮ ಅವರು ವಿಶ್ವಾಸದಿಂದ ಬಹಳ ಮೌಲ್ಯಯುತವಾದ ಮುನ್ನುಡಿಯನ್ನು ಬರೆದುಕೊಟ್ಟದ್ದಾರೆ. ಅವರಿಗೂ ನಮ್ಮ ನಮ್ಮ ಕೃತಜ್ಞತೆಗಳು.

ಸೀತಾರಾಮಯ್ಯನವರು ನಿಧನರಾದ ಕೂಡಲೇ ಸ್ವಯಂಪ್ರೇರಿತರಾಗಿ ಅವರ ಸ್ಮರಣೆಗಾಗಿ ಒಂದು ಸಾವಿರು ರೂ.ಗಳನ್ನು ನೀಡುವುದಾಗಿ ಘೋಷಿಸಿ ಅದರಂತೆಯೇ ನಡೆದುಕೊಂಡಿರುವ ಕೆ.ಎಸ್.ಸಿ.ಎಸ್.ಟಿ.ಯಲ್ಲಿ ಫೈನಾನ್ಸ್ ಆಫೀಸರ್ ಆಗಿರುವ ಶ್ರೀ ಎನ್. ಬಿ. ಗಂಗಾಧರಪ್ಪ ಅವರು ಪ್ರೀತಿ ವಿಶ್ವಾಸಗಳಿಗೆ ನಾವು ಕೃತಜ್ಞರಾಗಿದ್ದೇವೆ. ಅವರ ಉದಾರ ಕೊಡುಗೆಯನ್ನು ಈ ಗ್ರಂಥದ ಪ್ರಕಟನೆಗೆ ಅತ್ಯಂತ ಕೃತಜ್ಞತೆಯಿಂದ ಬಳಸಿಕೊಂಡಿದ್ದೇವೆ.

ತುಂಬ ಶ್ರದ್ಧೆಯಿಂದ ಕರಡಚ್ಚು ನೋಡಿಕೊಟ್ಟ ಹಿರಿಯರಾದ ಶ್ರೀ ಎನ್.ಎಸ್. ರಾಮಸ್ವಾಮಿ ಅಯ್ಯರ್ ಅವರಿಗೂ, ಕಡಮೆ ಕಾಲಾವಧಿಯಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಶ್ರೀ ರಾಘವೇಂದ್ರ ಪ್ರಿಂಟರ್ಸ್ ಅವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

೯-೯-೧೯೯೦

**ಎಂ.ಎಸ್. ಭಾಸ್ಕರ್**
ರಾಘವ ಪ್ರಕಾಶನದ ಪರವಾಗಿ

# ಕಾವ್ಯಾಲಾಪ

ನಾಲ್ಕು ಗೋಡೆಯ ನಡುವೆ ಕುಳಿತು ನೋಡದೆ ಹೊರಗೆ
ತನ್ನ ಠಾವೇ ಸರ್ವಲೋಕವೆಂದೆಣಿಸಿ
ಲೋಕನಾಯಕ ತಾನು, ತನಗೆ ಸಮನಾರಿಲ್ಲ
ಎಂದೆಂಬ ಬರಿ ಬಯಲು ಭ್ರಾಂತಿಯೇಕೆ? ೧

ತನ್ನ ತಾ ಕಂಡು ಕನ್ನಡಿಯಲ್ಲಿ ಮಾತಾಡಿ
ಹುಬ್ಬು ಹಾರಿಸಿ ನಕ್ಕು ಮೀಸೆ ತಿರುವಿ
ಸನ್ನುತನು ಸನ್ಮಾನ್ಯ ಸಕಲಗುಣ ಸಂಪನ್ನ
ತಾನೆಂಬ ಮಂಗ ಮರುಳಾಟವೇಕೆ? ೨

ತಾನು ನುಡಿದುದೆ ವೇದ, ತಾನು ನಡೆದುದೆ ಮಾರ್ಗ
ತಾನು ಕಂಡುದೆ ಸತ್ಯವೆಂಬ ಹಮ್ಮೇಕೆ?
ತಾನೆ ರಸಿಕರ ರಸಿಕ, ಕಲಿಯುಗದ ಮನ್ಮಥನು,
ಎಂದೆಂಬ ಬಡಿವಾರ ಬಿಂಕಬಿಮ್ಮೇಕೆ? ೩

ಹಳೆಯದೆಲ್ಲವು ಹೊಲ್ಲ, ಹಾಕು ಬೆಂಕಿಗೆ ಎಲ್ಲ,
ಹೊಸದೊಂದೆ ನಲ್ಲದೆನುವೀ ಕೂಗು ಏಕೆ?
ಹಳಬರೆನಿಸಿದ ನಿನ್ನ ಹಡೆದ ತಾಯ್ ತಂದೆಗಳ
ಕೊ ಲಕೊಯ್ಯದೆ ಸುಮ್ಮನಿರುವೆಯೇಕೆ? ೪

ಹಳತು ಹೊಸತೆನ್ನುವೀ ಮಾತು ಬಲು ಹಳೆಯದು,
ಕವಿಗಳೆಲ್ಲರು ಹೊಡೆದ ಹುಯಿಲು ತಮಟೆ;
ಒಳಗೆ ಹೂರಣವಿರಲು ಹಳತೇನು ಹೊಸತೇನು?
ಕಾಲಪುರುಷನಿಗಿಲ್ಲವದರ ತಂಟೆ. ೫

ವೈವಿಧ್ಯವೇ ಜಗದ ಜೀವನದುಸಿರಾಗಿರಲು
ಏಕರೀತಿಯನೆಲ್ಲರಿಗೆ ವಿಧಿಸಬಹುದೆ?
ಅವರವರ ಗೈಮೆಗಳಲವರವರ ವ್ಯಕ್ತಿತ್ವ–
ವರಳಲದೆ ಮೆಚ್ಚಲ್ತೆ ಪರಬೊಮ್ಮಗೆ? ೬

ತನ್ನ ನಡೆಯೇ ಪ್ರಗತಿಯಿನ್ನುಳಿದುದಪ್ರಗತಿ
ಎಂಬ ತಿಳಿವಳಿಕೆಯಿರೆ–ದೇವರ ಗತಿ!
ಪಕ್ಕಕ್ಕೆ ಸರಿವ ನಳ್ಳಿ ತನ್ನಯ ನಡೆಯ
ಮುಂದುಗತಿಯೆಂದೆ ತಿಳಿದಿರುವುದಲ್ತೆ! ೭

ಪ್ರಗತಿಯೆಂಬುದು ಮಹಾ ಕಾಲಚಕ್ರಚ್ಛಾಯೆ,
ಅದರ ತಿರುವಿನೊಳೆಲ್ಲ ಕೆಳಗು ಮೇಲು;
ಈಗ ಮೇಲೇರಿದುದು ನಾಳೆ ಕೆಳಗಿಳಿಯುವುದು,
ಕೆಳಗಾದುದಿನ್ನೊಮ್ಮೆ ತಾನೆ ಮೇಲು! ೮

ಕೋಗಿಲೆಯೆ ಹಾಡದಿರು, ನವಿಲೆ ಕುಣಿದಾಡದಿರು,
ಝೇಂಕಾರ ಮಾಡದಿರು ಮರಿದುಂಬಿಯೆ;
ನೇಸರೇ ತೊಳಗದಿರು, ಚಂದ್ರನೇ ಬೆಳಗದಿರು,
ತಾರೆಯೇ ಮಿನುಗದಿರು–ಇನ್ನು ಮುಂದೆ ೯

ಕಡಲೆ ನೀ ಮೊರೆಯದಿರು, ತೊರೆಯೆ ನೀ ಹರಿಯದಿರು,
ಮುಗಿಲೆ ತೇಲದಿರು ಬಾನ್‌ಸರಸಿಯಲ್ಲಿ;
ಹುಡುಕುತಿಹೆ ಯಾರನ್ನು ಸಡಗರದೆ, ಓ ಪವನ,
ಎಡೆಯಾಡಲುಂಟೆ ನಿನ್ನಗಿನ್ನು ಮುಂದೆ? ೧೦

ನಿಮ್ಮ ಭಕ್ತರು–ಪೂಜ್ಯ ವಾಲ್ಮೀಕಿ, ವರ್ಡ್ಸ್‌ವರ್ತ್,
ಷೇಕ್ಸ್‌ಪಿಯರ್, ಕಾಳಿದಾಸಾದಿ ಕವಿಗಳ್
ತಮ್ಮ ಕವಿತೆಯ ವ್ಯರ್ಥಮಾಡಿಕೊಂಡಿಹರಂತೆ
ನಿಮ್ಮ ನಡೆಬಿಡದೆ ಬಣ್ಣಿಸುತ ಹೊಗಳಿ! ೧೧

ಆ ಕವಿಗಳಂತೆ ಹಳತಾಗಿ ಹೋಗಿಹರಂತೆ
ಕವಿಗಳೆನಿತೋ ಮಂದಿ ಇಂದಿನವರು;
ಈ ಕತದಿನೆನ್ನ, ಕವಿಮಿತ್ರನರಿಕೆಯ ಕೇಳಿ:
ಸಾಕುಮಾಡಿರಿ ನಿಮ್ಮ ಚಲನವಲನ. ೧೨

ಓ ಪ್ರಕೃತಿದೇವಿ, ಪ್ರಪಂಚ ಪಂಚಪ್ರಾಣಿ,
ಸೃಷ್ಟ್ಯಾದಿ ಸಂಭೂತೆ, ಲೋಕಮಾತೆ!
ಓ ರುದ್ರರಮಣೀಯೆ, ಶಕ್ತಿಸ್ವರೂಪಿಣಿಯೆ,
ನಿತ್ಯನೂತನೆ, ವರದೆ, ನಾಶರಹಿತೆ! ೧೩

ನೀಲಮೇಘವೆ ಕುರುಳು, ತಾರೆಗಳೆ ಮುಡಿಹೂವು,
ಸೂರ್ಯಚಂದ್ರರೆ ಕಣ್ಣು, ನೆಲವೆ ಒಡಲು;
ಸಾಲು ಬೆಟ್ಟಗಳೆಲ್ಲ ಕಾಲುಕೈಗಳು ನಿನ್ನ,
ಹೊದಿಕೆ ಹಾಸುಗೆ ನಿನಗೆ ಬಾನುಕಡಲು; ೧೪

ನಿನ್ನ ಸುಯ್ಯೆಲರೆ ಸುತ್ತಲು ಸುಳಿವ ತಂಬೆಲರು,
ನಿನ್ನ ಮೈಗಂಪೆ ಸುಮಗಳ ಸುಗಂಧ;
ನಿನ್ನೊಲವಿನೊರತೆ ಬೆಳದಿಂಗಳಿನ ಸವಿಸೋನೆ,
ಪಕ್ಷಿಕೂಜನ ನಿನ್ನ ಮಧುರಗಾನ. ೧೫

ನಿನ್ನ ನೋಡಿದರೊಡನೆ ನಿನ್ನ ಕೊಂಡಾಡಿದರು
ನಿನ್ನ ದರ್ಶನ ದಿವ್ಯದರ್ಶನವದೆಂದು
ಮುನ್ನ ಋಷಿ ಯೋಗಿ ಕವಿಗಳು ತಮ್ಮ ಉಪನಿಷತ್
ವೇದ ಕಾವ್ಯಾದಿಗಳು ಹಾಡುತಂದು. ೧೬

ಕೃಷಿಕರಧಿದೇವಿ, ಬಡಿವರಿಗೆ ಜೀವಾಧಾರೆ,
ದುಃಖಾರ್ತರನು ಪೊರೆವ ಕರುಣಾಮಯೀ;
ವಿಷಮಬುದ್ಧಿಯ ಗಾಂಪರೆಂದೊಡೇನು, ನೀ
ನಿರುತ ಕವಿಗಳಿಗೆ ಚೈತನ್ಯದಾಯಿ. ೧೭

ರಾಮಾಯಣವ ಸುಡಿರೊ, ಭಾರತವ ಬಿಸುಡಿರೋ
ಎಂದೆನಲು ಅವು ಬರಿಯ ಹಾಳೆಕಟ್ಟೆ
ಅ ಮಹಾಕಾವ್ಯಗಳು ನಮ್ಮ ಜನಜೀವನದ
ಹಾಸು ಹೊಕ್ಕವ ತೆಗಳೆ ನೀನೆ ಕಟ್ಟೆ! ೧೮

ಕಾಗೆಗಳು ಗುಂಪಾಗಿ ಉಗ್ರಮಾತ್ಸರ್ಯದಿಂ
ಕೋಗಿಲೆಯ ತೆಗಳೆ ಕಾಕಾ ಎಂದೊಡೆ
ಕೋಗಿಲೆಗೆ ಕುಂದೇನು? ತಮ್ಮ ಕರ್ಕಶತನವ
ತಾವೆ ಸಾರುವುವೆಲ್ತೆ ನಾಲ್ಕೂ ಕಡೆ! ೧೯

ರಾಮ ರಾಮಾ ಎಂದು ವಾಲ್ಮೀಕಿ ಕೋಕಿಲವು
ಎನಿತೊ ಶತಮಾನಂಗಳಿಂದುಲಿಯುತಿಹುದು;
ಆ ಮಹಾಮಂತ್ರಪ್ರಭಾವದಿಂದೆಮ್ಮ ಜನ
ಭಕ್ತಿಪರವಶಮಾಗಿ ನಲಿಯುತಿಹುದು ೨೦

ವ್ಯಾಸ ವಚನಾಮೃತಾರ್ಣವವೀಸಲಾಪೆನೇ
ಎಂದನಾ ವಿನಯನಿಧಿ, ಆದಿಪಂಪ;
ಹಾಸಕೀಡಾಗುವೆಯ ಆ ವಾರ್ಧಿರತ್ನಗಳ
ಕಸಕೆ ಕಡೆಯಾಗೆಣಿಸಿ, ಅಯ್ಯೊ ಗಾಂಪ! ೨೧

ಭಾರತದ ಕಣ್ಣೆರಡು, ಭಾರತೀಯರ ಹೆಮ್ಮೆ,
ಅವರಿಗೆ ಸದಾ ಪ್ರಗತಿಮಾರ್ಗ ಸೂಚಿ;
ಸಾರಭೂತಂಗಳಿವು ಭಾರತದ ಸಂಸ್ಕೃತಿಯ,
ಸಂಸಾರಸಾಗರೋತ್ತರಣ ದಿಕ್‌ಸೂಚಿ. ೨೨

ಉತ್ತುಂಗ ಶಿಖರವನು ಹತ್ತಲಾರದ ಹೆಳವ
ತಪ್ಪಲೇ ತೀರ್ಥವೆಂದೆನ್ನುವಂತೆ;
ಮುತ್ತಿನಸರವ ಕೊಡಲು ಕಿತ್ತದನು ಎರಚಾಡಿ
ಮತ್ತೆಮರನೇರುವಾ ಮಂಗನಂತೆ; ೨೩

ಸತ್ತ ಸಾಹಿತ್ಯವೆನ್ನುವಿಯಲಾ ಇವುಗಳನು!
ಅವುಗಳೊಳಗಣ ಜೀವ ಕಾಣದಾದೆ:
ಎತ್ತ ಬಲ್ಲೆಯೊ, ಮರುಳೆ, ಅವುಗಳ ಮಹತ್ತ್ವವನು?
ಬಲ್ಲವರಿಗುಂಟಲ್ಲಿ ತತ್ತ್ವ ಬೋಧೆ! ೨೪

ಹಳೆಕಾವ್ಯಗಳು ಹಲವು ಅಡಿಯ ಕಲ್‌ಕಟ್ಟಡವು,
ಬೇಕಾದ ಮಂದಿರವ ಕಟ್ಟು ಮೇಲೆ;
ನಿಲುವುದೇ ಮಂದಿರವು ಏಸು ಸೊಗಸದೊಡಂ
ಅಡಿಗಟ್ಟಡವೆ ಬೇಡವೆಂದು ಕೀಳೆ? ೨೫

ಹೊಸಮನೆಯ ಕಟ್ಟುವೊಡೆ ಕಟ್ಟಿಕೊಳು; ಅದಕಾಗಿ
ಪಾಳುಮನೆಗಳನೆಲ್ಲ ಕುಟ್ಟಿಕೆಡವು;
ಹೊಸದೆಂಬ ಮೋಹದಲಿ ಕಲೆಯ ಹಳೆಬೀಡುಗಳು.
ನೋಡೆಯದಿರು; ಮರೆಯದಿರು: ಅವು ನಾಡ ತೊಡವು ೨೬

ಹಳೆಯ ಕಾಲದ ಶಿಖರ ಗೋಪುರಂಗಳು ನಿನಗೆ
ಬೇಡದಿರೆ ನೀನವನು ಕಟ್ಟಬೇಡ;
ಇಳೆಯ ಮೆಚ್ಚಿಕೆ ಪಡೆದು ಉಳಿದು ಬಂದವುಗಳನು
ಒಡೆಯಿರೆನಲುಂಟೆ ನಿನಗಿಂತ ಮೂಢ? ೨೭

ನಿನ್ನ ಹಡೆದವರ, ಕೇಳ್, ನೀನಲಕ್ಷಿಸಿ ಕಂಡ
ತೆರನು ಹಿಮ್ಮರಳುವುದು ನಿನ್ನ ಬಗೆಗೆ;
ನೀನವರನಿಂದು ನಗೆಯಾಡೆ, ನೆನಪಿರಲಿ, ಗುರಿ
ನೀನು ನಿನ್ನಯ ಮಕ್ಕಳಣಕ ನಗೆಗೆ. ೨೮

ಕಾವ್ಯದುದ್ಯಾನದಲಿ ಏನುಂಟು ಏನಿಲ್ಲ?
ಒಳವೊಕ್ಕು ನೀನೊಮ್ಮೆ ಬಳಸಿ ಬಾರ.
ಯಾವುದೋ ಮೂಲೆಯಲಿ ಕಣ್ಮುಚ್ಚಿ ಕುಳಿತಿರಲು
ಕಾಣುವುದೆ ಅದರ ವೈವಿಧ್ಯ ವಿಸ್ತಾರ? ೨೯

ಮಾವು ನೇರಿಳೆ ನಿಂಬೆ ಕಿತ್ತೀಳೆ ಚಕ್ಕೋತ
 ಕಾಳಿಂಬೆ ಚೆಂದೆಂಗು ಹಲಸು ಬೇಲ;
ಬೇವು ಬೂರಗ ಬಸಿರಿ ಸುರಗಿ ಸಂಪಗೆ ಸಾಲ
 ಆಲ ಫಣಿಯಾಲ ತಂಪಿನ ತಮಾಲ. ೩೦

ಆವಾವ ಸಸ್ಯದೊಳದಾವಾವ ಗುಣವುಂಟೊ
 ಅದನುಳಿದು ಬೇರೆ ಗುಣ ಬಯಸಬಹುದೆ?
ಮಾವು ಬೇವಪ್ಪುದೇ, ಬೇವು ಮಾವಪ್ಪುದೇ,
 ನೇರ ತೆಂಗಿನ ಮರಕೆ ರೆಂಬೆಯಿಹುದೆ? ೩೧

ಬಗೆಬಗೆಯ ಹೂಗಳನು ತೆಗೆದಾಯ್ದು ಕಟ್ಟಿದೊಡೆ
 ಚೆನ್ನು ಹೂವಿನ ಮಾಲೆ, ಹೂ ತುರಾಯಿ;
ಮಿಗೆ ನಲಿವಳಲ್ತೆ ಬಗೆಬಗೆಯ ಕಾವ್ಯಗಳಿಂದ
 ಕೋದ ಮಾಲೆಯನೊಪ್ಪಿಸಲು ನಮ್ಮ ತಾಯಿ! ೩೨

ಮೂಲಿಕೆಗಳೌಷಧಕ್ಕುಪಯೋಗವೆಂದವನೆ
 ಎಲ್ಲ ತೋಟಗಳಲ್ಲು ಬೆಳೆಯಬಹುದೆ?
ಬಾಳಿಗೇನುಪಯೋಗ ಹೂಗಳಿಂದೆನುತೆಲ್ಲ
 ಹೂಗಿಡಗಳನು ಕಿತ್ತು ಬಿಡುಡಬಹುದೆ? ೩೩

ಹೂ ನೋಟ ನಿನ್ನ ಕಣ್ಕಿಸುರಾದ ಮಾತ್ರದಿಂ
 ಹೂಗಳೀರವನೆ ನೀನು ಜರೆಯಬೇಡೊ;
ಹೂ ರಸವ ಹೀರೆ ಆರಡಿಯುಂಟು, ಹೂಗಂಪ
 ಬೀರೆ ಮಾರುತನುಂಟು–ಮರೆಯಬೇಡೊ! ೩೪

ಮುಡಿವ ಚೆನ್ನೆಗೆ ಬೇಕು ಮಲ್ಲೆ ಮಲ್ಲಿಗೆ ರೋಜ,
 ಮುಡಿಯದಾ ಕವಿಗೊಂದು ಚೆಲು ಸರೋಜ;
ಪೊಡವಿಯೊಳಗೇವರೆಗೆ ಬಗೆ ಬಗೆಯ ಜನರುಂಟೊ
 ಆ ವರೆಗೆ ಭಿನ್ನ ರುಚಿಯಿಹುದು ಸಾಜ. ೩೫

ಸಕ್ಕರೆಯೆ ಸವಿಯೆಂದು ಲೋಕವೆನೆ, ಬಲ್ಲವರು
ಜೇನ್ನೆಯ್ಯ ಸವಿಗೆಣೆಯೆ ಅದು?–ಎಂಬರು;
ತಕ್ಕುದೇ ತನ್ನ ರುಚಿ ಸರ್ವರಿಗೆ ಇರಲೆನಲು?
ತಮ್ಮ ರುಚಿಯಂತೆ ಜನ ತಾವುಂಬರು. ೩೬

ರೋಗಿಯಾದವಗೆ ಪಾಲೋಗರವೆ ಮೇಲೆಂದು
ಹೇಳುವರು, ದಿಟ: ಆಗ ಅದುವೆ ಪಥ್ಯ;
ಆಗವಶ್ಯವದಾದಯದೇಗಖಯಮವಶ್ಯವೇ?
ನೀರೋಗಿಗುಂಟೆ ಪಥ್ಯದ ಅಗತ್ಯ? ೩೭

ರೋಗಿಯಲ್ಲದೆ ಮತ್ತೆ ಎಲ್ಲರಿಗು ಪಥ್ಯವನು
ಎಲ್ಲ ಕಾಲಕೆ ವಿಧಿಸೆ ಕೇಳ್ವರಾರು?
ತೇಗ ತಿನ್ನುತ, ತಿಂದು ನಲಿದು ಕುಣಿದಾಡುವುದು
ಚಿಹ್ನೆಯಾರೋಗ್ಯಕ್ಕೆ, ಸುಖದ ಬೇರು. ೩೮

ಆರಾರ ರುಚಿಗೇನು ಬೇಕೊ ನೀನದರಂತೆ
ಬಿಡಿಸಿದೊಡೆಲ್ಲರಿಗೆ ಪರಮ ನಲಿವು;
ಸೇರಿದುದು ನಿನಗೆ ಮತ್ತೆಲ್ಲರಿಗೆ ಬೇಕೆಂದು
ಗಿಡಿದು ತಿನ್ನಿಸೆ ಬಹುದು ಹೊಟ್ಟೆನುಲಿವು! ೩೯

ಸಾಹಿತ್ಯ ಸೀಮೆ ಪ್ರೋಕ್ರಸ್ಟೀಸ್‌ನ ಹಾಸಿಗೆಯೆ!
ಬರಹಗಾರರು ನಿನ್ನವಶರೆ, ಬಲಿಯೆ?
ಆ ಹೀನದಶೆ ಬಂದು–ನೀನಾಗೆ ಸಾಮ್ರಾಟ
ಏಕರೂಪತೆ ವಿಧಿಸು–ಅದಕೆ ಬೆಲೆಯೆ! ೪೦

ಹೆತ್ತವರಿಗೆ ಹೆಗ್ಗಣವೆ ಮುದ್ದಂತೆ; ಬರೆದರಿಗೆ
ಬರುಗವಿತೆಯೇ ಬಹಳ ಸೊಗಸು ಕಾಣ!
ಹತ್ತು ಜನರೆತ್ತಿಕೊಳಲೆಂದು ಮಗು ಹೆರರು, ದಿಟ;
ಹತ್ತು ಜನಕಲ್ಲದಿರೆ, ಬರೆಯದನೆ ಜಾಣ. ೪೧

ಜನಕೆ ಬೇಕಾಗಿರೆ, ವಿಮರ್ಶಕರ ಕಡೆಗೇಕೆ
 ತಿರುತಿರುಗಿ ನೋಳ್ಪೆ ಹೊಗಳಿಕೆ ಮಾತ ಹಾರಿ?
ತನಗೆ ಬೇಕಿರೆ ಹೊಗಳ್ವ–ಬೇಡದಿರೆ ತೆಗಳುವ;
 (ಕೆಲರುಳಿಯೆ) ಇದೆ ವಿಮರ್ಶಕರ ದಾರಿ! ೪೨

ಅಕ್ಕರಿಗರಲ್ಲದರನಕ್ಕರಿಗರಾಗಿಸದೆ
 ಒಳ್ಳೆ ಕಾವ್ಯವನವರ ಮುಂದಿಟ್ಟೊಡೇನು?
ಮಿಕ್ಕು ಕಣ್‌ಕತ್ತಲೆಯೆ ಕವಿದಿರುವ ಕುರುಡಂಗೆ
 ರನ್ನಗನ್ನಡಿಯನ್ನು ಕೈಗಿತ್ತೊಡೇನು? ೪೩

ಅಕ್ಕರಿಗರಲ್ಲದಿರಗೋದು ಕಲಿಸದೆ ಮೊದಲು
 ಅವರಿಗಾಗಿಯೆ ಕಾವ್ಯ ಬರೆವ ಮಾತು
ಇಕ್ಕಿ ಹಿಂಗಡೆ ಕುದುರೆಯದರ ಮುಂಗಡೆ ಗಾಡಿ
 ಹೂಡಿ ಹೊಡೆಯುವ ವೈಪರೀತ್ಯವಾಯ್ತು! ೪೪

ನಾಡಿನರಿಯಮೆಯ ಕತ್ತಲೆಯ ಮೊದಲು ಕಳೆ,
 ಅವರಿಗೊದಗಿಸು ಮೊದಲು ಅನ್ನ ಬಟ್ಟೆ;
ಹಾಡು ನಾಡಕ ಕಥಾ ಕಾದಂಬರಿಯ ಬರೆದು
 ಅವರಿಗನ್ನವ ಕೊಡುವ ಮಾತು ಲೊಟ್ಟೆ! ೪೫

ಕೋಣೆಯೊಳು ಕುಳಿತು ಬಡವನ ಬಾಳ ಚಿತ್ರವನು
 ಚಿತ್ರಿಪೆಯಲಾ! ನಿನ್ನ ಕಾರ್ಯ ಚೋದ್ಯ!
ಕಾಣದೆಯೆ ಬೆಳಕನ್ನು ಹುಟ್ಟು ಕುರುಡನು ತಾನು
 ಅದರ ಪರಿ ಬಣ್ಣಿಸುವುದೆಂತು ಸಾಧ್ಯ? ೪೬

ಹೊರಗೆ ಬಾ ಸಾಹಿತಿಯೆ! ಬಡತನವನಪ್ಪುಕಯ್,
 ಬಡವರೊಡನಿರು ನೀನು ಬಡವನಾಗಿ!
ಇರದಂದು ಒಳಗಡಗಿ ಬಡವರಾ ಸಾಹಿತ್ಯ
 ಒಡನೆಯೇ ಚಿಮ್ಮುವುದು ತಾನೆ ತಾನಾಗಿ. ೪೭

ಬರಿ ಬೋಧನೆಯ ಬಿಟ್ಟು, ಧುಮುಕು ಕಾರ್ಯದ ಕಳಕೆ,
ಪೇನ ಹಿಡಿಯುವ ಕೈಲಿ ಹಿಡಿ ತುತೂರಿ;
ಬರಿದೆ ಆರ್ಭಟವೇಕೆ ಸಾಹಿತ್ಯ ರಾಜ್ಯದಲಿ
ಹಿಡಿದು ಇಲ್ಲದ ಸಲ್ಲದೊಳ ಪಿತೂರಿ! ೪೮

ಮಸಿಕುಡಿಕೆಯನು ಬಿಸುಡು, ಲೇಖನಿಯನೆಸೆಯತ್ತ,
ಪ್ರಖರ ಧೀ ಲೇಖನಿಯಿನೆದೆಯ ತೋಡು;
ಬಿಸಿರಕ್ತ ಕುದಿದು ಬರೆ ಅದನದ್ದಿ ನೀನು ಬರೆ:
ಮೂಡುವುದು ನಿನ್ನದೇ ಹೊಸತು ಹಾಡು! ೪೯

ಜೀವನವೆ ವಸ್ತು ಕಾವ್ಯಕೆ; ಅದನು ನೀನುಳಿದು
ಭಾವನಾಲೋಕದೊಳಗೇಕೆ ಸಂಚಿರಪೆ?
ಭಾವನೆಯದೆನಿತೊ ಮೇಲ್; ಪರರ ಕೃತಿಗಳಿನೇಕೆ
ಎತ್ತಿತಂದಿಕ್ಕುವೆಯೊ ಹಾಳು ತಿರಿಪೆ! ೫೦

ಕಾವ್ಯದೇವಿಯ ಮುಂದೆ ಕಯ್ಯ ಜೋಡಿಸಿ ನಿಂತು
ನಾ ಬಡವನೆಂದು ನೀ ಬೇಡಿಕೊಳ್ಳು;
ಓವಿಯಾ ದೇವಿ ದಯಗೈಯೆ ಸರಿ: ಇಲ್ಲದೊಡೆ,
ಕದ್ದ ಸಿರಿಗಿಂತ ಬಡತನವೆ ಮೇಲೊ! ೫೧

ದೊರೆವುದೇ ಆತ್ಮಸುಖ ತನ್ನ ಕೃತಿಯೆಂದೆನುತ
ಪರರ ಕೃತಿಯನೆ ಮಗುಚಿ ಹೇಳೆ ಕದ್ದು?
ಹೆರರ ಮಗುವನು ತನ್ನ ಮಗುವೆಂದು ತೋರಿದೊಡೆ
ಆತ್ಮಜನೆನಿಪುದೆ ಮಗು, ಅಹುದೆ ಮುದ್ದು? ೫೨

ಹೊಗಳಿಕೆಗೆ ಬಾಯ್‌ಬಿಡದರಾರುಂಟು ಜಗದಲ್ಲಿ?
ಹೊಗಳಿಕೆಯ ಬಲ್ಲರಿಗೆ ಕಾರ್ಯಸಿದ್ಧಿ!
ಹೊಗಳಿಕೆಯ ಹೂಮಾಲೆಯನ್ನಾರ್ಗೆ ಸೂಡುವೆಯೊ
ನಿನ್ನ ಕೈಯ್ಯೊಳಗಿಹುದು ಅವರ ಬುದ್ಧಿ! ೫೩

ಕವಿಯಲ್ಲದವನಿಗೆ ಹೊಗಳಿಕೆ ಕೊರಳ ಹೂಹಾರ;
ಕವಿಯಾದನಿಗೊ ಅದುವೆ ನಿತ್ಯದಾಹಾರ!
ಬುವಿಯೊಳೀ ಹೊಗಳಿಕೆಯ ಆಧಿಪತ್ಯವಪಾರ,
ಅದರಿಂದಲೇ ಬಾಳು ಸುಮನೋಹರ. ೫೪

ತನ್ನ ತಾ ಹೊಗಳುವುದು ಕನ್ನಡದ ವೈಶಿಷ್ಟ್ಯ:
ಮುನ್ನಿನಾ ಕಬ್ಬಗಳಿನದು ತಿಳಿವುದು;
ಚೆನ್ನಲ್ಲವಾಮಾರ್ಗವೆಂದದನೆ ಮುಗುಚಿದರು
ಕೆಲರಿಂದು: ಅದುವೆ ಇತರರ ಹಳಿವುದು. ೫೫

ಹೊಗಳುವವರೆಲ್ಲ ಕಡುಗೆಳೆಯರಾಗಿಲಂದು
ಹೊಗಳಿಕೆಯ ಮಾತ ನೀ ನಂಬಬೇಡೊ ;
ತೆಗಳುವವರೆಲ್ಲ ಹಗೆತನವ ಬಗೆದವರಾಗೆ
ತೆಗಳಿಕೆಗೆ ಕಾಸುಬೆಲೆ ಕಟ್ಟಬೇಡೊ. ೫೬

ಗೆಳೆಯನ ಕಟೂಕ್ತಿಯನು ತಲೆಯಮೇಲಿರಿಸಿಕೊಳು:
ನಿನ್ನ ಏಳಿಗೆಗದುವೆ ಅವನ ಹರಕೆ;
ಒಳಗೆ ನೋಡುವನು ನಿಷ್ಠುರದ ನುಡಿಬೆಳಕಿನಲಿ,
ಕಾಣುವುದು ನಿನಗಂದು ನಿನ್ನ ಅರಕೆ. ೫೭

ಹಿತವೆಸಗುವಪ್ರಿಯವ ನುಡಿವನೇ ತಾ ಗೆಳೆಯ,
ಅಹಿತದಾಪ್ರಿಯ ನುಡಿವನೇ ತಾ ಹಗೆ;
ಚ್ಯುತಿ ಬರುವುದಪ್ರಿಯವ ನುಡಿಯೆ ಗೆಳೆತನಕೆಂದು
ಪ್ರಿಯವನೇ ನುಡಿವರ್! ಇದು ಮೈತ್ರಿಯ ಬಗೆ! ೫೮

ಹೆಸರ ಗಳಿಸುವವರೆಗೆ ತಾನ್ ಹಿರಿಯರನುಯಾಯಿ;
ಅವರ ಬಾಲದ ಬಾಲ, ನಾಯ ನಾಯಿ;
ಒಸೆದವರ ಕರೆವುದೇನವರಿಗೌತಣವೇನು!
ಅವರ ಹೊಗಳಲು ಸದಾ ತೆರೆದ ಬಾಯಿ! ೫೯

ಹೊಗಳಿಕೆಗೆ ಮನಸೋತ ಹಿರಿಯರಾಡಿನ ನಲ್ಮೆ
 ನುಡಿಗಳನು ನಭಕೆತ್ತಿ ಇಳೆಗೆ ತೋರಿ
ಜಗದೊಳೆಲ್ಲರ ಗಮನ ಸೆಳೆದು, ತಾನೂ ಹಿರಿಯ–
 ನೆನಿಸೆ, ಕುಖ್ಯಾತಿಗದೆ ಸುಲಭದಾರಿ. ೬೦

ಆದರಿಸುತಿಹ ಹಿರಿಯರೇ ತನ್ನ ಶತ್ರುಗಳು!
 ಅವರ ಹಿಂದೂಡುವುದೆ ಮುಖ್ಯ ಕಾರ್ಯ:
ಭೇದಗೈವುದು ಮೊದಲು–ಅದು ಸಿದ್ಧಿಸದೆ ಹೋಗೆ
 ಬಹಿರಂಗ ತೆಗಳಿಕೆಯದಿನ್ನು ಅನಿವಾರ್ಯ; ೬೧

ಹತ್ತಿದೇಣಿಯ ತಳ್ಳಿ ತುತ್ತತುದಿಯಲಿ ನಿಂದು
 ಮತ್ತನಾಗುತ ನಲಿದು ಕೇಕೆಹಾಕೆ
ತಿತ್ತಿರುಗುತಿರಲು ತಲೆ ಮತ್ತೆ ಇಳಿಯಲು ದಾರಿ
 ಸುತ್ತಲೆಲ್ಲಿಯುಮಿರದು–ತಿಳಿಯೊ, ಜೋಕೆ! ೬೨

ಆಡುವುದು ತಾನೊಂದು ಮಾಡುವುದು ಮತ್ತೊಂದು
ಮಾಳ್ಕೆ ಹೊಂದದ ಮಾತು ಬರಿಯ ತೂತು;
ಮಾಡಿ ತೋರಿಸಿ ಬಳಿಕ ಆಡಿದೊಂದೇ ಮಾತು
 ಮಂತ್ರವಪ್ಪುದು: ಕೇಳ್ವರೆಲ್ಲರೋತು. ೬೩

ಆಡದರೆ ಫಲವೇನು? ಮಾಡಿ ತೋರಿಸಬೇಕು:
 ಪಲ್ಲನುಡಿಗಿಂತ ಪಾಪಾಚರಣೆ ಮೇಲು;
ಹೇಡಿತನವಹುದು ತನ್ನಾಡಿತವ ನಡೆಯದಿರೆ:
 ಸೊಲ್ಲು ಸಲ್ಲದು: ನಡತೆಯದರ ಕೀಲು. ೬೪

ಪೂರ್ವ ಕವಿಗಳ ಮಾತು ನಾಡ ನಂದಾದೀಪ,
 ನಾಡದೇವಿಯ ಮುಂದೆ ಉರಿಯುತಿರಲು;
ತೋರ್ವವೆಮ್ಮಯ ಭಕುತಿಯೆಂಬಿರೋ? ಮುಂದುಗಡೆ
 ಸಾಲ ಸಾವಿರ ದೀಪ ಮೆರೆಯುತಿರಲಿ. ೬೫

ನಡೆದ ನಡತೆಯ ನಿಷ್ಠೆ ನುಡಿದ ಕಾವ್ಯಕೆ ಬೆಳಕು.
ಕವಿಯ ನಡೆವಳಿಯವನ ನುಡಿವಳಿಗೆ ನಿಕಷ;
ನಡತೆ ಹೊಂದದ ಕವಿಯ ಬರೆದ ಸುಗ್ಗಿಯ ಬೆಳಸು
ಕಾವ್ಯರಾತಿಯ ತೋರಿಕೆಯ ಕಲ್ಮಷ. ೬೬

ಸಾಹಿತ್ಯ ಸೂರ್ಯರಥಕುಂಟೊ ಸಪ್ತಾಶ್ವಗಳು!
ಸಪ್ತವರ್ಣಾತ್ಮಕವು ಸೂರ್ಯತೇಜ.
ಓಹೊ! ಎಂದೊಂದಶ್ವವನ್ನೆ ನೀ ಚಪ್ಪರಿಸೆ
ನಡೆವುದೇ ರಥವು? ನಿಲ್ಲುವುದೆ ಸಾಜ. ೬೭

ಎಲ್ಲ ವಾಘೆಗಳನ್ನು ಎರಡು ಕೈಲು ಹಿಡಿದು
ಸಾಹಿತ್ಯ ರಥವನ್ನು ಮುಂದೆ ನಡಸು;
ಎಲ್ಲ ಲೋಕಕ್ಕಂದು ಬೆಳಕು ತಾನೇ ಹರಿದು
ಬೆಳಗುವಂತಿಳೆ ಬಾಳು ತಮವ ಬಿಡುಸು. ೬೮

ಸಮತೆಯೆಂಬುದು ಜಗದಿ ಕವಿ ಕಾಂಬ ನಲ್‌ಗನಸು,
ಸಾಮ್ಯವಾದಿಯ ಸ್ವಪ್ನ, ಹುಚ್ಚು ಕೂಗು;
ಮಮಕಾರ ಭೂತ ಮಾನವನ ಹೃದ್ರಂಗದಲಿ
ಕುಣಿವನಕ ಆ ಸಮತೆಯಿಲ್ಲ, ಹೋಗು. ೬೯

ಸಮತೆ ವಿಷಮತೆಯೆರಡುಮೀ ಸೃಷ್ಟಿಯ ವಿಕಾರ,
ಸೃಷ್ಟಿಯಲಿ ವೈವಿಧ್ಯ ಸಾಮರಸ್ಯ;
ಸಮನಿಸಲ್ಕಾ ಮಧುರ ಬಾಳ್ವೆ ಭೂಲೋಕದಲಿ
ಸಮತೆ–ವಿಷಮತೆ ಸಗ್ಗನರಕವನವಶ್ಯ. ೭೦

ರಂಗುರಂಗಿನ ಗಾಜುಗಳ ಖಚಿಸಿ ರಚಿಸಿರ್ಪ
ಗೋಳಗುಮ್ಮಟವಯ್ಯ ಇಳೆಯ ಬಾಳು:
ಭಂಗತರಲೇತಕ್ಕೆ ವೈವಿಧ್ಯಪ್ರಕಾಶಕ್ಕೆ?
ಒಂದೆ ತೆರನಾಗಿಸಲು ಎಲ್ಲ ಬೋಳು! ೭೧

ಆದೊಡಿಳೆಯೊಳು ತಾನೆ ತಾನಾಗಿ ಮೆರೆಯುತಿಹ
 ಹುಚ್ಚು ವೈಷಮ್ಯ ಜನತೆಯ ಸುಖದ ವೈರಿ;
ಖೇದಕರವಪ್ಪ ಬಡವರ ದುಃಸ್ಥಿತಿಯೆ ಕಡೆಗೆ
 ವೈಷಮ್ಯ ಸಾಧಕರಿಗಹುದು ಗೋರಿ! ೭೨

ಆ ವಿಷಾದಾಂತ ನಾಟಕವೇಕೆ ನಮ್ಮಲ್ಲಿ?
 ಹಲರ ಸೌಖ್ಯಕೆ ಕೆಲರ ಕಟುಕಕೊಲೆಯೆ?
"ಮಾವಿದ್ವಿಷಾವಹೈ" ಎಂಬುಕ್ತಿಯನು ಮರೆತು
 ರಕ್ತಪಾತದಿನಾದ ಸಮತೆಗೇಂ ಬೆಲೆಯೆ? ೭೩

ಧರ್ಮಪೀಠದ ಮೇಲೆ ಸತ್ಯಮೂರ್ತಿಯ ನಿಲಿಸಿ
 ಸ್ವಾರ್ಥತ್ಯಾಗದ ಪುಷ್ಪವರ್ಷಿಸಲ್ಕೆ
ದೌರ್ಮನಸ್ಯಗಳಡಗಿ ಸರ್ವರೂ ಸ್ನೇಹದಲಿ
 ಸಮಸೌಖ್ಯದಲಿ ಬಾಳಲಪ್ಪುದಲ್ತೆ? ೭೪

ಹಾಡು ಕಟ್ಟುವನವನು ನಾಡುಕಟ್ಟುವನಲಾ?
 ಹಾಡಿನೊಳಗಡಗಿಹುದು ಮಂತ್ರಶಕ್ತಿ!
ನಾಡನಾಳಿನ ಬದುಕು ಹಾಡಿನಲಿ ಮೂಡಿಬರೆ
 ಹಾಡಿನಿಂದಾಗಲೇ ನಾಡ ಮುಕ್ತಿ? ೭೫

ದೇವನನು ಪೂಜಿಸಲು ಹಾಡು ಹೂವಿನ ಹಾರ,
 ನಾಡನೆಚ್ಚರಿಸಲ್ಕೆ ಕಹಳೆ ಕೂಗು;
ಭಾವುಕರ ರಂಜಿಸಲು ಭಾರತಿಯ ಕೈವೀಣೆ,
 ಜನ ಮನವ ಮಸೆಯೆ ಮೇಲಾದ ಸಾಣೆ. ೭೬

ಆ ಪುರಂದರ ಕನಕ ಸರ್ವಜ್ಞರೀ ಮೊದಲು
 ಹಾಡಿನೊಳಗಿಡರೆ ಕನ್ನಡದ ತಿರುಳ?
ಆ ಪರಿಯಲಿನ್ನೊಮ್ಮೆ ಮತ್ತೊಮ್ಮೆ ಮಗುದೊಮ್ಮೆ
 ಹಾಡಿ ಮಿಡಿಯುವವೆ ಕನ್ನಡದ ಕರುಳ? ೭೭

ಬಂಕಿಮರ ಹಾಡೊಂದು ಭಾರತೀಯರಿಗಾಯ್ತು
ಬಿಡುಗಡೆಯ ಬವರಕ್ಕೆ ತೂರ್ಯಸ್ವನ;
ಶಂಕೆಯೇತಕ್ಕಯ್ಯ? ಹಾಡಯ್ಯ ಹಾಡು ಕವಿ:
ಇಂದಲ್ಲ ನಾಳೆ ಸೆರೆ ನಾಡಿನ ಮನ. ೭೮

ಮೊದಲು ಮೊಗ್ಗಾ ಮೇಲೆ ಮಿಡಿ ಬಳಿಕ ಕಸುಗಾಯಿ
ತರುವಾಯ ತಿನಲಪ್ಪ ತನಿದು ಹಣ್ಣು;
ತೊದಲು ನುಡಿ ಮುದ್ದು ಮಾತಾಮೇಲೆ ಯೌವನದ
ಜಂಬ, ಕಡೆಯಲಿ ತೆರೆವುದರಿವ ಕಣ್ಣು. ೭೯

ಕಿರಿಯರಾಗದೆ ಮೊದಲು ಹಿರಿಯರಾದವರಿಲ್ಲ;
ಹಿರಿಯನಾಗಲು ಕಿರಿಯ, ಕಾಲ ಬೇಕು;
ಕರುವದೆತ್ತಾಗದೇ, ಮಿಡಿಯೆ ಹಣ್ಣಾಗದೇ
ಎಂಬ ಕವಿವಾಕ್ಯವನು ನೆನೆಯಬೇಕು. ೮೦

ಬರಿ ವಯೋಧರ್ಮದಿಂ ಹಿರಿಯತನ ಸಲುವುದೆನೆ–
ಅಹುದು, ಅವ ಹಿರಿಯ ತಾ ನನ್ನ ಮನೆಗೆ;
ನರೆಗೂದಲೊಂದೆ ಹಿರಿತನಕೆ ಲಕ್ಷಣವೆನಲು
ಎಲ್ಲರೂ ಹಿರಿಯರಹರೊಮ್ಮೆ ಕೊನೆಗೆ. ೮೧

ಕಡಲ ಹಾರುವ ಮುನ್ನ ಕುಳಿತಿದ್ದನಾ ಹನುಮ
ಮೌನದಲಿ ತನ್ನಳವ ತಾ ತೂಗುತ,
ಎಡೆಯಾಡುತೆಗರಾಡುತಿರಲುಳಿದ ವಾನರರು
ಹಾರಾಟ ತೋರಿಸಲು ಬಲು ಬೀಗುತ. ೮೨

ಕಡೆಗಂಜನಾಸುತನೆ ಕಡಲ ತಾ ಹಾರನೆ?
ಜಾಂಬವಾದಿಗಳವನ ನೆರೆ ಹರಸರೆ?
ಚಡಪಡಿಸಲೇತಕ್ಕೆ? ಅರ್ಪುಳ್ಳ ಕಿರಿಯನನು
ಹಿರಿಯರೇ ತಾವೆ ಮುಂಬಿಡೆ ಕರಸರೆ? ೮೩

ಹಿರಿಯನೇಂ ಕಿರಿಯನೇಂ? ಹಿರಗೈಮೆಗೈದವನೆ
 ಹಿರಯನ್: ಅವನೆಲ್ಲರ್ಗೆ ಪರಮಪೂಜ್ಯ;
ಬರಿಮಾತುಗಾರನವ ಹಿರಿಯ ತಾನೆಂದೊರಲೆ
 "ಹರಿ"ಯವನು! ಅವನಿದ್ದುದವನ ರಾಜ್ಯ! ೮೪

ಹಣ್ಣೆಲೆಯ ನೋಡಿ ನಗುವಾ ತಳಿರು ತಾ ಮುಂದೆ
 ಹಣ್ಣಾಗೆನೆಂದು ತಾ ತಿಳಿವುದೇನೊ!
ಕಣ್ಣು ಕಾಣದ ಚೆಣ್ಣ ಹಣ್ಣು ಮುದುಕನ ಕಂಡು
 ತನ್ನ ಮುಂದನು ಮರೆತು ಹಳಿವನೇನೊ! ೮೫

ಹಿರಿಯರನುಭವ ವಾಘೆ ಕಿರಿಯರುತ್ಸಾಹ ಹಯ
 ಎರಡುಮಿರೆ ಜೀವನದ ರಥಕೆ ಓಟ;
ಅರಿಯದವರೆರಡರೊಳಗೊಂದ ಬೀಳ್‌ಗಳೆಯುವರು,
 ಒಂದನುಳಿದಿನ್ನೊಂದದಿಳೆಗೆ ಕಾಟ! ೮೬

ಹಿರಿತನಕೆ ಗಾಂಭೀರ್ಯವೌದಾರ್ಯ ಭೂಷಣವು,
 ಕಿರಿತನಕೆ ವಿನಯ ಸೌಜನ್ಯವೊಪ್ಪು;
ಸರಿಸಮಾನಸ್ಕಂಥ ತಾ ಹಿರಿಯರೊಡನೆನುವ
 ಕಿರಿಯ ಸಾಹಸಿಗ, ಬಲು ದೊಡ್ಡ ಬೆಪ್ಪು! ೮೭

ಅದರಿನೀ ಲೋಕದಲಿ ಹಿರಿಕಿಯರೆನ್ನುವುದು
 ಬರಿಯ ಉಪಚಾರೋಕ್ತಿ, ಭೇದ ಸಲ್ಲ;
ಇದನರಿತ ಜಾಣತನ ಕೃತಿಗೈದು ತೋರುವನು,
 ಬರಿಯ ಹೆಸರಿನ ಹಿರಿಯತನವನೊಲ್ಲ. ೮೮

ಗುಣಗಣಕೆ ಗಣಿಯಾಗೆ ಬೇಡ ಹೆಣ್‌ಗಂಡೆಂಬ
 ಹಿರಿಕಿರಯರೆಂಬ ಭೇದಗಳ ಗೊಡವೆ;
ಗುಣವೆ ಗೌರವ ಪಾತ್ರ–ಜಾತಿ ವಯಸುಗಳಲ್ಲ;
 ಗುಣವೆ ಮಾನವನ ಬೆಲೆಬಾಲುವೊಡವೆ. ೮೯

ಮುಂದಪ್ಪುದೇನೊ ನೀನದನು ತಿಳಿಯಲ್ಕೇಕೆ
ಒಂದೆ ಸಮನಾಗಿ ಹಾತೊರೆವೆ, ಮೂಢ?
ಮುಂದುಗಾಣುವ ಕಾಣ್ಕೆಯಿಲ್ಲಮಾರಿಗು ಜಗದಿ:
ಮುಂದಪ್ಪುದದು ವಿಧಿಯ ಬಯ್ಕೆ, ಗೂಢ. ೯೦

ಮುಂದಪ್ಪ ಘಟನಾವಳಿಯ ಚಿತ್ರಗಳ ಮೇಲೆ
ವಿಧಿಯಿಳಿಯಬಿಟ್ಟಿಹ ಭವಿಷ್ಯದ ತೆರೆ:
ನಿಂದು ನಿರುಕಿಸಲೆಮಗೆ ಬಯಕೆ ಮೂಡದ ತೆರದಿ
ಹೊರಿಸಿರುವನಲ್ತೆಯಂದಂದಿನ ಹೊರೆ? ೯೧

ಆ ಭವಿಷ್ಯದ ತೆರೆಯ ಹಿಂದೆ ಅಡಗಿಹುದೇನೊ?
ಹೆಣ್ಣೊ ಹೆಬ್ಬುಲಿಯೊ? ನಿನಗೇಕೆ ಚಿಂತೆ?
ಲಾಭಮೆಳ್ಳನಿತಿಲ್ಲ ಅದರ ಮುಂದರಿವಿಂದ:
ನೋವೋ ನಲಿವೋ ಮುಂದೆ ಕಾಂಬೆಯಂತೆ. ೯೨

ಅರಿತ ಮಾತ್ರದಿನಿಂದು ಹೆಣ್ಣು ಹೆಬ್ಬುಲಿಯಹಳೆ?
ಹೆಣ್ಣಾಗಿ ಹೆಬ್ಬುಲಿಯದೊಲಿದು ಬಹುದೆ?
ಕರೆಕರೆಯದೇಕೆ? ಕಂಡುದನುಣ್ಣಲನುವಿಲ್ಲ:
ಚಿತ್ರಪಟದಾ ಹಣ್ಣು ತಿನ್ನಲಹುದೆ? ೯೩

ಬಾಳು ಕಬ್ಬಿನ ಕೋಲು: ಅದರ ರಸವನು ಸವಿಯೆ
"ಆ" ಎಂದೊಡಪ್ಪುದೇ? ಅಗಿಯಬೇಕು.
ಹಾಳು ಕಸ ಸಿಪ್ಪೆಯೆಂದೆನಲು ರಸ ದೊರೆಯುವುದೆ?
ಸಿಪ್ಪೆ ಕಸಗಳನೆಲ್ಲ ಉಗಿಯಬೇಕು. ೯೪

ಬಾಳು ಬೇಸರವೆಂದು ಗೋಳಿಡುವೆಯೇತಕ್ಕೆ?
ಬಾಳಿನೊಳಗಿಹುದು ಬೇಕಾದುದೆಲ್ಲ.
ಬೀಳುಗೈವಂಗೆ ಬರಿ ಮಳಲೊಟ್ಟಿಲೀ ಬಾಳು;
ಸವಿಯಬಲ್ಲಂಗದುವೆಯಚ್ಚು ಬೆಲ್ಲ. ೯೫

ಬಿರುಮಳೆಯ ಹೊಡೆತದಿಂದ ಬಗ್ಗಡದ ನೀರ್ಬಂದು
ಬಳಿಕ ನೀರ್ ತಿಳಿದು ಕೆರೆ ತುಂಬಿ ನಗದೆ?
ಉರುತರದ ವಿಧಿಘಾತವರ್ಷದಿಂ ಬಾಳ್ಕದಡು:
ಕಾಲಕ್ಕೆ ಜೀವನವು ತಿಳಿಯಾಗದೆ? ೯೬

ಕಷ್ಟಕೋಟಲೆ ಕಡಲ ಪೆರ್ದೆರೆಗಳೆಂತೊದವೆ
ನಿಂತು ನೀ ನೇರ ಎದೆಗೊಡಲು ಬೀಳ್ವೆ;
ಅಷ್ಟಿಷ್ಟು ಎದೆಗೊಟ್ಟು ಮುಂತಾಗಿ ತಲೆಗೊಟ್ಟು
ನಿಲಲು ಬೆಟ್ಟಿದುವಾದೊಡೇನವನು ತಾಳ್ವೆ ೯೭

ಹಿಂದಾದ ವಿಪದಾಪದಗಳ ಬಲು ಹೊಡೆತಗಳ
ಹೊರೆಯನಿಳುಹುವುದೊಂದು ಮದ್ದು-ಮರೆವು;
ಮುಂದಪ್ಪುದೇನೊ ಅದನರಿಯಲಾಗದ ಇರವು:
ಇವು ಮನುಜನಿಗೆ ದೈವವಿತ್ತ ವರವು. ೯೮

ನಿನ್ನೆ ನಾಳೆಗಳ ಚಿಂತೆಯನೆಲ್ಲ ನೀನುಳಿದು
ಚಣಚಣದೊಳೊಳ್ ನಡತೆ ವಿಡಿಯೆ ಲೇಸು;
ಹನಿಹನಿಯೆ ಕೂಡಿ ಹಳ್ಳವದಪ್ಪ ತೆರನಂತೆ
ಕ್ಷಣಕ್ಷಣದ ನಡತೆ ಬದುಕಿನ ಹೊಕ್ಕುಹಾಸು ೯೯

ನಡೆದ ನಡತೆಯ ನಿಷ್ಠೆ ಬಾಳಿಗೀವುದು ಕಸುವು:
ನಡತೆ ಜೀವನ ಯಂತ್ರಕೊಂದೆ ಕೀಲು;
ನಡೆವಳಿಯ ಬಿಟ್ಟು ತನ್ನಿಚ್ಛೆ ಬಂದೆಡೆ ಹೋಗೆ,
ಜೋಕೆ! ಯಂತ್ರವದಹುದು ಕೆಳಗು ಮೇಲು. ೧೦೦

ಚಣಚಣದ ಗೈದ ಗೈಮೆಯ ಫಲವೆ ತಾ ಕರ್ಮ,
ಕರ್ಮಸಂಚಿತ ಫಲವೆ ಬಾಳ ತಿರುಳು;
ಉಣಲೊಲ್ಲೆಯೆನಲಪ್ಪುದೇ ತಾನು ಆ ಫಲವ?
ಕರ್ಮದೈವಕೆ ಬಾಗಿಸಯ್ಯ ಕೊರಳು. ೧೦೧

ನಲ್ಗೈಮೆ ಗೈಯೆ ನಂದನವನವದೀ ಬಾಳು,
ಪೊಲ್ಗೈಮೆಯಿಂದ ಪಾಪಪಂಕ ಕೂಪ:
ಕಲ್ಮರನ ಹೂಗಳಿಂದೆನಿತು ಪೂಜಿಸಲೇನು?
ಕರ್ಮವೇ ಕಾವ ಕೊಲ್ಲುವ ದೈವ ರೂಪ. ೧೦೨

ಸತ್ಕರ್ಮದಲಿ ಕಾಣು ಸತ್ಯಸುಂದರ ಶಿವನ;
ನಿತ್ಯ ನೇಮವಿದೊಂದೆ–ಸತ್ಕರ್ಮನಿಷ್ಠೆ:
ಉತ್ಕರ್ಷಮಪ್ಪುದಯ್ ನಿನ್ನ ಬಾಳೀ ಪಥದೆ:
ನೇರಮಪ್ಪುದು ನಿನ್ನ ಇಹಪರದ ಬಟ್ಟೆ. ೧೦೩

ತಾಯ್ತಂದೆ ಸತಿಸುತರು ಭ್ರಾತ್ರರಾಪ್ತರು ಬಾಳ
ಬಳ್ಳಿಗಾಶ್ರಯ ವೃಕ್ಷಮೊದಲು ನಡುವೆಯಲಿ;
ಅಯ್ತರದಿರದು ಕಾಲ: ಕೊಂಬೆ ತಾಳುಗಳೆಲ್ಲ
ಬೀಳುವುದು: ಆತ್ಮನಾಸರೆ ಕಡೆಯಲಿ. ೧೦೪

ನಿನ್ನೆ ಸುಪ್ಪತ್ತಿಗೆ ಇಂದೋ ಬರಿಯ ನೆಲ;
ನಿನ್ನೆ ಕೆನೆಮೊಸರಿಂದು ನೀರ್ಮಜ್ಜಿಗೆ;
ಮೊನ್ನೆ ಕಾರಿನ ಪಯಣ, ನಾಳೆ ಕಾಲಿನ ಯಾತ್ರೆ–
ನಿತ್ಯ ಹಗಲಿರುಳುಗಳ ಸಮಹಂಚಿಕೆ. ೧೦೫

ಲೋಕ ವಾಸವೆ ಸಾಕು, ನಾಕ ನರಕದ ಚಿಂತೆ
ಯೇಕೆ? ಲೋಕವೆ ಪರಬ್ರಹ್ಮನಿಲಯ;
ನಾಲ್ಕು ಪುರುಷಾರ್ಥಗಳ ಸೋಪಾನವೇರುತ್ತ
ಜೋಕೆಯಿಂದಿರುವವಗೆ ನಿತ್ಯವಭಯ. ೧೦೬

ಆಟದಲ್ಲೆಂತೊ ಅಂತೆಯೆ ಬದುಕಿನುದ್ದಗಲ
ಸೋಲು ಗೆಲವುಗಳ ಸರಪಣಿಯ ಸರಸ;
ಸೋಲಿನಲಿ ಕುಗ್ಗದೆಯೆ ಗೆಲವಿನಲಿ ಹಿಗ್ಗದೆಯೆ
ಸಮಭಾವದಿರವು ಬದುಕಿನ ಸಮರಸ. ೧೦೭

ಬಾಳಿನುದ್ಯಾನದಲಿ ತೋಟಗಾರರು ನಾವು:
ಬೆಳೆದುಂಬ ಭಾಗ್ಯವದು ಒಡೆಯನಿಚ್ಛೆ;
ಕೇಳದೆಯೆ ಕೊಡುವನವ, ನಮ್ಮ ದುಡಿಮೆಯ ನಿಷ್ಠೆ
ಅವನಿಗೊಪ್ಪಿತವಾಗೆ; ಬೇಕಿಲ್ಲ ಭಿಕ್ಷೆ. ೧೦೮

ಉಕ್ಕೆ ಮಾಡುವನೊಬ್ಬ ಹರಗುವವ ಮತ್ತೊಬ್ಬ
ಬೀಜಬಿತ್ತುವನೊಬ್ಬ ಹೊಲಗದ್ದೆಗಳಲ್ಲಿ;
ಬೆಳೆ ಬಂದು, ಕಳೆಕೀಳೆ ಬಹಳು ಬುತ್ತಿಯ ಹಿಡಿದು
ಮನೆವೆಣ್ಣು–ಇದು ನಾಡ ಕೂಡೊಕ್ಕಲು. ೧೦೯

ಹಿರಿಬಾಳೊ ಕಿರಿಬಾಳೊ ಸೊಗಬಾಳೊ ತೆಗೆಬಾಳೊ
ತನ್ನ ಬಾಳನು ತಾನು ಬದುಕುವುದೆ ಗೆಲುಮೆ;
ಕೊರಗು ಕುಗ್ಗಿಸೆ ಮನವ ಬಾಳ ಜರೆಯಲದೇಕೆ?
ಅರಿತು ಬದುಕುವ ಆಳ್ಗೆ ಬಾಳೊಂದು ಕುಲುಮೆ. ೧೧೦

ಆಶೆ ತಿದಿಯೊತ್ತು; ಅದರಿಂ ನಿರಾಶೆಯ ಗಾಳಿ;
ಹೃದಯ ಕಿಡಿಗೊಳ್ಳೆ ಹೊರಡುವ ಕೊರಗು ಸುಯ್ಲು;
ತನು ಕಾದು ಕೆಂಪೇರೆ, ಬಾಳ ಸಂಕಷ್ಟಗಳು
ಅದ ತಿದ್ದೆ ಕಮ್ಮಾರ–ವಿಧಿ ಹೊಡೆವ ಹೊಯ್ಲು. ೧೧೧

ಬಾಳ ಕುಲುಮೆಗೆ ಬಿದ್ದು, ಅದರಿಂದ ಮತ್ತೆದ್ದು
ನಿಂತವನೆ ಹಿರಿಯಾಳು–ವಿಧಿಯವನ ತೊತ್ತು.
ಬಾಳ ಕಾವಿಗೆ ಬೆದರಿ ಬೆನ್ನಿತ್ತರೇನು? ವಿಧಿ
ಬಿಡದು; ಬೀಳ್ವನು ವಿಧಿಯ ಬಾಯ್ಗವನ ತುತ್ತು. ೧೧೨

ಮಲ್ಲಿಗೆಯ ಮಾಲೆಯಲಿ ಚೆಂಗುಲಾಬಿಯೆ ಸೊಗಸು;
ದಾಸಾಳ ಕಣಿಗಿಲೆಯು ಶೋಭಿಸುವುವೆ?
ನಲ್ಲನಲ್ಲೆಯರ ಗುಣರೂಪ ಸಮವಿರದಿರಲು
ಒಲವ ಹೂವಿಗೆ ಅಂದಗಂಧವಿಹವೆ? ೧೧೩

ಯಾವುದೂ ಸ್ಥಿರವಲ್ಲ ಎಲ್ಲವಸ್ಥಿರವಲ್ಲ
ಸ್ಥಿರದ ಅಸ್ಥಿರ ಚಲನೆ ಸೃಷ್ಟಿಕಾರ್ಯ;
ಸಾವಿನಲ್ಲಿ ಹುಟ್ಟಡಗಿ ಹುಟ್ಟು ಸಾವನು ಮೆಟ್ಟ
ಚಕ್ರ ತಿರುಗಿದೆ ಪರಬ್ರಹ್ಮಸೂರ್ಯ. ೧೧೪

ಹಲವು ಹೊಂಡಗಳಲ್ಲಿ ರವಿಬಿಂಬ ನೂರಾರು,
ಗಗನಮಣಿಯೊಬ್ಬನದೆ ನಿತ್ಯಸತ್ಯ
ನೆಳಲ ತೆರ ನೂರ್ಕೋಟೀ ಪ್ರಾಕೃತಿಕ ಮಾಟದಲಿ
ತೋರಿ ತೋರದ ಬೆಳಕದೊಂದೆ ಸತ್ಯ. ೧೧೫

ಹೆಣ್ಣು ಗಂಡಾಗುವುದು ಗಂಡು ಹೆಣ್ಣಾಗುವುದು
ಎರಡುಮೊಂದೆನುವುದನು ಸೂಚಿಸುವುದು;
ಕಣ್ಣು ಕಾಣುತಿಹ ಈ ಚೋದ್ಯ ಘಟನೆಯ ಹಿಂದೆ
ಕಣ್ಣಾಗಿ ಕರೆಯುತಿದೆ ಕೊನೆಯ ತತ್ತ್ವ. ೧೧೬

ಭೇದ ಬುದ್ಧಿಯ ತೊರೆದು ಎಲ್ಲರೆಲ್ಲವು ಒಂದು
ಎಂಬರಿವೆ ಸರ್ವಭೂತಾತ್ಮಜ್ಞಾನ;
ಸಾದರದಿ ಸರ್ವರನು ತನ್ನೊಲರಿತೆಸಗುವುದು
ನರರೂಪ ನಾರಾಯಣಾರಾಧನ. ೧೧೭

ಮಗನ ಮುಂದಣ ಹಿತಕ್ಕವನ ಶಿಕ್ಷಿಪ ತಂದೆ,
ಶಿಕ್ಷೆಯಲ್ಲಡಗಿಹುದು ಶುಭದ ಹರಕೆ;
ಹಗೆಯಲ್ಲ ದೈವ, ನರನೊಳ್ಳಿತಕೆ ಶಿಕ್ಷಿಪುದು:
ದೈವ ಶಿಕ್ಷೆಯು ಜೇನುಮದ್ದ ಬೆರಕೆ. ೧೧೮

"ನನ್ನ ನೆನೆಯುತ್ತಿರಿ" ಎಂದು ಕೇಳುವೆಯೇನು?
ನಿನ್ನ ಜನಕಾಗಿ ನೀ ಮಾಡಿರುವುದೇನು?
ಹೂವು ಅರಳಿತು, ಸತ್ಯ; ಕಂಪು ಕೊಟ್ಟಿತು, ಸತ್ಯ:
ಗೈವಗೈಮೆಯಗೈದು, ಕಾದು ಕಾಣು. ೧೧೯

ಎರಡು ಕೈಯಿರುವುದೇತಕ್ಕೆ ಹೇಳುವೆಯೇನು?
ಒಂದು ಕೈ ಕೊಡುವುದಕೆ ಒಂದು ಕೈ ಪಡೆವುದಕೆ
ಏನನ್ನು ಕೊಡುವೆ ಮತ್ತೇನನ್ನು ಪಡೆಯುವೆ?
ಬೇಡಿದವರಿಗೆ ಕೊಡುವೆ, ದುಡಿದು ಫಲ ಪಡೆವೆ? ೧೨೦

ಹೊಗಳು ತೆಗಳುಗಳೆಲ್ಲ ಬೊಗಳಿಕೆಯ ಭೇದಗಳು,
ನುಡಿಯ ಗಡಿಬಿಡಿ, ಎರಚು–ಮೊಸರು–ಕೆಸರು;
ತಗುವ ನುಡಿವಳಿಯವನು ತೆಪ್ಪನಿರುವನು ತಾನು.
ನಲ್ನುಡಿಗೆ ದುಡಿಯವುದು ಅವನ ಉಸಿರು. ೧೨೧

ಒಂದಿರುವೆ ತಗಣೆ ಸೊಳ್ಳೆಯ ಸಾಕು
ನೆಮ್ಮದಿಯ ಕೆಡಿಸೆ ವಿಶ್ರಾಂತಿ ವೇಳೆ;
ಸಂದೇಹವೇಕೆ ಸಾಕೊಂದೆ ಕಿಡಿ ನುಡಿ
ಬಾಳಬಣಬೆಯ ಸುಟ್ಟು ಬೂದಿ ಮಾಡೆ. ೧೨೨

ಕೊಚ್ಚೆಗೆಸುವುದು ಕಲ್ಲ, ಹುಚ್ಚರನು ಕೆಣಕುವುದು,
ತುಚ್ಛರನು ಬಯ್ಯುವುದು–ಇವು ಸಲ್ಲವೊ;
ಸಚ್ಚರಿತ್ರರ ಮೇಲೆ ಎಸೆದ ವಾಗ್ಬಾಣಗಳು
ನುಚ್ಚು ನೂರಹವು: ಅವರನು ಕೊಲ್ಲವೊ. ೧೨೩

ಮುಳ್ಳಿಡಿದ ಗಿಡದಲ್ಲಿ ಮೋಹಿಸುವ ಮಲರಂತೆ
ನಿಷ್ಠುರದ ನುಡಿಯಲಿರಬಹುದು ಪ್ರೀತಿ;
ಬೆಲ್ಲವಾತುಗಳಾಡಿ ನಂಬಿಕೆಯ ಹುಟ್ಟಿಸುವ
ನೇಹದೊಳಗಿರದೆ ವಿಷವಿಡುವ ನೀತಿ. ೧೨೪

ಬಲ್ಲವರ ಕಾರ್ಯವದು ಬೆಲ್ಲದಚ್ಚಿನ ಮಾಟ
ನೋಟಕ್ಕೆ ಊಟಕ್ಕೆ ಲೇಸು, ಮಧುರ;
ಒಳ್ಳೆಯವರೊಡನಾಟ ಹೂಹಣ್ಣುಗಳ ತೋಟ,
ಜೀವಕ್ಕೆ ನಿತ್ಯವೂ ನೆಮ್ಮದಿ, ವರ. ೧೨೫

ಎಲ್ಲರೂ ಎಲ್ಲವನು ಬಲ್ಲರೆಂದೆನಬೇಡ
ಸರ್ವಜ್ಞನೊಬ್ಬನವ ಹಿರಿಯ ಗುಟ್ಟು;
ಕಲ್ಲದವರೂ ಕೂಡ ಬಲ್ಲರೆನಿತೋ ತಿಳಿವ:
ಗರ್ವ ತಿಳಿವಿನ ಕೊಳಕೆ ಪಾಚಿಕಟ್ಟು ೧೨೬

ಹೆರಹೆಣ್ಣ ಕಂಡಾಗ ಕಣ್ಣೆತ್ತಿ ನೋಡದಿರು
ನೆಲಸಿರಲಿ ಕಾಲಕಡೆ ನಿನ್ನ ದೃಷ್ಟಿ;
ಚರಿಪ ಕಾಲುಗಳ ಬೆರಳುಂಗರವು ಕೊಡಲಂದು
ನಿನ್ನ ಚರಿತೆಗೆ ಚಿನ್ನವೆನಿಪ ಸಂಪುಷ್ಟಿ. ೧೨೭

ಮುತ್ತುರತ್ನಗಳು ಕಡಲಾಳದಲಿ ಮುಳುಗಿಹವು:
ಪಡೆಯಲವುಗಳ, ಮುಳುಗಿ ಹುಡುಕಬೇಕು;
ಸೆತ್ತೆ ಪಾಚಿಗಳು ತೇಲಾಡುತ್ತಲೈತಹವು:
ಹಿಡಿಯಲವುಗಳ, ಕೈಯನೀಡೆ ಸಾಕು. ೧೨೮

ಮನೆಯ ಮೇಲೆಲ್ಲೆಲ್ಲು ಕುಂಬಳವೆ: ಏನದರ
ಬಳ್ಳಿ ಮೈಯೊಲೆತ, ಹಸುರುಡೆಯ ಮೆರೆತ,
ಹೊನ್ನ ಹೂ ತೊಡವ ಹೊರೆ! –ಇನಿತೆಲ್ಲ ಸಂಭ್ರಮವು
ಒಂದೆರಡು ಕಾಯ ಹಡೆವಲ್ಲಿ ಮುಗಿತ! ೧೨೯

ಅಳಿಲು ಕಚ್ಚಿದ ಹಣ್ಣು ಯುವಕ ಮೆಚ್ಚಿದ ಹೆಣ್ಣು
ತನ್ನ ಬೆವರಿನ ಬೆಲೆಯ ಹೊನ್ನುಮಣ್ಣು
ಎಳೆಯ ಕರುವಿನ ಕಣ್ಣು ಈದ ಹಸುವಿನ ಗಿಣ್ಣು–
ಮಿಗಿಲುಂಟೆ ಇಳೆಯೊಳಿವಕಿನ್ನು ಮುನ್ನು? ೧೩೦

ಪಯಣದಲ್ಲೋದೇಕೆ? ಸುತ್ತಲೂ ತೆರೆದಿಹವು
ಪ್ರಕೃತಿ ಲೇಖಿಸಿದ ಹೊತ್ತಗೆಯ ಹಾಳೆ:
ಬಗೆಬಗೆಯ ಬಣ್ಣದಕ್ಕರಳಿಂದೊಕ್ಕಣಿಸಿ
ಬರೆದಿಹುದು ಬಾಳ್‌ಗಬ್ಬ ಸಾಲುಸಾಲೆ. ೧೩೧

ಕಾಡ ಕುಸುಮಗಳ ಕಂಪನು ಹೊತ್ತ ಗಂಧವಹ
ಊರಕೇರಿಯ ಹೊಕ್ಕು ಸುಳಿದಾಡಿದ;
ಹೆಣ್ಣು ಗಂಡುಗಳ ಸೆಂಟಿನ ಸೊಗಡಿನಲಿ ಮುಳುಗಿ
ತಲೆನೋವು ಹಿಡಿದು ಕಾಡಿಗೆ ಓಡಿದ! ೧೩೨

ನಿನ್ನ ಕೈಯಲಿ ಕರಡಿ ನಿನ್ನ ಮೈಯ್ಯಲ್ಲಿ ಹುಲಿ
ಮನದಲ್ಲಿ ಮರ– ಕುಣಿವ ಮುದಿ ಮರ್ಕಟ
ನಿನ್ನುದರದಲಿ ತೋಲ ಎದೆಯಲ್ಲಿ ರಣಹದ್ದು
ನೆಲಸಿರಲು ನೀ ಮನುಜನೆಂತೊ, ಆಕಟ! ೧೩೩

ಜೀವಿ ಮಾತ್ರಕೆ ಜಗದಿ ಜೀವಿಸುವ ಹಕ್ಕುಂಟು,
ಜೀವಿ ಯಾವುದೆಯಿರಲಿ, ಕೊಲ್ಲಸಲ್ಲ;
ಗೋವಾದರೇನು ಹಾವಾದರೇನವುಗಳಿಗೆ
ದಯೆಯ ದೃಷ್ಟಿಯಲಾವ ಭೇದವಿಲ್ಲ. ೧೩೪

ಹಾಲು ಕೊಡುವುದು ಗೋವು, ಕಚ್ಚ ಬರುವುದು ಹಾವು,
ಅವುಗಳಲಿ ನಿನ್ನೆಣಿಕೆ– ಲಾಭ ನಷ್ಟ;
ಮೂಲ ನಿನ್ನಾ ಧರ್ಮದೃಷ್ಟಿಗಂತಸ್ಸ್ವಾರ್ಥ,
ದಯೆಯಲ್ಲ: ದಯೆ ಸರ್ವಜೀವಿನಿಷ್ಠ. ೧೩೫

ಅವರಿವರ ಹೂದೋಟಗಳಿಂದ ಹೂಗಳ ಕದ್ದು
ದೇವಿಗರ್ಪಿಸೆ ಕಾಣಳೇ? ಅವಳು ಕುರುಡೆ?
ತನ್ನ ಅಂಗಳ ಬೆಳೆದ ತುಂಬೆಯಾದರು ಸರಿಯೆ,
ಒಪ್ಪಿಸೊಲಿವಳು: ತಾಯ ನಲ್ಮೆ ಬರಡೆ? ೧೩೬

ಸಂಪಗೆಯ ಕುಲವೇನು? ಕಂಪ ಕೊಡದೇ, ಕೆಳೆಯ?
ಮಲ್ಲಿಗೆಯ ಮನೆತನದ ಮಾತದೇಕೆ?
ತಾವರೆಯ ತವರಿಗೆ ತಲೆಯ ಹಾಕುವೆಯೇಕೆ?
ಜಾತಿಪುಷ್ಪದ ಜಾತಿಯರಸಲೇಕೆ? ೧೩೭

ತಾಯ ತೇರಿನ ಹಬ್ಬ: ತೇರೆಳವ ಸೇವೆಯಲಿ
ಹಿಂದಾದರೇನು ಮುಂದಾದರೇನು?
ತೇರೆಳೆಯಲನುವಿಲ್ಲ: ನಿಂತು ನೋಡುವ ಭಕ್ತ–
ಕೋಟಿಯಲ್ಲಿಹ ಪುಣ್ಯ ಕಡಮೆಯೇನು? ೧೩೮

ಬಿತ್ತರದ ಬಯಲಿದ್ದು ಭಂಡಾರ ತುಂಬಿರಲು
ಕಟ್ಟು ದೇವನಿಗೊಂದು ದಿವ್ಯಭವನ;
ಭಕ್ತಿಯೊಂದುಳಿದು ಮತ್ತೇನು ಬಳಿಯಿಲ್ಲದಿರೆ
ಕಟ್ಟು ಬಗೆಬಯಲಲ್ಲಿ ಬೃಂದಾವನ. ೧೩೯

ಬಿತ್ತಿದೊಡನೆಯ ನೆಲವ ಬೆದಕಿ ನೋಡಲು ಮೊಳಕೆ
ಮೇಲೆದ್ದು ಕಾಣುವುದೆ? ಕಾಯೊ, ಮೂಢ.
ಸುತ್ತ ಪಾತಿಯ ಕಟ್ಟಿ ನೀರೆರೆವ ಕೃಷಿಯೊಂದೆ.
ನಿನ್ನ ಕರ್ಮವೊ: ಫಲವ ಆಶೆ ಬೇಡ. ೧೪೧

ಅವರವರ ಕಾಲಕ್ಕೆ ಅವರವರ ನುಡಿಯಂತೆ
ಅವರವರ ಮಟ್ಟಕ್ಕೆ ನಿಲುಕುವೊಲು
ಕವಿಪರಮನವನೊಬ್ಬ ಬಹುರೂಪಿಯಾಗುವನು:
ಹಲವರಿಗೆ ಹಲಹಲವು ಬೆರಳು–ಕೊರಳು. ೧೪೧

ಹೃದಯ ಸಾಗರದಲ್ಲಿ ಚಿಂತನದ ಚಿಪ್ಪಿನಲಿ
ಭಾವವಾವಿರ್ಭವಿಸಿ ನವ ಮೌಕ್ತಿಕ
ಉದಯವಾಗಿರಲವನು ತುಂಬಿ ಮೇಲಕೆ ತಹನು
ನುಡಿಯ ಕಿರುನಾವೆಯಲಿ ಕವಿ ನಾವಿಕ. ೧೪೨

ರವಿ ಕಾಣದುದ ಕಾಣ್ಬ ಕವಿಯೆಂದು ಲೋಕೋಕ್ತಿ,
ಇಲ್ಲಂತರಿಕ್ಷ ಚಕ್ಷುವಿಗೆ ಒಳಗಣ್ಣು;
ಕವಿಯಂಥನಾದರೇನೊಳಗಣ್ಣ ನೋಟವಿರೆ?
ರಚಿಸನೆ ಮಹಾಕಾವ್ಯವನ್ನಂಧ ಮಿಲ್ಟನ್ನು? ೧೪೩

ಮನುಜ ಹೃಚ್ಚಿದ್ವಿಲಾಸಾತಿಶಯಗಳನೆಲ್ಲ
ಕಾಂಬ ಕವಿ ಉಳ್‌ತೆರೆದ ಬಗೆಗಣ್ಣಿನಿಂದ;
ಚಿನ್ನವಾಗಿಸುವ ಚಿನ್ಮಯವಾಗಿಸುವ ಹೊರಗೆ
ಹೊರಗಣ್ಣು ಕಂಡ ಜಡಮಣ್ಣಿನಿಂದ. ೧೪೪

ಸ್ವರ್ಗಲೋಕದ ಕಥೆಯೆ? ನರಕಲೋಕದ ವ್ಯಥೆಯೆ?
ಮನುಜ ಲೋಕದ ಕೋಟಿಕೋಟಿ ಸಂಗತಿಯೆ?
ಹಿಂದಿನದೆ? ಇಂದಿನದೆ? ಮುಂದಿನದೆ? ಸರ್ವವನು
ಕಾಂಬ ಕವಿದರ್ಶನಕೆ ಇತಿಯೆ ಮಿತಿಯೆ? ೧೪೫

ಎಲೆಯೆಲೆಗೆ ಹೂವುಂಟೆ? ಕೊನೆಕೊನೆಗೆ ಕಾಯುಂಟೆ?
ಹೂತುದೆಲ್ಲವು ಕಾತು ಹಣ್ಣಾಗಲುಂಟೆ?
ನುಡಿನುಡಿಗೆ ಅಡಿಗಡಿಗೆ ಅರ್ಥರಮ್ಯತೆಯುಂಟೆ?
ವಾಕ್ಯವಾಕ್ಯಕ್ಕೆ ರಸ ಹೊನಲಿಡುವುದೆ? ೧೪೬

ಪದ ಪಾರ್ವತಿಯ ಮೈಯ ಅಂಶ ಅರ್ಥದ ಗಣಪ:
ತಾಯ್ತೊಡೆಯ ಬಿಡದ ಮಾತೃಪ್ರೇಮಭರಿತ;
ಹದುಳವಿದ್ದಿದ್ದೆಡೆಯೆ ತಾಯ್ಗೆ ನಲಿವೀವ ತೆರ
ವಿವಿಧ ವೃತ್ತಿಯ ನಟಿಪ ಚಾರು ಚರಿತ. ೧೪೭

ಗಣಪ ವಾಮಾಂಕ ಚೆಲು ಭಾವಭಾಮೆಯ ಪೀಠ,
ಬುದ್ಧಿ ಸಂಜಾತೆ ಮಾನಸಮೋದಿನಿ;
ದಕ್ಷಿಣಾಂಕ ವಿಭೂಷೆ ಲಾವಣ್ಯರಸಲಕ್ಷ್ಮಿ,
ಸೌಂದರ್ಯ ಸಿದ್ಧಿಸಾಗರ ನಂದಿನಿ. ೧೪೮

ರಸವೆಂಬೆ ಧ್ವನಿಯೆಂಬೆ, ಕಾವ್ಯದಾತ್ಮವದೆಂಬೆ
ಒಡಲ ಬಿಟ್ಟೆಲ್ಲಿಯದು ಆತ್ಮವಾಸ?
ರಸದಾಳಿಕಬ್ಬಿನಲಿ ಕಸದ ಭಾಗವದೆನಿತು?
ರಸದ ನೆಲೆಗಿರಬೇಕೊ ವಚನ ದೇಶ. ೧೪೯

ಕಾವ್ಯಕನ್ನಿಕೆಯೊಡಲ ಲಾವಣ್ಯ, ರಸದೊರತೆ:
ಅಂಗಸೌಷ್ಠವವದಕೆ ಲಾಸ್ಯರಂಗ;
ಭಾವ್ಯವೆನಿಸುವುದೊಡನೆ ಲಾವಣ್ಯಕನುಗೂಡಿ
ಇಂತಿರಲು ಕನ್ನಿಕೆಗೆ ರಸಿಕ ಸಂಗ. ೧೫೦

ಅಕ್ಷರಕ್ಷರದಲ್ಲಿ ನಕ್ಷತ್ರದೊಲು ಮಿನುಗಿ
ಭಾವಾರ್ಥರೂಪಿ ತಾನಕ್ಷರಬ್ರಹ್ಮ;
ನುಡಿನುಡಿಯಲಡಿಯಿಡುತ ನರ್ತಿಪ ಸರಸ್ವತಿಯ
ನೂಪುರ ಧ್ವನಿಯದರ ಸರಸಧರ್ಮ. ೧೫೧

ಯಾವ ದೂರದ ವನವೊ ಯಾವ ದೂರದ ಕಡಲೊ
ಎಲ್ಲಿಂದಲೋ ಬಹುದು ಹಕ್ಕಿ ಮಿನುಗಿ;
ಬಳಿಯಿರು ಬಲೆಯ ನೀ ಬೀಸಿ ಹಿಡಿಯದಿರೆ
ಮರೆಯಾಗುವುದು ಬಾನ ಬಯಲಿನಲ್ಲಡಗಿ. ೧೫೨

ರಸವ ಸವಿಯುವವಗಂಗವಾಗುವುದದು? ಬುದ್ಧಿಯೇ
ಹೃದಯವೇ, ಅಲ್ಲದೊಡೆ ಮನವೆ ಮೈಯೆ?
ರಸದೀಪ್ತಿಯಲಿ ಬುದ್ಧಿ ಬೆಳಗಿ, ಹೃದಯವು ನಾಂದು,
ಮನಕರಗಿ ಮೈಯುಬ್ಬುವುದು–ಆತ್ಮನಲಿಯೆ. ೧೫೩

ಡಾಕ್ಟರ್ ಜೆಕಿಲ್ ಮತ್ತು ಹೈಡೆಂಬವನ ತೆರನ
ಇಬ್ಬಗೆಯ ಜೀವನದ ಬರಹಗಾರ
ನೋಟಕೆಣೆಯಿಂದ ಸೌಂದರ್ಯಭಾಗ್ಯವನೀವ
ಕೆಸರುಬಸಿರಿನ ದಿವ್ಯ ಕಮಲಾಕರ. ೧೫೪

ದಿವ್ಯ ಗಾನವನೆರೆವ ಕೊಳಲಿನೊಡಲದು ಬರಿಯೆ,
ಮುನ್ನಿನಂತುಮ್ಮುವುದೆ ಗಾನತಾನ?
ಕಾವ್ಯಕರ್ತೃವ ಜೀವನದ ನೇಮನಿಷ್ಠೆ ಕೆಡೆ
ಕಾವ್ಯದೈಸಿರಿಗಾಗದೇ ಕಿಂಚಿದೂನ? ೧೫೫

ಕಾವ್ಯದಲಿ ಬದುಕಿನಲಿ ದೋಷಗಳನೆಣಿಸದೆಯೆ
ಗುಣವ ಕಂಡೆಡೆ ಅದನು ಹಿಡಯಬೇಕು:
ಹಾದಿಯಲಿ ಕಂಡ ಹೊಲಸನು ತುಳಿಯದೆಯೆ ಕೆಲದ
ಹೂಗಿಡದ ಹೂಕೊಯ್ದು ಮುಡಿಯಬೇಕು. ೧೫೬

ಒಂದು ಕೋಗಿಲೆ ಹಾಡಿ ಕರೆದರಹುದೆ ವಸಂತ?
ಎರಡು ಹೂಬಿಟ್ಟ ಕೊನೆ ಗೊಂಚಲಹುದೆ?
ಮಂದೆಯಾಗುವುದೇನು ಕುರಿ ಮೂರರಿಂದ?
ಒಂದೆರಡು ಪದ್ಯ ಗೀಚಿದವ ಕವಿಯೆ? ೧೫೭

ಒಳಗೆ ಕಿಡಿ ಕನಲುತಿರೆ ಬೂದಿ ಮುಚ್ಚಿದೊಡೇನು
ಪ್ರಜ್ವಲಿಸುವುದು ಕೆಂಡ ಬೂದಿಯರುಬೆ
ಒಳಗಿನುಸಿರೆಲ್ಲವನು ಬಿಟ್ಟೂದಿದೊಡಮೇನು
ಇದ್ದಲಿದ್ದಲೆ: ಕೆಂಡ ಕಿಡಿಯಿಂದಲೆ. ೧೫೮

ಒಂದು ಹೃದಯದ ಕಣ್ಣು ಒಂದು ಬುದ್ಧಿಯ ಕಣ್ಣು,
ಹೃದಯ ಬುದ್ಧಿಗಳ ಸಮತೂಕ ಚೆನ್ನು;
ಒಂದು ಹೃದಯದ ಕನಸು ಒಂದು ಬುದ್ಧಿಯ ಬೆಳಸು,
ಎರಡು ಕೂಡಿಯೆ ಇಹದ ಬದುಕು ಹೊನ್ನು. ೧೫೯

ಎರಡು ಕಣ್ಣಾದರೂ ನೋಟವೊಂದೇವೊಂದು:
ಕಾಂಬ ಸತ್ಯದ ರೂಪವೆರಡು ರೀತಿ;
ಹೊರ ನಿಜದ ನೊಲುವೊಂದು ಒಳನಿಜದ ಚೆಲುವೊಂದು,
ಇದುವೆ ವಿಜ್ಞಾನ ಕಾವ್ಯಗಳ ನೀತಿ. ೧೬೦

ಜುಟ್ಟಿಗೇರಿಸೆ ಹೂವ ಹೊಟ್ಟೆ ತುಂಬುವುದೇನು?
ಹೊಟ್ಟೆಬಟ್ಟೆಗೆ ಬೇಕು ವಿಜ್ಞಾನಸಿದ್ಧಿ;
ಅಟ್ಟುಂಡು ತೊಟ್ಟಾಯ್ತು: ಒಳನೆಮ್ಮದಿಗೆ ಬೇಕು
ಆನಂದವೀನ ಕವಿತಾಸಮೃದ್ಧಿ. ೧೬೧

ಬೆಳಗು ಬೈಗುಗಳನ್ನು ಬಣ್ಣಿಸುವ ಕವಿಜನರೆ
ಹಗಲಿನುರಿಬಿಸಿಲನೂ ಬಣ್ಣಿಸುವರು;
ಬಣ್ಣನೆಯ ಬಿಸಿಲು ಬೇಯಿಸದು ಬಾಯಾರಿಸದು:
ಕವಿಯ ಸೃಷ್ಟಿಯ ಬಿಸಿಲೆ ಬೆಳುದಿಂಗಳು. ೧೬೨

ಬುದ್ಧಿವಂತರಿಗಿರಲು ಶುದ್ಧಕಾವ್ಯದ ಹೊಲಬು,
ಸಿದ್ಧರಿಗೆ ಸಾಧ್ಯ ಸುಬ್ರಹ್ಮಭಾವ;
ಮುಗ್ಧರರಿವಿಗೆ ಬೇಕು ಬುದ್ಧಿ ಹೇಳುವ ಕಾವ್ಯ,
ಶುದ್ಧ ರಸಿಕರಿಗಿರಲಿ ಕಾವ್ಯ ರಸ–ಭಾವ. ೧೬೩

ಪುಸ್ತಕವ ಬರೆದದನು ಅಚ್ಚು ಹಾಕಿಸಿ ಪರರ
ಹಸ್ತಕೊಪ್ಪಿಸಿ, ಹಲವ ಗೆಳೆಯರ್ಗೆ ಹಂಚಿ,
ಸುಸ್ತಿ ಬಡ್ಡಿಯ ಸಹಿತ ಸಾಲವನು ತೀರಿಸಿಯೆ
ಸುಸ್ತು ಬೀಳುವನವನು ಲೇಖಕ–ವಿರಿಂಚಿ! ೧೬೪

ಮುನ್ನುಡಿಯ ಕನ್ನಡಿಯ ಮುಂದೆ ಮುಖಮಾಡುತ್ತ
ತನ್ನ ಬೆನ್ನನೆ ತಾನು ಚಪ್ಪರಿಸೆ ಚೆನ್ನೆ?
ಇನ್ನೊಬ್ಬರೆಸೆದ ಬೈಗುಳ ಬಾಣ ತಾ ಲೇಸು–
ಆತ್ಮಶಂಸೆಯ ಮಾಲೆ ಕೊರಳ ನೇಣೆ! ೧೬೫

ಇದ್ದೆಡೆಯೆ ಸುಮವರಳಿ ಸೌರಭವ ಸೂಸಿದರು
ಭ್ರಮರ ಬರುವುದು ಬಳಿಗೆ ಕಂಪುವಿಡಿದು;
ಸದ್ದುಗದ್ದಲದ ಪ್ರಚಾರ ಕಾವ್ಯಕೆ ಬೇಕು,
ರಸಿಕ ಬಾರನು ಬಳಿಗೆ ತಾನೆ ತಿಳಿದು. ೧೬೬

ಕರೆದು ಹಸುವನು ಹಿಂಡಿ ತೋರಿ ಕರುವಿಗೆ ಮೊಲೆಯ
ಹೊಟ್ಟೆ ತುಂಬಿಸಿಕೊಳುವ ಗೋಪಾಲಕ;
ಕರೆದು ವರ ಸಾಹಿತಿಗಳನ್ನಿತ್ತು ಪುಡಿಗಾಸು
ಥೈಲಿಗಳನೆಣಿಸುವನು ಗ್ರಂಥಪ್ರಕಾಶಕ. ೧೬೭

ಬೀದಿಯಲೆ ತಮಟೆ ಡಬಡಬನೆ ಬಡಿಯುತ್ತಿರಲು
ಕೇಳುವುದೆ ಮರದ ತುದಿಹಕ್ಕಿಹಾಡು?
ನಿಂತಕೂಡಲೆ ತಮಟೆ ಸದ್ದು ಮೆಲುಗಾಳಿಯಲಿ
ಮರ್ಮರ ಶ್ರುತಿಗೊಟ್ಟು ಮರಹಾಡಗೂಡು. ೧೬೮

ನವ್ಯಭವ್ಯಗಳೆಂಬ ಭೇದವೇತಕ್ಕೊ ಬಂಧು?
ನೈಜ ಕಾವ್ಯವದೆಲ್ಲ ನಿತ್ಯ ನವ್ಯ:
ದಿವ್ಯಭಾವದ ಭವನ ಶಿರದ ರಸಗಂಗೆಯವ-
ತರಣವಾಗಲ್ಕಮರ, ಕಾವ್ಯಭವಿತವ್ಯ. ೧೬೯

ಮುಡಿಯೆ ಕಾವ್ಯವು ಕುಸುಮ ಹಿಡಿಯೆ ಕೈಯಲಿ ಖಡುಗ
ಹೊಡೆಯಲೆಚ್ಚರಗೊಳಿಪ ಭೇರೀ ನಿನಾದ;
ಕುಡಿಯೆ ಅಮೃತದ ಪಾನ ನಡೆಯೆ ದಾರಿಯ ದೀಪ
ಕಡೆಯೆ ಸುಜ್ಞಾನದಿಂ ತತ್ತ್ವಬೋಧ. ೧೭೦

ಕೆಡೆನುಡಿವೆಯೇತಕ್ಕೆ ಕಾವ್ಯಕರ್ಮವ, ಕೆಳೆಯ,
ಕೆಲಸವಿಲ್ಲದರ ಒಣಹವ್ಯಾಸವೆಂದು;
ಹುಡಿಮಣ್ಣು ಹೂಬಿಡುವ ಇಂದ್ರಜಾಲವಿದಯ್ಯ-
ನೆಲ-ಬೀಜಗಳ ಯೋಗ, ಸೃಜನೆ ಕಾವ್ಯ. ೧೭೧

ಕಾವುಕಾಂತೆಯ ಕಿವಿಯ ಸವಿಯ ಮಾತಿನ ಮಧು,
ಹೃದಯಕ್ಕೆ ಹಿತಕಾರಿ, ಮುದ್ದು ಮನಕೆ;
ಸೇವ್ಯಮಾದಾಕಾವ್ಯಮಧುವಿನೊಳು ಬೆರೆತಿಹುದು
ಹುದುಗಿದೌಷಧ ನಿನ್ನ ಆತ್ಮಗುಣಕೆ. ೧೭೨

ರಾಜೋಪಚಾರವಿದ್ದರು ಕೂಡ ಹೆರರ ಮನೆ
ಹೆರರ ಮನೆಯೇ, ತನ್ನದೆಂಬುದಿಲ್ಲ;
ಬೈದು ಬೈಯಿಸಿಕೊಳಲು ಇಲ್ಲ ಮಕ್ಕಳು ಮಡದಿ,
ಇಲ್ಲ ಸುಖದುಃಖಗಳ ಹಗಲು ಇರುಳು. ೧೭೩

ನೋವು ನಲಿವುಗಳಲ್ಲಿ ಭಗಿಯಾಗುವ ಪುಣ್ಯ
ತನ್ನ ಮನೆಯುಳಿದನ್ಯ ಗೃಹದಿ ಕಾಣೆ:
ತನ್ನ ಕೈ ಹಿಡಿದಾಕೆ ಹಡೆದ ಮಕ್ಕಳೆ ಮನೆ:
ಅಲ್ಲ ಮಾಳಿಗೆ ತಳದ ನಾಲ್ಕು ಕೋಣೆ. ೧೭೪

ಹೊಲಸು ಹೇಸುವ ಗಂಡ ಹೆಂಡತಿಗೆ ಹೇಳಿದನು:
"ನೆರೆಮನೆಯ ನೋಡೆಂತು ಒಪ್ಪೋರಣ!
ನೆಲವೊ ಕನ್ನಡಿ! ಗೋಡೆ ಗೀಚಿಲ್ಲ! ಕಲಿ ಪಾಠ!"
ಅವಳೆಂದಳ್: "ಅವರ ಮನೆಗಿಲ್ಲ ನಮ್ಮಾಭರಣ!" ೧೭೫

ಮನೆಗೋಡೆಯಂಚಿನಲಿ ಇಲಿಯ ಬಿಲ, ಮೂಲೆಗಳು
ಜೇಡಬಲೆಗಳ ಬೀಡು, ಇರುವೆ ಗೂಡು;
ಎಣಿಕೆಗೆಟುಕದ ಕೀಟಕ್ರಿಮಿಗಳ ವಿನಾಶಕ್ಕೆ
ಮನೆಯ ಸುಡುವೆಯ ಮಾಡಿಯದನು ಸೂಡು. ೧೭೬

ನಿನ್ನ ಯೌವನದಲ್ಲಿ ಹೆಂಡತಿಯ ನೆನೆದಾಗ
ಮನಸೆಲ್ಲ ಅವಳದೇ ಮುಖದ ಮುದ್ರೆ;
ಇಂದು ಬಾಳಿನ ಸಂಜೆಯಲಿಯವಳ ಕಂಡಾಗ
ಮೂಡದೇ ಕಣ್ಣೆದುರು ತಾಯಿಯ ಚರಿತ್ರೆ. ೧೭೭

ಆಮೆ ಮೆಲ್ಲಿದುವಪ್ಪ ತನ್ನ ಕಾಲ್ಗಳ ಮೊಗವ
ಒಳಸೆಳೆದುಕೊಳೆ ಚಿಪ್ಪಿನೊಳಗಭೇದ್ಯ;
ಕಾಮುಮುಖಮಾದಿಂದ್ರಿಯಂಗಳನ್ನೊಳತಿರುಹೆ
ದೇಹದೊಳಗಣ ದೇಹಿ ತಾನವಧ್ಯ. ೧೭೮

ಐದು ಕುದುರೆಗಳ ರಥ, ಓಟ ನಾಗಾಲೋಟ,
ಒಂದ ತಡೆಹಿಡಿಯೆ ತಗ್ಗುವುದೆ ವೇಗ?
ಐದುವೆಡೆಗೈದಲೆಂದವನು ಹರಿಬಿಡದೆ ಆ
ಐದನೂ ಬಿಗಿವಿಡಿಯೆ ನಿನ್ನ ವಶವಾಗ. ೧೭೯

ತೊಡುವ ಕಾಲವದೊಂದು ಬಿಡುವ ಕಾಲವದೊಂದು
ತೊಡಿಕೆ ಬಿಡಿಕೆಗಳೆರಡು ಜೊತೆಗೂಡವು;
ಸುಡುಗಾಡ ನೆನೆಯುತ್ತ ಮೃಡನ ಕೃಪೆ ಬೇಡುತ್ತ
ತೊಡುವುದನು ತೊಟ್ಟು ಬಿಡುವುದ ಕಲಿ. ೧೮೦

ಬಿಡುವುದನು ಕಲಿ ನೀನು ತೊಡುವುದನ್ನಂತೆಯೇ:
ಬಿಡಿಕೆ ತೊಡಿಕೆಗಳೆರಡು ಶ್ವಾಸನಿಃಶ್ವಾಸ
ಒಡಲ ಹಿಡಿದಿಟ್ಟಿರಲು ಮನವ ತಡೆಗಟ್ಟಿರಲು
ಬೇಕು ಯೆರಡರೊಳು ಸಮನಾದ ತೋಷ. ೧೮೧

ಪರತತ್ತ್ವವೊಂದುಂಟು: ಪಂಚೇಂದ್ರಿಯಂಗಳ್ಗೆ
ಅರಿಯಲರಿದದರಿಂದ ಇಲ್ಲವೆನಬೇಡ;
ಇಂದ್ರಿಯಂಗಳಿಗೊದಗಿ ಬಂದುದೇ ಸತ್ಯವೆನೆ
ಇಂದಿದ್ದು ತೋರಿ ನಾಳೆಗೆ ಇಲ್ಲ, ನೋಡಾ. ೧೮೨

ನಮ್ಮ ವಾಸದ ಮನೆಗೆ ಉಂಟೆರಡು ಬಾಗಿಲು:
ಹೆಬ್ಬಾಗಿಲೊಂದು ಹಿತ್ತಲದೊಂದು;
ಆದರೊಂದೇ ನಿಯಮ: ಮುಂಬಾಗಿಲಲಿ ಬರವು;
ಹಿಂಬಾಗಿಲಿಹುದು ತೆರಳಿಕೆ ತೆರವು. ೧೮೩

ಬ್ರಹ್ಮ ಸೃಷ್ಟಿಯ ಕಾರ್ಯದಲಿ ಬಹಳ ಬೇಸತ್ತು
ವಿಶ್ರಮಿಸಿಕೊಳುತ, ಬಳಪದ ಪಿಡಿದು ಕರದೆ
ಬಾನ ಹಲಗೆಯ ಮೇಲೆ ಬಳ್ಳಿಗೆರೆಯೆಳೆವನೆನೆ
ಬೆಳ್ಕೊಕ್ಕರೆಯ ಸಾಲು ಮೆರೆವುದಾಗಸದೆ. ೧೮೪

ಗಾಳಿ "ಗುಲ್ದಾರಿಯೋ" ಆಡುತೋಡೋಡುತ್ತ
ಬಿಳಿಕಾಗದದ ಚೂರುಗಳನೆಸೆದ ರೀತಿ
ಆಕಾಶಮಾರ್ಗದಲಿ ಚೆದರಿ ಚೆಲ್ಲಾಪಿಲ್ಲಿ
ಬಿಳಿಮೋಡ ಬಿದ್ದಕಡೆ ಬಿದ್ದಿರುವವು. ೧೮೫

ಗಿಡದಲರಳುವ ಎಲ್ಲ ಹೂಗಳನು ಕೊಯ್ಯದಿರು
ಉಳಿದಿರಲಿ ಕೆಲವು, ಗಿಡಕಲಂಕಾರ;
ಕುಡಿಯ ಬರುವುವು ದುಂಬಿ ಚಿಟ್ಟೆಗಳು ಹೂರಸವ
ಅದು ನಿಸರ್ಗವು ಅವಕೆ ಇಟ್ಟ ಆಹಾರ. ೧೮೬

ಬೆಟ್ಟತುದಿಯನ್ನೇರಿ ಅಲ್ಲಿ ನಿಂತನ ಕಂಡು
ತಪ್ಪಲಿನಲಿಹ ಮನುಜ ಬೆರಗುಗೊಂಡು
ಹೊಟ್ಟೆಕಿಚ್ಚಿಂದ ತಾನವಗೆ ಸರಿನಿಂತೆನೆನೆ
ಏರಿದಂತಾಯ್ತೆ? –ಜನ ನಗರೆ ಕಂಡು? ೧೮೭

ಮೇಲೇರಿದರಿಗೆ ಮನ್ನಣೆಯ ಕಾಣಿಕೆಗೊಟ್ಟು
ಯತ್ನ ಮಾಡವರ ಜೊತೆ ಸರಿ ನಿಲ್ಲಲು;
ಕಾಲಬಲವೊಯ್ಯೆ ನೀನವನ ಮೀರಿಸಬಹುದು:
ವಿನಯ ಪ್ರಯತ್ನಸಿದ್ಧಿಗೆ ಮೆಟ್ಟಲು. ೧೮೮

ಶಿಖರ ಸೌಂದರ್ಯದರ್ಶನವುಂಟೆ ಸಕಲರಿಗೆ?
ಸಾಹಸಿಗ ಸುಕೃತಶಾಲಿಗಳು ಕೆಲವರಿಗೆ–
ಶಿಖರ ಶೂನ್ಯತೆ ಶೈತ್ಯ ನಿರ್ಜನತೆ ಕವಿದಂದು
ಶಿಖರ ಮೈತ್ರಿಯ ಸೌಖ್ಯ ಕ್ಷಣದವರೆಗೆ. ೧೮೯

ತಪ್ಪಲಿನ ಸೌಂದರ್ಯ ಸೌಭಾಗ್ಯ ವೈವಿಧ್ಯ
ಸಕಲರಿಗೆ ಸರ್ವದಾ ತೆರೆದ ಸ್ವರ್ಗ;
ಬೆಪ್ಪನಾಗದಿರು ಶಿಖರಾರೋಹಣಕೆ ಸೋತು,
ಸಾಹಸದ ಸುಖಸಿದ್ಧಿ ಕಠಿನ ಮಾರ್ಗ. ೧೯೦

ನೆರಳೀವ ಮರವ ಕಡಿದುರುಳಿಸುವೆಯೇತಕ್ಕೆ?
ನೆರಳು ಮಾತ್ರವೆ? ಉಂಟು ಹೂಹಕ್ಕಿ–ಹಣ್ಣು:
ಮರವು ಮುದಿಯಾಗೊಣಗೆ ಈಗ ಬಯಸಿದ ಫಲವ
ಕೊಡುವುದಿಮ್ಮಡಿಯಾಗಿ–ಕಾದು ಉಣ್ಣು. ೧೯೧

ಫಲಭರಿತ ವೃಕ್ಷಕ್ಕೆ ಕಲ್ಲೆಸೆಯೆ ಫಲವುಂಟು:
ಅಡ್ಡೇಟೊ ಗುಡ್ಡೇಟೊ–ಯತ್ನ ಸಫಲ;
ಎಲೆಮರೆಯ ಹಣ್ಣೆರಡಕಿಟ್ಟ ಗುರಿಯೇಟುಗಳು
ಹುಸಿಯಹವು–ನಿಷ್ಫಲಕೆ ಬೇಡವೊ ಛಲ. ೧೯೨

ಕೊರಡು ಕೊನರುವುದೇನೊ? ಬರಡು ಫಲಿಸುವುದೇನೊ?
ಹುರುಡುಗೊಂಡೇತಕ್ಕೆ ಹೊಯ್ವೆ ನೀರ?
ಮರಳುಕಾಡೊಳಗರಳು ಮಲ್ಲಿಗೆಯ ತಿರಿವೆಯಾ?
ಬಿಸಿಲುಗುದುರೆ ಸವಾರಿಗೈವ ಧೀರ! ೧೯೩

ನೀರೆರೆಯಬೇಕು ಬೇರಿಗೆ; ಬೇರು ಕೊಂಬೆಗಳ
ಪೋಷಿಸಲು, ಕೊಂಬೆ ಹೂ ಹಣ್ಣನುಂಬೆ;
ಅರ್ಥಕಾಮಗಳ ಹೂ ಹಣ್ಣು ಭೋಗಕೆ; ಧರ್ಮ
ರಕ್ಷಣೆಯ ಕೃಷಿ ಮಾಡು, ಕೈವಲ್ಯವುಂಬೆ. ೧೯೪

ಹೂ ಚಿಗುರ ಕಿತ್ತೆರಚಿ ಹಣ್ಣುಗಳನರೆಕಚ್ಚಿ
ಬಾಳ್ಮರನನಡರಿರಲು ಜಾತಿ–ಕೋತಿ
ಪೂಜೆಮನಸಿನ ಭಕ್ತ "ಹುಷ್" ಎಂದ ಮಾತ್ರಕ್ಕೆ
ನಿಲ್ಲುವುದೆ ಮಂಗಚೇಷ್ಟೆಯ ಫಜೀತಿ? ೧೯೫

ಸಾಲು ಮರಗಳನೆಲ್ಲ ಸಾಲುಸಾಲಾಗಿ ಕಡಿದು
ಅಗೆದು ಗುಂಡಿ ಚರಂಡಿ ತೋಡುವರಲಾ;
ಬರಲು ಬೇಸಗೆ ಮರಗಳಿಲ್ಲ, ನೆರಳೂ ಇಲ್ಲ;
ಮಳೆ ಬರೆ ಚರಂಡಿಯಲಿ ಚರಮಗಾನ! ೧೯೬

ಎರಡುಕೈ ಬಿಡುವಿರಲು, ಕಂಡಿರಿಗೆ ಕೈಯಮುಗಿ,
ಕೈಯೊಂದೆ ತೆರವಿರಲು ಮಾಡೋ ಸಲಾಮು;
ಎರಡು ಕೈಗೂ ಕೆಲಸವಿರೆ ತಲೆಯ ಬಗ್ಗಿಸು;
ಇರಲು ಹೊರೆ ತಲೆಗೂ, ಮುಗುಳುನಗೆ ಬೀರು. ೧೯೭

ಪರ್ವತವು ಮಹಮದನ ಬಳಿಗೆ ಬರಲಾಗದಿರೆ
ಮಹಮದನೆ ಪರ್ವತವ ಸಾರಬೇಕು;
ಸರ್ವವೂ ನಮ್ಮ ಮೂಗಿನ ನೇರ ನಡೆಯುವವೆ?
ನೂರು ನೇರಕೆ ಮೂಗ ತಿರುವಬೇಕು. ೧೯೮

ಪ್ರತಿಗಾಮಿಗೂ ಪ್ರ(ಗ)ತಿಗಾಮಿಗೂ ವ್ಯತ್ಯಾಸ
ಒಂದಕ್ಷರದೊಳಿಹುದು: ಅದು "ಗ"ಕಾರ
ಹಿಂದಕಿವ ಮುಂದಕವ ಚಲಿಸಿ ಒಂದೆಡೆ ಸೇರಿ
ಗತಿಸಿದಾಗಿಬ್ಬರಿಗು ಸಮ "ಗ"ಕಾರ! ೧೯೯

ಹಲ್ಲುಕಟ್ಟಿಸಿಕೊಳಲು ದಂತವೈದ್ಯರ ಕಂಡು
ಕುಳಿರುತ್ತಿದ್ದೆ ಕುರ್ಚಿಯ ಬಂದಿಯಾಗಿ;
"ಏಳು" ಎನ್ನುವವರೆಗು ಏಳುದಿನ ಕುಳಿಕುಳಿತು
ಹಿಂದಿರುಗಿದೆನು ನಾ ಸ್ಥಿತಪ್ರಜ್ಞನಾಗಿ. ೨೦೦

ಮಾಡು ಕಂಡಾಗ ಕಂಡಲ್ಲಿ ಅಧಿಕಾರಿಗೆ
ಸೊಂಟ ಬಗ್ಗಿಸಿ ಮೂರುಸಲ ಸಲಾವು:
ನಿನನ ತಪ್ಪುಗಳೆಷ್ಟೊ ಬಲ್ಲೆಯಾ ನೀನು? ಅವನ
ಕೋಪಶಮನಕ್ಕದೇ ಒಳ್ಳೆಯ ಮುಲಾಮು. ೨೦೧

ಜನತೆಯೊಳಗಿನ ಶಕ್ತಿ ಬೂದಿ ಮುಚ್ಚಿದ ಕೆಂಡ:
ಅದನುರುಬಿ ಕಯ್ಯಲ್ಲಿ ಪಿಡಿಯಲಹುದೆ?
ಜನವನಾರಾಧಿಸುವ ಗೈಮೆ ಯಜ್ಞಕು ಮಿಗಿಲೊ:
ಅರಿತು ಸೇವಿಸೆ ಅಗ್ನಿ ಅಹಿತನಹನೆ? ೨೦೨

ತನ್ನ ತಂದೆಯ ಬಾಯ್ಗೆ ಮಣ್ಣಿಕ್ಕೆ ಹೊನ್ನಹುದೆ?
ತಾಯೆ ವಿಷವೂಡೆ ತಾನಮೃತವಹುದೆ?
ತನ್ನವರೆ ತಲೆಮೆಟ್ಟಿ ತುಳಿಯುತಿರಲಾತುಳಿತ
ತಲೆಗಿಟ್ಟ ಸೇಸೆಯೆಂದಾನಲಹುದೆ? ೨೦೨

ತನ್ನ ತೋಟದ ಮುಳ್ಳು ಚುಚ್ಚೆ ನೋಯದೆ ಪಾದ?
ತನ್ನ ಸಾಕಿದ ಅವು ತಿವಿಯೆ ಸುಖವೆ?
ತನ್ನ ಕೈಬೆರಳ ಪುಣ್ ರನ್ನದುಂಗುರವಹುದೆ?
ಮಕ್ಕಳವಿನಯ ಮನಕೆ ಮೋಹಿಸುವುದೆ? ೨೦೪

ಅರಸಾದೊಡೇನಾತ್ಮ ಮಾರಿಕೊಂಡವನಾಳು;
ಆತ್ಮವಂತನೆ ಅರಸು, ರಾಜ್ಯ ಮನಸು;
ಗುರುಹಿರಿಯರನ್ನು ಪೇಕ್ಷಿಸುತ ದುರ್ಮಂತ್ರಿಗಳ
ಕೈಗೊಂಬೆಯಾದರಸು ಕಟುಕರ ಹಸು. ೨೦೫

ಅರಸಿಗಿಂತಲು ಮಿಗಿಲು ಜನಶಕ್ತಿ ಲೋಕದಲಿ;
ಅರಸನಿಗೆ ದೈವ ಪ್ರಜಾಸಮೂಹ;
ಸರಸಿಜೀವನಕೆಂತು ಮಳೆವನಿಗಳಿಂದಿರವೊ
ಪ್ರಜೆಗಳಿಂದಂತರಸುತನದ ನಿರ್ವಾಹ. ೨೦೬

ಸರಸಿಯೆನ್ನುವ ಹೆಸರೆ ಹಿರಿದು ಹಳ್ಳವದಾಗೆ,
ನೀರು ಬತ್ತಿರೆ, ನೀರೆ ಬಾರದಿರಲು?
ಸರಸಿ ನೀರಿಂದ, ನೀರೇ ಸರಸಿ ತಾನೆಂಬ
ತೆರನೊ ರಾಜಪ್ರಜಾ ಸಂಬಂಧವು. ೨೦೭

ಪ್ರಜೆಯನಾರಾಧಿಸುವ ರಾಜ ಪ್ರಜೆಗಳ ದೈವ:
ಈ ಪರಿ ಪರಸ್ಪರಾರಾಧ್ಯರಿವರು;
ತ್ಯಜಿಸಿ ಸ್ವಾರ್ಥವನಿವರ ಸೇವಿಸುವ ಮಂತ್ರಿಯಿರೆ
ಆ ನಾಡು ಶಾಂತಿಸೌಖ್ಯಗಳ ತವರು. ೨೦೮

ಅರಸೆ ಬೇಡೆನ್ನುವಾ ಮಾತು ಬರಿಯ ಕುಯುಕ್ತಿ:
ದಿಟ, ಅಂಕೆಯಿರದಾಳ್ಕೆಯಿಂದ ಹಾನಿ;
ಸರುವಾಧಿಕಾರವನು ಜನದಂಕೆಗೊಪ್ಪಿಸಿದ
ಅರಸು ಲೋಕದ ಅರಸುಗಳೊಳು ಮೌನಿ. ೨೦೯

ಜನತೆಯನು ಕೆರಳಿಸಲು ಜಗವೆ ನಿಲ್ಲುವುದೇನು?
ಜನತೆಯೇ ಜಗದ ಸರ್ವಸ್ವವಾಧಾರ.
ಜನತೆಯನು ಮೆಟ್ಟಿ ಆಳಿದನೆಂದು ಉಳಿದಿಹನು?
ಆತ ಜನತಾವೈರಿ, ಭೂಮಿಭಾರ. ೨೧೦

ನೆರೆಯ ಮನೆಯಂಗಳದ ಮಲ್ಲಿಕಾಕುಸುಮವದು;
ಅದ ಕೊಯ್ದು ಪಿಡಿಯಲೇಕೆಳಸುತಿರುವೆ?
ಇದೋ, ವಸಂತದ ಗಾಳಿ ಅದರ ಕಂಪನು ಕೊಂಡು
ತಂದೀಯುತಿದೆ; ಏಕೆ ಹೂವ ಬಯಕೆ? ೨೧೧

ಓ ಪಕ್ಷಿ, ಓ ಪಕ್ಷಿ! ನೋಡು ಆ ಹಣ್ಣ!
ನಿನ್ನ ಕಣ್ಣಿಗೆ ಅದರ ಬಣ್ಣ ಬಣ್ಣ
ಸೊಗಸಹುದು; ಸುತ್ತಲೂ ಮುಳ್ಳುಪೊದೆ; ರಕ್ತಬೆಲೆ
ತೆತ್ತು ಸವಿ, ಇಲ್ಲವೋ ಮುಚ್ಚು ಕಣ್ಣ! ೨೧೨

ಬರಿದೆ ಹಾರಾಡುತಿಹೆಯೇಕಿಲ್ಲಿ, ಓ ದುಂಬಿ
ಸವಿಯೆ ಹೂ ಸಂಗವುಂಟೆಂದು ನಂಬಿ?
ಮರಳು ಮರಳ್, ಓ ಭ್ರಮರ! ಬಯಲೊಳೇಕೀ ಭ್ರಮಣೆ?
ಒಲಿದೊಲೆದು ಕರೆವ ಹೂವಿಲ್ಲ, ಸಖನೆ! ೨೧೩

ಸುಧೆ ಚೆಲ್ಲಿದಂತೆ ಮೈತುಂಬ ಹೂ ತೊಟ್ಟಿರಲು
ಮಲ್ಲಿಗೆಯ ಲತೆಯ ಮೆಚ್ಚುವೆವು ನಾವು;
ಮೆಚ್ಚದಿದ್ದರು ಸರಿಯೆ ಮಲ್ಲಿಗೆ ಎನ್ನಿಸದೆ
ಲತೆಗೆಲ್ಲ ಅರಳಿರಲು ಕೆಲವೆ ಹೂವು. ೨೧೪

ಮುದಿಯ ಮರ ಒಣಗುತಿರೆ, ಚಿಗುರಿಲ್ಲ ಹೂವಿಲ್ಲ,
ಉದುರಲೆಲೆಯಿಲ್ಲ, ಬಿಡು ಹಣ್ಣ ಮಾತು:
ತರಗು ಗಾಳಿಯ ಪಾಲು; ತುದಿಯಲ್ಲಿ ರಣಹದ್ದು;
ಬುಡದ ಹುತ್ತದಿನೇರುತಿದೆ ಕಾಲಸರ್ಪ! ೨೧೫

ನರನ ರಕ್ತದ ರುಚಿ ಕಂಡ ಹುಲಿಯದೊಮ್ಮೆ
ನರನ ಬೇಟೆಯನೆಂದೂ ಬಿಡದು;
ಪರಮಾಧಿಕಾರದ ರುಚಿಕಂಡ ಮೇಲೊಮ್ಮೆ
ವರಯತಿಯಾದರೂ ಬಿಡನು. ೨೧೬

ತೈಲ ಮುಗಿದಿರಲು ನೀಲಿಯನೆ ಮೆರೆದು
ದೀಪವಾರುವುದೆ ಚೆಂದ!
ಹಣ್ಣು ಮಾಗಿರಲು ತಿನ್ನುವರ ಕೈಗೆ
ಕಳಚಿ ಬೀಳುವುದೆ ಚೆಂದ! ೨೧೭

ನೋಡದೊ ಸಂಧ್ಯಾಗಗನ ಗಂಗೆಯಲಿ
ಸಾಗಿದೆ ಮುಗಿಲ್ದೋಣಿಯ ಸಾಲು–
ಯಾರೂ ಪಯಣಿಗರೇ ಇಲ್ಲ:
ಸ್ವರ್ಗಕೆ ಭೂಮಿಯ ಚೆಲುವ ಟಪಾಲು! ೨೧೮

ಕಾವ್ಯಸೃಷ್ಟಿಯೆನ್ನಲೇನು?–
ತನ್ನ ತಾನೆ ಕೊಡುವುದು;
ಅಕ್ಷರ ನಿರ್ವಯಲಿನಲ್ಲಿ
ತನ್ನ ಮುದ್ರೆ ಬಿಡುವುದು. ೨೧೯

ಕಂಡೆ ಚಿತ್ತಾಪಹಾರಿಣಿ ಚೆಲುವೆಯ,
ಚಣದಲಿ ಚೆಲುವಿಗೆ ಮನಸೋತೆ;
ತಿಳಿವೆಚ್ಚರಿಸಿತು: ನಡೆ ನಡೆ ದಾರಿಗ,
ಅವಳೆಟುಕದ ತಾಳೆಯಮೋತೆ! ೨೨೦

"ಥೂ! ನನ್ನ ಮುಟ್ಟಬೇಡಿ!"
"ಮುಟ್ಟಿದೆನೆ? ಮುತ್ತಿಟ್ಟೆ ನನ್ನ."
"ಸೋಕಿದಂತಾಯ್ತಲ್ಲವೇ?"
"ತುಟಿಗೆ ಕಟ್ಟಿಲ್ಲ ಚಿನ್ನ." ೨೨೧

ಕೌಪೀನ ಮಡಿಸಿಡುವ ಮಗನ ಕೇಳಿದ ತಂದೆ:
ಏತಕೀ ಕೌಪೀನ?"
ಮಗನು ಹೇಳಿದ : "ನೀನು ಅಜ್ಜನಿಗೆ ಕೊಟ್ಟುದನೆ
ಮಾಡುತಿಹೆ ನಿನಗೆ ಜೋಪಾನ." ೨೨೨

ನಕ್ಕರೆ ಜೀವನ ನಂದನವನವೈ,
ಅತ್ತರೆ ಅದುವೆ ಶ್ಮಶಾನ.
ನಿಕ್ಕುವಮೀ ನುಡಿ: ನಗುತಿರು, ಜೀವವೆ,
ಬಿಡು ಬಿಡು ದುಮ್ಮಾನ. ೨೨೩

ಕಿಟಕಿ ಬಾಗಿಲುಗಳ ಮುಚ್ಚು
ಹಿಡಿಯಲಿ ಏಕಾಂತದ ಹುಚ್ಚು
ಹೊರಬೆಳಕನು ಹೊರಕಟ್ಟು
ತೆರೆಯಲಿ ಒಳಬೆಳಕಿನ ಗುಟ್ಟು. ೨೨೪

ಪದವಿ ಪ್ರತಿಷ್ಠೆಗಳಿಗೊಪ್ಪುವುದು ಸೊಗಸುಡುಪು,
ಮಾನ ಮುಚ್ಚಲು ಸಾಕು ತುಂಡು ಬಟ್ಟೆ;
ವಿಧವಿಧದ ಭಕ್ಷ್ಯಭೋಜ್ಯಗಳು ನಾಲಗೆ ರುಚಿಗೆ,
ಸಾಕು ನಿತ್ಯದ ಊಟ ಹೊರೆಯೆ ಹೊಟ್ಟೆ. ೨೨೫

ನೋಡಿ ನಲಿಯುತ್ತಿದ್ದೆ ಚೆಂಗುಲಾಬಿಯ ಚೆಲುವ:
ಕಣ್ಣರಳಿಯೆದೆರಳಿ, ಅಡಗಿತ್ತು ಸೊಲ್ಲು;
ಬೇಡಿ ಕೊಯ್ದನು ಗೆಳೆಯ ಹೂವ ತನಗಿರಲೆಂದು:
ಕೆನ್ನೀರ ಬೆಲೆಯ ಕೊಂಡಿತ್ತದರ ಮುಳ್ಳು. ೨೨೬

ಪತ್ರಿಕಾಬಂಧುವಿನ ಛತ್ರಿನೆರಳಲಿ ನಿಲಲು
ಸುಲಭದಲಿ ಸಿಕ್ಕುವುದು ಸುಪ್ರಚಾರ;
ಮಂತ್ರಿಗಳ ಮನೆಯಲ್ಲಿ ಎಡೆದೊರೆವುದಾಮೇಲೆ
ಎಂತಿರುವುದೋ ಏನೊ ನಿನ್ನ ಗ್ರಹಚಾರ. ೨೨೭

ಗಂಗೆಯೇ ಪವಿತ್ರವೆಂದದಮಿಂದು ಪೂಜಿಸಲು
ಕಾವೇರಿ ಮುನಿಯುವಳೆ? ಮುಂಬರಿವಳು;
ಕಾವೇರಿಯೇ ಪೂಜ್ಯೆಯೆಂದವಳ ಪೂಜಿಸಲು
ತುಂಗೆ ಮುನಿಯುವಳೆ? ನಿಲದೆ ಹರಿಯುತಿಹಳು. ೨೨೮

ನಿನ್ನ ನಂಬಿದ ದೈವ ಗುರುಗಳನ್ನು ಪೂಜಿಸು:
ಅನ್ಯ ದೈವಾನುಗ್ರಹದ ಭೀತಿ ಯೇಕೆ?
ಅನ್ಯದೈವದ ನಿಂದೆ ನಿನ್ನ ದೈವಕೆ ನಲಿವೆ?
ಹೊಳೆ ಹತ್ತು ನೀರ್ ಒಂದು; ಅಂತೆ ದೈವ. ೨೨೯

ಸಿದ್ಧಶೈಲದ ಮೇಲೆ ಬೆಳೆದಿರುವ ವೃಕ್ಷವನು
ಕಾಣುವರೆ ಬೇಕು ಎತ್ತರ ಮೇಲು ನೋಟ;
ಕೆಳಗು ನೋಟದ ಕುಬ್ಜ ಹೆಳವ ಮಂದಿಗೆ ಎಂದೂ
ಕಾಣುವುದು ತಪ್ಪಲಿನ ತೃಣದ ಕೂಟ. ೨೩೦

ತಂಗಿಯೌತನದ ದಿನದಿ, "ಅಕ್ಕ ಸತ್ತಳು"–ಸುದ್ಧಿ;
ತಂದೆ ಕಣ್ಣುಚ್ಚುತಿರೆ ಪುತ್ರೋತ್ಸವ;
ಜಯ ಚುನಾವಣೆಯಲ್ಲಿ, ಫೇಲ್ ಮಗ ಪರೀಕ್ಷೆಯಲಿ:
ಹುಟ್ಟು ತೊಟ್ಟಿಲಿನಲ್ಲಿ ಮಲಗಿದೆ ಶವ. ೨೩೧

ರೆಂಬೆಕೊಂಬೆಗಳಿಂದ ಕವಲು ಕೊನೆಯಿಂದ
ರಮ್ಯವಾಗಿದ್ದ ಮರದಲ್ಲಿ ಪಶು ಪಕ್ಷಿ;
ಇಂಬು ಪಡೆದಿದ್ದು ತುಂಬಿದಾಯುಷ್ಯದಲ್ಲಿ
ಒಂಟಿ: ಒಣಮರಕಿನ್ನು ಕೊಡಲಿ ಸಾಕ್ಷಿ. ೨೩೨

ಮುಗ್ಧತೆ ಮಲಗಿದೆ ಚಾಪೆಯ ಮೇಲೆ–
ಚಾಪೆಯಲ್ಲವೋ–ಆಲದೆಲೆ–
ದುಗ್ಧಾಂಬುಧಿ. ಧೂಪ ಸರಿತ ಸ್ಥಲವೆ–
ದ್ವಾಪರ ಶಿಶುವಿನ ಕಲಿಯುಗ ಲೀಲೆ. ೨೩೩

ಪರಮಾತ್ಮನುಂಟೆಂಬ ಪರಮಾತ್ಮನಿಲ್ಲೆಂಬ
ವಾದಕ್ಕೆ ಪರಿಹಾರ ಪ್ರೇಮ ಮಂತ್ರ–
ಜಗದ ಜೀವಿಗಳನ್ನು ಒಂದೆ ಬಾಂಧವ್ಯದಲಿ
ಬಿಗಿದು ಮೂಲದಲಿರುವ ತಾಯ್ತಂದೆ ಶಕ್ತಿ. ೨೩೪

ಹಿಮದ ಬೆಟ್ಟವನೇರಿ ಸುತ್ತ ಕಾಣುತ್ತಿರುವ
ಬಿತ್ತರದ ನೋಟ ಚೆಲುವಿನ ಸಾಗರ;
ಸಮನಲ್ಲದಿರಲೇನು? ಕಿಟಿಕಿ ಚೌಕಟ್ಟಿನಲ್ಲಿ
ಕಂಡ ದೂರದ ಬೆಟ್ಟ ಚೆಲುವ ಚಿತ್ರ. ೨೩೫

ಕತ್ತು ಬಗ್ಗಿಸಿ ನಡೆವ ಸಂಭಾವಿತನ ಕಂಡು
"ನಗನಾಣ್ಯ ಹುಡುಕುವಿರಾ?"–ಕೇಳಿದನು ಕುಹಕಿ;
ಎತ್ತದೆಯೆ ತಲೆಯನವನುತ್ತಿಸಿದನು ಹೀಗೆ:
"ಕಣ್ಣು ಕೆಟ್ಟನು ಗೆಳೆಯ, ನಾನು ಅವಿವೇಕಿ." ೨೩೬

ಹೂತ ಹೆಣ ಅದನೇಕೆ ಹೊರಗೆ ತೆಗೆದು ನೀ–
ನದರ ಮೂಳೆಗಳನ್ನು ಎಣಿಸುವೆಯೊ ಮೂಢ!
ಅಜಾತಭ್ರೂಣ ಸ್ವರೂಪದ ಪರೀಕ್ಷೆಯದೇಕೆ?
ಕಣ್ಣೆದುರ ಸಸ್ಯಶಿಶುಗೆ ನೀರಿನಲುಣಿಸನೋಡಾ! ೨೩೭

ಇದ್ದಕಿದ್ದಂತೆಯೆ ತಟ್ಟನೆ ಅರಿತು ಬೀದಿಯ, ಮನೆಗಳ ವಿದ್ಯುತ್‌ದೀಪ
ಸದೊಂದೇ ಬುದ್ಧಿಗೆ ಗೋಚರವಾಗುತ್ತಿದೆ ಕಿವಿ–ಕಣ್ಣಿನ ದ್ವಾರಾ
ಕಪ್ಪನೆ ರಾತ್ರಿಯ, ತಾರಾ ನೇತ್ರಿಯ, ಕೂದಲ ಕಡಲು
ಆಯಿತು ಕಾಣುವಜಗವೆಲ್ಲವ ನುಂಗುವ ರಕ್ಕಸಿಯೊಡಲು. ೨೩೮

ಕಟ್ಟು ಕಳಚಿದ ನಾಯಿ ಹೊರಚಾಚಿ ನಾಲಗೆಯ
ಕಂಡ ಹೊಲಸಿಗೆ ಮೂತಿಯಿಕ್ಕುವಂತೆ
ಬಿಟ್ಟು ನಯನೀತಿಯನು ಹರಿಯಬಿಡುವನು ಮಾನವ
ದುಷ್ಟ ಹೇಸಿಗೆಗೆ; ಅವಗಿಲ್ಲ ಚಿಂತೆ. ೨೩೯

ಹೂಗಿಡದ ಹಿತ್ತಲಲಿ ತಿಪ್ಪೆಗುಂಡಿಯ ಬೆಳಸೆ
 ಹೂಗಂಪನಟ್ಟುವುದು ತಿಪ್ಪೆನಾತ
ಬೇಗ ತಾನಾಗುವುದು ತನ್ನೊಂದು ದುರ್ಗುಣವೆ
 ಗುಣಗಣವ ಮುಸುಕೆ ಗುಣವಂತ ಕುಖ್ಯಾತ. ೨೪೦

ಮಾನಸ ಸರೋವರದ ಮೇಲೆ ಹಾವಸೆ; ಅದನು
 ಕೈಗಳಿಂದತತ್ತ ಸರಿಸೆ, ಚಣಮಾತ್ರ
ಕಾಣುವುದು ತಿಳಿನೀರು, ಒಳನೋಟ; ಕೂಡುವುದು
 ಮತ್ತೆ ಹಾವಸೆ: ಹೀಗೆ ಮಾಯೆಯ ಪಾತ್ರ. ೨೪೧

ಉಚ್ಚ ಪದವಿಯಲಿರಲು ಎಲ್ಲರೂ ಕೆಳೆಯರೆ
 ತುಚ್ಛನಗುವನೊಮ್ಮೆ ಪದಭ್ರಷ್ಟನಾಗೆ
"ಉಚ್ಚಕಂಠದಿನುಲಿವ ಕೋಗಿಲೆಯು ನೀನಯ್ಯ"
 ಎಂದೆಲ್ಲ ಹೊಗಳಿದರಿಗವನಿಂದು ಕಾಗೆ! ೨೪೨

ತಿನ್ನುವನ್ನದ ಗುಣವೆ ಮೈಗುಣದ ಗುಣವಯ್ಯ
 ಮೈಯ ಗುಣವೇ ಮನೋಧರ್ಮಕಾರಿ:
ಇನ್ನಿಂಥ ಮನವೆ ನಮ್ಮಯ ಕೃತಿ ಪ್ರೇರಕವು
 ಕೃತಿಸಮಷ್ಟಿಯೆ ರಾಷ್ಟ್ರ ನಿರ್ಮಾಣಕಾರಿ ೨೪೩

ಒಳ್ಳಿತಹ ಉಡುಪುಟ್ಟ ಮಳ್ಳನಿಗೆ ಮರ್ಯಾದೆ
 ಕದ್ದುಡುಪನುಟ್ಟ ಕಳ್ಳನಿಗೆ ಕೈಮುಗಿತ
ಸುಳ್ಳಿನಲಿ ಮುಳುಗಿರುವ ಸೂಟುಧಾರಿಗೆ ನಮನ
 ಬುದ್ಧಿ ಸಿದ್ಧಿಯ ಸರಳ ಉಡುಪಿಗುಗಿತ. ೨೪೪

ಫಲಭಾರದಿಂದ ಜಗಿಯುವ ಕೊಂಬೆ ಬಾಗುವುದು
 ಬಾಗುವುದೆ ಹೀಚಿಡಿದ ಕೊಂಬೆ ರೆಂಬೆ;
ತಲೆ ಬಾಗುವನು ತಾನೆ ವಿದ್ಯಾವಿಶಾರದನು.
 ತಲೆನಿಮಿರಿ ತಿರುಗುವನು ಬರಿ ಬಟ್ಟೆ ಬೊಂಬೆ. ೨೪೫

ನೂರು ಕ್ಯಾಂಡಲ್‌ಶಕ್ತಿಯಾ ಬೆಳಕಿನಲಿ ಸೊಡರು
ಮಂಕಾಗಿ ಕಾಡುವುದು ಬಹಳ ಸಾಜ
ಆರಿಸಾ ಬೆಳಕನ್ನು : ಸೊಡರ ಕುಡಿದೀಪದಲಿ
ಕಾಣು ಮೆರೆಯುವುದೆಂತು ಅದರ ತೇಜ. ೨೪೬

ಬದುಕು ದೇವರ ವರವೊ ಹದಗೆಡಿಸಬೇಡದನು
ತುದಿಮೊದಲವರೆಗದನು ಅನುಭೋಗಿಸು
ಒದಗಿದರೆ ದುಗುಡ ದುಮ್ಮಾನಗಳು ನಡುನಡುವೆ
ಎದೆಗೆಡದಿರವು ನಡುವೆ ತೇಲುಮೋಡಗಳು. ೨೪೭

ಕೇದಗೆಯ ಬನದಲ್ಲಿ ಉಂಟು ಹಾವಿನಕಾಟ
ಸಾಧು ಸಜ್ಜನರ ಬಳಿ ಖೂಳರಂತೆ
ಬಾಧೆ ಹಾವಿಂದಿರದು ಕೇದಗೆಯ ಪರಿಮಳಕೆ
ಸಜ್ಜನಕೆಯಪಕೀರ್ತಿ ಖೂಳರ ಜೊತೆ. ೨೪೮

ಕೆಸರ ತುಳಿಯುವುದೇತಕ್ಕೆ? ಕಾಲು ತೊಳೆಯುವುದೇಕೆ?
ಕೆಸರ ಕಂಡೆಡೆ ಸುಮ್ಮನಿಹುದೆ ಮೇಲು.
ಹುಸಿಕರೊಡನಾಟವದು ಕೆಸರ ತುಳಿದಂತಕ್ಕು
ತುಸು ತುಸವೆ ಹೂತು ಸಿಲುಕುವುದು ಕಾಲು. ೨೪೯

ನೆರೆಮನೆಗೆ ಬೆಂಕಿ ಬಿದ್ದಂದು ನೀ ಸುಮ್ಮನಿರೆ
ಅರೆಗಳಿಗೆಯಲ್ಲೂಟ ನಿನ್ನ ಮನೆಯದಕೆ
ಹೆರರ ಕಷ್ಟಕೆ ನೀನು ನೆರವು ನೀಡದೆ ನಡೆಯೆ
ಕೊನೆಗೊಂಟಿತನ ವುಪೇಕ್ಷೆಗಳೆ ನಿನಗೆ! ೨೫೦

ಕಂಪುಳ್ಳ ಪುಷ್ಪ ತಾನ್ ಕಿರಿದಾದರೂ ಕೂಡ
ಅದರಿರವ ನರುಹಲೇತಕೆ ತುತೂರಿ;
ಬಣ್ಣ ಬಣ್ಣದ ಹೂವು ಬಳಿಯೆ ಇದ್ದರು ಸಹಿತ
ಅದ ತೋರೆ ಬೇಕದರ ಬಣ್ಣದ ನಗಾರಿ. ೨೫೧

ಕೆಟ್ಟ ಕೆಲಸಗಳೆಲ್ಲ ಕೆಸರಿಗೇ ಎಳೆಯುವುವು
ದುಷ್ಪಾಕ ಮೊಸಳೆಯೆಂದಲೆ ಕಡೆಗೆ ಸಾವು,
ನೆಟ್ಟನೆಯ ಕೆಲಸಗಳು ನಂದ ಗೋಕುಲಕೊಯ್ದು
ಕರೆವವಮೃತವ ಕೃಷ್ಣ ಕಾವ ಗೋವು. ೨೫೨

ಕಾವ್ಯದಲಿ ಬೇಕು ಕೆಲವರಿಗೆ ಪ್ರಾಸ ಹಲವರ್ಗೆ
ಕಚಗುಳಿಯಹಾಸ, ಸುಶ್ರಾವ್ಯ ತೋಷ;
ಸೇವ್ಯಕೆಲವರಿಗೆ ಕಾವ್ಯದಲಿ ಉಪದೇಶ;
ಇಂತೋದುಗರಲಿ ಹಲವಂದ ವ್ಯತ್ಯಾಸ. ೨೫೩

ಬೇಸಗೆಯ ಬೇಗೆಯಲಿ ಮೈಬೆವರಿಡುತ್ತಿರಲು
ಎಷ್ಟುಹಿತ ತಂಗಾಳಿ ಬೀಸಿಲಾಗ
ಆಶೆ ಬತ್ತಿದ ಬಾಳ ಮರಳುಗಾಡಂಚಿನಲಿ
ಭರವಸೆಯ ಹಸಿರೆಸೆಯಲೆಂಥ ಯೋಗ! ೨೫೪

ಎಲ್ಲವಳಿಯಲು ಕೊನೆಗೆ ಉಳಿಯುವುದೇನು ಏನು? ಅದ
ಬ್ರಹ್ಮವಸ್ತುವದೆಂದು ಶಾಸ್ತ್ರ ಹೇಳುವುದು,
ಬಲ್ಲವರ ಮಾತಿದನು ಸಲ್ಲಲಿತದನುಭವಕೆ
ತಂದಾತ ತಾನು ಜೀವನ್ಮುಕ್ತನು. ೨೫೫

ಕೇಳದಿಹ ದನಿಯಿಹುದು ಕೇಳದನು ಕಿವಿಗೊಟ್ಟು
ಬಲ್ಲೆಯಾ ನೀನದರ ಹುಟ್ಟ ಗುಟ್ಟ
ಆಳದಾಳದಲೆದೆಯ ಹೆಗ್ಗಡಲಿನಲಿ ಮುಳುಗಿ
ಆಲಿಸವನದು ನಿನ್ನದಿದು ದನಿಯ ಗುಟ್ಟು. ೧೫೬

ನಾವು ನಾವೇ ನಾವೆ ಭವದ ಹೆಗ್ಗಡಲಿನಲಿ
ನಮ್ಮ ಕೈಲೇ ಹುಟ್ಟು ಮತ್ತು ಸಾವು
ಜೀವಿಪಾಸೆಯ ಹಿಡಿದು ದೈವಕ್ಕೆ ಶರಣಾಗಿ
ಪಯಣಿಸಲು ಸಿಕ್ಕುವುದು ಕೊನೆಯ ಠಾವು. ೨೫೭

ಸ್ವತಂತ್ರನಾಗಿರಬೇಕೆ? ಸ್ವಾವಲಂಬನೆಯ ಕಲಿ:
ನಿನ್ನ ಕೈಕಾಲೆರಡು ದೇವರ ವರ
ಯಂತ್ರವಾಗುವೆಯೇನು? ನಡಸಲಿತರರು ನಿನ್ನ?
ನಂಬು ನೀ ನಿನ್ನನ್ನೆ ಬೇಡಿತರರ. ೨೫೮

ನಾಯಿಜಗಳಕ್ಕೆ ಕಾರಣ ಸುಪ್ರಸಿದ್ಧ; ಇದು
ಬೀದಿಯಲ್ಲೆಲ್ಲರಿಗೂ ನಿತ್ಯ ದೃಶ್ಯ:
ಹೇಯಕೃತ್ಯದ ಜನರ ನಾಯಿನಡತೆಯನಿನ್ನು
ಬಿಡಿಸಿ ಹೇಳಲು ಬೇಕೆ? ಅದನವಶ್ಯ. ೨೫೯

ರಾಮನಂತಾಗದೆಯೆ ಕೃಷ್ಣನಂತಾಗದೆಯೆ
ಬುದ್ಧನಂತಾಗದೆಯೆ ಅವರ ನೆನೆಯೆ
ಫಲವೇನು? ಅವರು ತೋರಿದ ದಾರಿಯಲಿ ನಡೆಯೆ
ನೀ ರಾಮ ನೀ ಕೃಷ್ಣ: ನಂಬು ನಂಬು. ೨೬೦

ಹೆಂಡಕುಡುಕನಿಗೆ ಸವಿಹಾಲು ರುಚಿಸುವುದೇನು?
ರಂಡೆಯನ್ನೊಲಿದವಗೆ ಹೆಂಡತಿಯು ರಮಿಸುವಳೆ?
ಹೊಂಡಗೆಸರಲಿ ಮುಳುಗಿ ನಲಿನಲಿವ ಮಹಿಷನಿಗೆ
ಕಂಡರೂ ತಿಳಿಗೊಳದ ನೀರು ಸೊಗಸುವುದೆ? ೨೬೧

ತಲೆಗೆ ಬಂದುದು ಬಾಯ್ಗೆ; ಬಾಯ್ಗೆ ಬಂದುದು ಕೈಗೆ;
ಕಯ್ಯ ತಡೆಯಲು ಮತ್ತೆ ಕೈಗಾಗದು;
ಕಯ್ಯಲಿರುವುದು ಕಯ್ದು; ತಲೆಯದರ ಚಾಲಕ
ತಲೆಯ ತಡೆಹಿಡಿಯುವಂಕುಶ ವಿವೇಕ. ೨೬೨

ಹಣ್ಣೆಲೆಯೆ! ಏಕಂಟಿಕೊಂಡಿರುವೆ ಇನ್ನೂ ಮರಕ್ಕೆ?
ಮರಕ್ಕೂ ನಿನಗೂ ಬೆಳೆದ ನಂಟು.
ಚಿನ್ನ ಚಿಗುರಿಗೆ ಸಲಲಿ ನಿನ್ನ ಬಳುವಳಿಯಾಗಿ;
ಬೀಳು ಮಣ್ಣಿಗೆ; ಲಾಭ ಚಿಗುರಿಗುಂಟು! ೨೬೩

ಪುಸ್ತಕವ ಹಸ್ತ ಮಸ್ತಕದ ಒಡವೆಯಮಾಡಿ
 ಮೆರೆದಾಡೆ ತಲೆಯ ತುಂಬುವುದೆ ತಿಳಿವು?
ಶಸ್ತ್ರಗಳ ಬೀದಿಯಲಿ ಮೆರವಣಿಗೆ ಮಾಡಿದರೆ
 ಸೇನೆಗೊದಗುವುದೆ ರಣರಂಗದಲಿ ಗೆಲವು? ೨೬೪

ಪ್ರಿಂಟಿಂದ ಪ್ರಿಂಟಿಂಗೆ ತಪ್ಪುಗಳು ಹೆಚ್ಚುವುವು
 ಗಂಟಾಗತೊಡಗುವುವು ಪಾಠ ರೂಪ
ಶುಂಠರಾದರ ಕೈಗೆ ಕರಡುತಿದ್ದುವ ಕೆಲಸ;
 ಅಂಟಿದೆ ಪುನರ್ಮುದ್ರಣಕೆ ಶಾಪ. ೨೬೫

ನೀಳಗುಹೆಯನು ನೀನು ಪಯಣಿಸುವೆಯಾ ಧೀರ?
 ಸುತ್ತು ಬಳಸಿನದಲ್ಲಿ ನಿತ್ಯವಿರುಳು:
ಸಾಲುಸಾಕ್ಷಿಗಳಿಹವು ಹೆಜ್ಜೆಗುರುತುಗಳಲ್ಲಿ
 ಅದ ಹಿಡಿದು ಸಾಗು ನೀ ಗುರಿ ತಲುಪಲು. ೨೬೭

ಆಕಾಶವಾಡುಂಬೊಲವು ಈಜುಗೊಳ ಕಡಲು
 ನಕ್ಷತ್ರ ಜಪಸರವು ಮುಗಿಲ ಜಡೆಯು;
ಏಕಾಂತದೊಳಗಿವಿಗೆ ಬ್ರಹ್ಮಾಂಡದಿಂಚರವು
 ಯೋಗಧನ್ಯತೆಗಿದುವೆ ಕಟ್ಟಕಡೆಯು. ೨೬೮

ಸೌಗಂಧಪುಷ್ಪ ತಾನೆಲ್ಲಿಯೇ ಅರಳಿರಲಿ
 ದೂರಕ್ಕು ಪಸರಿಸುವುದದರ ಕಂಪು;
ಜಗದೊಳಾವುದೋ ನಾಡಿನಲಿ ಹುಟ್ಟಿ ಬೆಳೆದಿರಲಿ
 ಹರಡುವುದು ಸತ್ಕವಿಯ ಹೆಸರ ಕಂಪು. ೨೬೯

ಮೂಡು ಮುಳುಗುಗಳೆರಡು ಹಗಲು ಇರುಳುಗಳೆರಡು
 ನಲಿವು ನೋವುಗಳೆರಡು ಸಗ್ಗ ನರಕ:
ನೋಡಲಿಕೆ ಕಣ್ಣೆರಡು ಮಾಡಲಿಕೆ ಕೈಯೆರಡು
 ನೆರಳು ಬೆಳಕುಗಳುಂಟು ಜಗವಿರುವತನಕ. ೨೭೦

ತೇರನೆಳೆಯುವುದಕ್ಕೆ ಹಿಂದೇನು ಮುಂದೇನು
ಎಲ್ಲಿ ಕೈ ಹಾಕಿದರೂ ಒಟ್ಟಿನೆಳೆತ;
ಹೋರಾಟವೇಕೆ ಜೀವನ ರಥೋತ್ಸವದಲ್ಲಿ?
ನಿಂತ ನೆಲೆಯಲ್ಲಾಗು ನೀ ಕೃತಾರ್ಥ. ೨೭೧

ಒಂಟಿಯಾಗಿಯೆ ಹುಟ್ಟು ಒಂಟಿಯಾಗಿಯೆ ಸಾವು
ಒಂಟಿಯಾಗಿರಗೊಡದು ಋಣಬಂಧಜಾಲ
ಗಂಟು ಹಾಕಿಹುದಲ್ತೆ ಜೀವಜೀವದ ನಂಟು
ತೀರಸಲೆ ಬೇಕು ಹಿಂದಿನ ಸಾಲ ಸೋಲ. ೨೭೨

ಬದುಕ ಹೇಳುವ ಶಾಸ್ತ್ರ ಕಲೆ ಪರಮಪೂಜ್ಯಗಳು
ಬದುಕಲೆಂದೇ ತಾನೆ ಹುಟ್ಟು ನಮಗೆ
ಅದನು ಬಿಡು ಇದನು ಬಿಡು ಎಂದೊರಲ್ವ ಕಗ್ಗಗಳ
ಗೊಡವೆಯೇಕವುಗಳನ್ನೊಟ್ಟು ವೊಲೆಗೆ. ೨೭೩

ಮುನ್ನೀರಿನಾಚಮನಕಾಗಬೇಕೆ ಅಗಸ್ತ್ಯ?
ಚೆನ್ನಚೆಲುವನು ಸವಿಯೆ ಸಂಗವೇಕೆ?
ಅನ್ನದೂಟಕ್ಕೇಕೆ ಚಿನ್ನ ಬಳಿತದ ತಳಿಗೆ
ತನ್ನತನವರಿಯೆ ಹೊರಗಾಣ್ಕೆಯೇಕೆ? ೨೭೪

ಬೆಳವಳಿಯಿರುವೆಡೆಯಲಿಹುದು ಜೀವಸೆಲೆ
ಜೀವವಿರುವಲ್ಲೆಲ್ಲ ಆತ್ಮಸಂಗ
ಚಲನ ಜೀವಂತಿಕೆಯ ಕುರುಹು; ನಿಲ್ಲಲು ಚಲನೆ
ಜೀವವಣಗುವುದಾತ್ಮ ತೇಜರಂಗ. ೨೭೫

ಆಚಾರ ಬೇಕು ಸುವಿಚಾರ ಸಂರಕ್ಷಣೆಗೆ
ಸುಗ್ರಾಹ್ಯವಾಗಲಿಕೆ ಸರ್ವಕಾಲ
ಸೂಚಿಪರ್ಥಕೆ ಶಬ್ದಸಂಗಡಿಕೆ ಬೇಕಲಾ;
ಫಲದ ಚೆಲುವಿಕೆಯದರ ವರ್ಣಜಾಲ. ೨೭೬

ನೋಡಲಾಗದ ವಸ್ತು ನುಡಿಯಲಾಗದ ವಸ್ತು
ಅರಿವಿಗೆಟಕದ ವಸ್ತು ಆ ಪರಬ್ರಹ್ಮ.
ಕೂಡಿ ಪ್ರಕೃತಿಯ ಹೂಡಿ ಸೌಂದರ್ಯ ಸೃಷ್ಟಿಯಲಿ
ಗೋಚರಿಸುತಿಹ ಬಂದು ಹತ್ತಿರಕೆ ನಮ್ಮ. ೨೭೭

ಕೋಪ ಬರುವುದು ಸಹಜ; ಅದ ತಡೆವುದತಿ ಕಷ್ಟ;
ಕೋಪಾಗ್ನಿ ಭುಗಿಲೆದ್ದು ಸುಡುವ ಮುನ್ನ
ಮಡದಿಯನು ಕರೆದು ದುರದುರನೆ ನೋಡಿ ಬಡಿಸೆನ್ನು
ಜಠರಾಗ್ನಿಗೊಂದಿಷ್ಟು ಹಾಕು ಅನ್ನ. ೨೭೮

ಸೂರ್ಯ ಮೂಡುವುದುಂಟೆ ಮತ್ತೆ ಮುಳುಗುವುದುಂಟೆ?
ಮೂಡು ಮುಳುಗುಗಳನ್ನು ಕಾಣುವೆವಲಾ;
ಕಾರ್ಯವೆಲ್ಲಕು ಇಹುದು ಒಂದೊಂದು ಕಾರಣವು
ಕಾರ್ಯಕಾರಣಕೂ ಉಂಟೆ ಕಾರಣವು? ೨೭೯

ಒಂದು ನುಡಿ ನುಡಿಯಲಿಕೆ ಎರಡು ಸಲ ನೋಡಣ್ಣ
ನೆನೆ ನಿನ್ನ ನಾಲಗೆಯ ಎರಡು ಕಣ್ಣ
ಕಂಡರೂ ಕಾಣದಂತಿದ್ದು ನೀ ಹರಟುವರೆ
ಬಯಲಾಗುವುದು ನಿನ್ನ ಎರಡು ಬಣ್ಣ. ೨೮೦

ಶಾಂತಿ ಕಾಡೊಳಗಿಲ್ಲ; ಅಲ್ಲ ಪೇಟೆಯ ಸರಕು;
ಸಾಲ ಕೇಳಲು ಸಿಗದು ನೆರೆಹೊರೆಯಲಿ;
ಭ್ರಾಂತಿಯೇತಕೊ ಮದ್ಯದಮಲಿನಲಿ ಇದೆಯೆಂಬ.
ಬೆಣ್ಣೆ ಕೈಯಲ್ಲಿ ಘೃತಕಲೆವೆ ಹುಂಬ! ೨೮೧

ಹೊದ್ದು ಸುಖದುಃಖಗಳನೊದ್ದು ಕೊರೆಚಿಂತೆಯನು;
ಸದ್ದುಗದ್ದಲವಿರದೆ ಮನದೋವರಿಯೊಳು
ನಿದ್ರಿಸುತ್ತೆಚ್ಚರದೊಳೆಲ್ಲರೊಡ ಬೆರೆಯುತ್ತ
ಭದ್ರ ನೂರ್ ಕಾಂಬನವನರಸು ಅಳು. ೨೮೨

ಜಂಗಮ ಫಕೀರ ಹರಿದಾಸರೆಲ್ಲರಿಗೊಂದೆ
ಸಮ ಭವದಲಿ ಭಿಕ್ಷೆ ನೀಡಲಹುದು;
ಅಂಗಪೋಷಣೆಗಾಗಿ ಬಹ ತಿರುಕರವರಲ್ಲ
ದೇವ ನಾಮಾಮೃತವಕಿವಿಗೆರೆವರು. ೨೮೩

# ಬಿನ್ನಹ

'ಮುಗಿಯದ ಮಾಯೆ' ಕವನ ಸಂಕಲನ ಪ್ರಕಟವಾದ ಮೇಲೆ (೧೯೫೮) ಈವರೆಗೆ ನಾನು ರಚಿಸಿರುವ ಕವನಗಳು–ಅರೆಕೊರೆಯಾದ, ಇಲ್ಲವೆ ಒಪ್ಪಿತವಾಗದ ಕೆಲವನ್ನು ಬಿಟ್ಟು ಎಲ್ಲವೂ–ಇಲ್ಲಿ ಸೇರಿವೆ. ಜೊತೆಗೆ, ೧೯೪೦ರಲ್ಲಿ ಪ್ರಕಟವಾದ ನನ್ನ ಮೊದಮೊದಲಿನ ಕವನ ಸಂಕಲನಗಳಿಂದ ('ಹಕ್ಕಿ ಹಾಡು', 'ಅಶೋಕ ಚಕ್ರ') ಆಯ್ದ ೧೩ ಕವನಗಳೂ* ಕೂಡಿಕೊಂಡಿವೆ; ಇವನ್ನು ಆಯ್ದುಕೊಟ್ಟ ನನ್ನ ಮಿತ್ರರೂ ಕವಿಗಳೂ ಆದ ಶ್ರೀ ಎನ್.ಎಸ್. ಲಕ್ಷ್ಮೀ ನಾರಾಯಣ ಭಟ್ಟರಿಗೆ ನಾನು ಕೃತಜ್ಞ. ಆ ಕವನಗಳನ್ನು ಸೇರಿಸಿಕೊಂಡ ಉದ್ದೇಶ, ಅವನ್ನು ಒಳಗೊಂಡ (ಮೇಲೆ ಹೆಸರಿಸಿರುವ) ಕವನ ಸಂಕಲನಗಳನ್ನು ಮತ್ತೆ ಅಚ್ಚುಮಾಡಿಸಬೇಕೆಂಬ ಆಸೆ ನೆರವೇರದೆ ಹೋದದ್ದರಿಂದ, ಪ್ರಕೃತ ಸಂಕಲನಕ್ಕೆ ಹೊಂದಿಕೊಳ್ಳುವ ಕೆಲವನ್ನಾದರೂ ಇದರಲ್ಲಿ ಅಡಕಮಾಡಿ ಅಷ್ಟರಿಂದಲೇ ತೃಪ್ತಿಗೊಳ್ಳುವುದು. ಇಂದಿನ ಓದುಗರಿಗೆ ಬಹುಶಃ ಅವೂ ಹೊಸವೆ. ಇವುಗಳ ಜೊತೆಗೆ, ಅಪ್ರಕಟಿತವಾದ ತೀರ ಮೊದಲಿನ ಕವನಗಳೂ ನನ್ನನ್ನು ಒಲಿಸಿಕೊಂಡು ನುಸುಳಿಕೊಂಡಿವೆ. ನಾನೇ ಅವನ್ನು ಕಡೆಗಣಿಸಿದರೆ, ಕೇಳುವವರು ಯಾರು? ಪದ್ಯದಲ್ಲಿ ಕಾವ್ಯಗುಣ ಅಷ್ಟೋ ಇಷ್ಟೋ ಇರುವುದಾದರೆ, ಎಂದು ಬರೆದದ್ದಾದರೇನು? ಎಂದು ಬರೆದದ್ದು, ಅಂದು ಬರೆದದ್ದಕ್ಕೂ ಇಂದು ಬರೆದದ್ದಕ್ಕೂ ವ್ಯತ್ಯಾಸ ಏನು?–ಎಂದು ತಿಳಿಯಬಯಸುವವರ ಸೌಕರ್ಯಕ್ಕಾಗಿ ರಚನೆಯ ಕಾಲವನ್ನು ಕೊಟ್ಟಿದೆ. ಕವನಗಳನ್ನು ರಚನೆಯ ಕಾಲಕ್ರಮದಲ್ಲಿ ಜೋಡಿಸದೆ ಇರುವುದರಿಂದಲೂ ಕಾಲ ನಿರ್ದೇಶ ಅಗತ್ಯ ಎನಿಸಿತು.

ಸಂಕಲನದಲ್ಲಿ ಸೇರಿರುವ ಅನುವಾದಗಳ ಬಗೆಗೆ ಎರಡು ಮಾತು; ಇವುಗಳ ಪೈಕಿ, 'ಮಹಾತ್ಮದ ಕರುಣೆ', 'ಗಾಂಧೀ ತರ್ಪಣ', 'ಯಾತ್ರೆ', 'ಮಳೆಬಿಲ್ಲು'–ಇವು ಆಕಾಶವಾಣಿಯ ರಾಷ್ಟ್ರೀಯ ಕವಿ ಸಮ್ಮೇಳನದಲ್ಲಿ ಪ್ರಸಾರಕ್ಕೆಂದು ಅದರ ಅಧಿಕಾರಿಗಳ

---

*ಒಳದನಿ, ನೆರೆಮನೆಯ ಕುಸುಮ, ಹರಟೆಯ ಹೊಡೆಯಲು ಸ್ನೇಹಿತರಿಲ್ಲ, ಅಂದಿನ ಪಾಠ, ಸೊಗಸಿನ ಸಂಜೆ, ಚಣವೆ ಸಾಕು ಚೆಲುವಿನ ನೋಟ, ಕಾರ್ತಿಕೋತ್ಸವ, ತಾರೆಗಳ ಮರುಮಾತು, ಅಪವಾದ, ಕಂಬನಿ ಕಾಣಿಕೆ, ಗೋಳು, ಅಣುಶಕ್ತಿ, ಬೇಡಿಕೆ.

ಕೋರಿಕೆಯಂತೆ ಅನುವಾದ ಮಾಡಿ ಪ್ರಸಾರ ಮಾಡಿದವು. ತೆಲುಗು ಮತ್ತು ಸಂಸ್ಕೃತ ಕೃತಿಗಳ ಅನುವಾದ ಬಹುಮಟ್ಟಿಗೆ ಯಥಾವತ್ತಾಗಿದೆ; ಆ ಭಾಷೆಗಳ ಪರಿಚಯ ತಕ್ಕಮಟ್ಟಿಗೆ ಇರುವುದರಿಂದ, ಇಂಗ್ಲಿಷಿನಿಂದ ಅನುವಾದ ಮಾಡಿರುವ ಕೃತಿಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಉಳಿದ ಎರಡು–ಅಸ್ಸಾಮೀ, ಕಾಶ್ಮೀರೀ ಭಾಷೆಗಳ ರಚನೆಗಳ ಅನುವಾದಗಳು–ಇಂಗ್ಲೀಷ್ ಮತ್ತು ಹಿಂದೀ ಅನುವಾದಗಳ ನೆರವಿನಿಂದ ದೇವನಾಗರಿ ಲಿಪಿಯಲ್ಲಿದ್ದ ಮೂಲಕೃತಿಗಳ ಜಾಡುಹಿಡಿದು ಮಾಡಿದವು. ಇವು ಬಹುಮಟ್ಟಿಗೆ ಛಾಯಾನಂವಾದಗಳು. ಹೇಗೆ ಆದರೂ, ಅನುವಾದದಲ್ಲಿ ಅನುವಾದಕನ ಸ್ವಂತ ನಿರ್ಮಿತಿಯೂ ಹೆಚ್ಚಾಗಿಯೋ ಕಡಮೆಯಾಗಿಯೋ ಮೂಲಕ ಜೀವಧಾತುವಿಗೆ ತನ್ನ ಜೀವಧಾತುವನ್ನೂ ಎರೆದುಬಿಟ್ಟಿರುತ್ತದೆ. ಅನುವಾದ ಎಂದು ಒಪ್ಪಿಕೊಳ್ಳದಿದ್ದರೆ, ಸ್ವಂತ ರಚನೆಯಂತೆಯೇ ಕಾಣುತ್ತವೆ ಇವು. ಆದ್ದರಿಂದ, ಸ್ವಂತ ರಚನೆಗಳೊಂದಿಗೆ ಇವನ್ನೂ ಸೇರಿಸಿಕೊಳ್ಳುವುದರಲ್ಲಿ ತಪ್ಪಿಲ್ಲ–ಋಣವನ್ನು ಒಪ್ಪಿಕೊಂಡುಬಿಟ್ಟರೆ.

'ಆ ದಾರಿ – ಈ ದಾರಿ' ಎಂಬ ಕವನದಲ್ಲಿ 'ಹಂಸಪಥ'ದ ಹೊಳಹನ್ನು ಕಾಣಬಹುದು; ಈ ಮಾತೂ ಅಲ್ಲಿ ಬಂದಿದೆ. ಬೇರೆಯ ಕೆಲವು ಕವನಗಳೂ ಆ ಕಡೆದೇ ದೃಷ್ಟಿ ಹಾಯಿಸಿವೆ. ಜೊತೆಗೆ ಹಂಸಪಥದಲ್ಲಿ ಸಾಗಿ ಹಂಸತ್ವವನ್ನು ಪಡೆದ ಅವತಾರ ಪುರುಷರನ್ನು ಹಾಡಿ ಹೊಗಳುವ ಕೈಂಕರ್ಯದ ಕವನಗಳೂ ಇವೆ. ಹೀಗೆ ಸಂದಿದೆ ಸಂಕಲನಕ್ಕೆ 'ಹಂಸಪಥ' ಎಂಬ ಹೆಸರು.

'ಹೊಸ ಕವನಗಳ ಸಂಕಲನವೊಂದನ್ನು ನಿಮಗೆ ಅರ್ಪಿಸಬೇಕೆಂದಿದ್ದೇನೆ' ಎಂದು ಡಾ॥ ವಿ. ಕೃ. ಗೋಕಾಕ ಅವರಿಗೆ–ಅವರು ಬೆಂಗಳೂರನ್ನು ಬಿಟ್ಟು ಸಿಮ್ಲಾಕ್ಕೆ ತೆರಳುವ ಮುನ್ನ–ತಿಳಿಸಿದಾಗ, 'ಅಗತ್ಯವಾಗಿ ಆಗಬಹುದು' ಎಂದು ಸಂತೋಷವಾಗಿ ಒಪ್ಪಿದರು. 'ಸಂಕಲನದ ಹೆಸರು ಏನು?' ಎಂದು ಕೇಳಿದರು. 'ಹೂ ಹಣ್ಣು ಎಲೆ ನೀರು' ಎಂದೆ. ಅವರ ಮಾಸದ ಮುಗುಳುನಗೆ ಒಪ್ಪಿಗೆ ನೀಡಿದಂತೆ ಕಂಡಿತು. ಆಗ ನಾನಿನ್ನೂ 'ಆ ದಾರಿ–ಈ ದಾರಿ' ಬರೆದಿರಲಿಲ್ಲ. 'ಹಂಸಪಥ'ದ ಸ್ವರೂಪವನ್ನು ಬಲ್ಲ ಅವರಿಗೆ ಈ ಹೆಸರೂ ಒಪ್ಪಿಗೆಯಾದೀತು ಎಂದು ಈಗ ನಂಬಿದ್ದೇನೆ. ಕಾವ್ಯ ಸಮರ್ಪಣೆಗೆ ಒಪ್ಪಿಕೊಂಡ ಡಾ॥ ಗೋಕಾಕರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ.

ಈ ಸಮರ್ಪಣೆ ಸುಲಭ. 'ಹೂ ಹಣ್ಣು ಎಲೆನೀರು'–ಈ ಸಮರ್ಪಣ ಭಾವದ ಸಾಧನೆ–ಸಿದ್ಧಿ, ಕಷ್ಟ. 'ಹೂ ಹಣ್ಣು ಎಲೆ ನೀರು' ('ಪತ್ರಂ ಪುಷ್ಪಂ ಫಲಂ ತೋಯಂ')

ಎಂಬ ಹೆಸರು ಈ ಒಂದು ಕೃತಿಗಲ್ಲ–ತನ್ನ ಎಲ್ಲ ಸಾಹಿತ್ಯ ಮತ್ತು ಸಾಹಿತ್ಯೇತರ ಕರ್ಮಗಳಿಗೂ 'ಲಾಭ ಪೂಜೆ ನೆಗಳಿಲ್ತೆ'ಗಳ ಹಂಗು ತೊರೆದು ಅನ್ವಯಿಸಿಕೊಳ್ಳುವ ಬುದ್ಧಿ ಬಂದಾಗ ಕವಿಗೆ ಕಾವ್ಯಸಿದ್ಧಿ, ಜೀವನಸಿದ್ಧಿ–ಹಂಸಪಥದಲ್ಲಿ ಅದು ಮೊದಲ ಹೆಜ್ಜೆ. ಅದಕ್ಕೆ ಭಗವತ್ಕೃಪೆಯಾಗಬೇಕು; ಅಲ್ಲಿಯವರೆಗೆ ಕಾಯಬೇಕು, ಬೇಯಬೇಕು.

ರಾಷ್ಟ್ರೀಯ ಕವಿ ಸಮ್ಮೇಳನದ ಪ್ರಸಾರಗಳಲ್ಲಿ ಬಿತ್ತರಗೊಂಡ ಕವನಗಳ ಜೊತೆಗೆ ಇನ್ನೂ ಕೆಲವು (ಕ್ರ.ಸಂ.೨, ೧೦, ೩೩, ೪೨, ೪೮, ೪೯, ೫೬, ೫೯, ೭೦) ಬಿತ್ತರಗೊಂಡಿವೆ. ಆಕಾಶವಾಣಿಯ ಉಪಕಾರಕ್ಕೆ ನಾನು ಕೃತಜ್ಞ.

ಅನೇಕ ಕವನಗಳು ಈ ಮೊದಲೆ ಪ್ರಬುದ್ಧ ಕರ್ಣಾಟಕ, ಜೀವನ, ರಾಷ್ಟ್ರಮತ, ಕನ್ನಡನುಡಿ, ವಿನೋದ, ಮುಂತಾದ ಪತ್ರಿಕೆಗಳಲ್ಲಿ ಆಗಾಗ ಬೆಳಕು ಕಂಡಿವೆ. ತಮ್ಮ ಪತ್ರಿಕೆಗಳಲ್ಲಿ ನನ್ನ ಕವಿತೆಗೆ ಎಡೆಕೊಟ್ಟ ಸಂಪಾದಕರುಗಳಿಗೂ, ಷೇಕ್ಸ್‌ಪಿಯರನ ಸಾನೆಟ್ಟುಗಳನ್ನು ಅನುವಾದ ಮಾಡಿಸಿ 'ಷೇಕ್ಸ್‌ಪಿಯರನಿಗೆ ನಮಸ್ಕಾರ' ಗ್ರಂಥದಲ್ಲಿ ಪ್ರಕಟಿಸಿದ ಗೆಳೆಯರು ಶ್ರೀ ಶಾ. ಬಾಲೂರಾಯರಿಗೂ ನನ್ನ ಕೃತಜ್ಞತೆ ಸಲ್ಲುತ್ತಿದೆ.

ಲಿಪಿ ಮುದ್ರಣದವರು ಈ ಪುಸ್ತಕವನ್ನು ಚೆಲುವಾಗಿ ಅಚ್ಚುಮಾಡಿ ಕೊಟ್ಟಿದ್ದಾರೆ. ಅದರ ಒಡೆಯರೂ ಕಾವ್ಯಾಭಿಮಾನಿಗಳೂ ಕಲಾವಂತರೂ ಆದ ಶ್ರೀ ಬಾಲಕೃಷ್ಣ ಅವರು ತಮ್ಮ ಅರ್ಥಪೂರ್ಣ ಹೊದಿಕೆಯ ಚಿತ್ರದಿಂದ ಪುಸ್ತಕವನ್ನು ಚೆಂದಗೊಳಿಸಿದ್ದಾರೆ. ಇವರಿಗೆ ನನ್ನ ವಂದನೆಗಳು.

೧೫–೧೨–೧೯೭೧ ಮೈವೆಂಶೀ 'ರಾಘವ'
ಬೆಂಗಳೂರು

## ಶರತ್
## ಶಾರದೆಗೆ

ತನ್ನ ಜಡತನವೆಲ್ಲವನು ಕೊಡಹಿಕೊಂಡೆದ್ದು
ವರ್ಷಧಾರಾಸ್ನಾತೆಪೂತೆಯಾಗಿ
ಮೈತುಂಬ ಹಸರುಟ್ಟು ತಲೆತುಂಬ ಹೂಮುಡಿದು
ಬೆಳ್‌ನಗೆಯ ಬೆಳಕನ್ನು ಸುತ್ತ ಚೆಲ್ಲಿ
ಸಂಜೆಯೋಕುಳಿ ಮುತ್ತಿನಾರತಿಯನಣಿಗೈದು
ಲಕ್ಷದೀಪವನಿರುಳು ಹೊತ್ತಿಸಿಟ್ಟು
ಮುಂಬರುವ ಸುಗ್ಗಿನ್ಯೆವೇದ್ಯ ಮೀಸಲೊಳಿರಿಸಿ
ಸ್ನಾನಪಾನಕ್ಕೆ ಸರಸಿಗಳ ತಿಳಿಸಿ
ಮಡಿಯುಡಲು ಚಾರುಚಂದ್ರಿಕೆಯ ಚೀರವ ತರಿಸಿ
ತೊಡಲು ಪುಷ್ಪಾಭರಣವನ್ನು ರಚಿಸಿ
ಮುಗಿಲ ಬೆಳ್‌ದಾವರೆಯ ಬೆಳ್ಳಿ ಪೀಠವನಿರಿಸಿ
ಹಕ್ಕಿಯಿಂಚರ–ವೀಣೆ ಶ್ರುತಿಮಾಡಿಸಿ
ತಾರೆ ಸಾವಿರಗಣ್ಣ ಜಾಗರದ ನವಿಲನ್ನು
ಬೆಳ್ದಿಂಗಳುತ್ಸವಕೆ ಬರಿಸಿ ನಿಲಿಸಿ
ಹಿರಿಮಗಳು ಮೃಣ್ಮಯೀ ಪೃಥ್ವಿ ನಿಂದಿಹಳಿದೋ
ನಿನ್ನ ಪೂಜಿಸಿ ಪಡೆಯೆ ಚಿತ್‌ತೇಜವ;
ಅವಳ ಮಕ್ಕಳು ನಾವು ಜೊತೆಗೂಡಿ ಕರೆಯುವೆವು:
ಬಾ, ಶರತ್ ಶಾರದೆ, ಬ್ರಹ್ಮನರಸಿ;
ದಿವವೆ ತಾನಾಗಿಹುದು ಧವಳಿಮಾವೃತ ಧರಣಿ,
ಬಾ, ಶರತ್ ಶಾರದೆ, ಸರ್ವಶುಕ್ಲೆ;
ಬಹಿರಂಗ ಶುಭ್ರತೆಯ ಬಾಗಿಲೊಳು ನೀ ಬಂದು
ಅಂತರಂಗವ ಬೆಳಗು ಶುಭ್ರವಸನೆ;
ವಾಣಿಯಾಗಲ್ಲೊಲಿದು ವಾಗ್‌ವಿಲಾಸವ ನೀಡು
ವಾಕ್‌ಪೀಠ ನಿನಗಾಗೆ ನನ್ನ ರಸನೆ.

೬–೧೦–೧೯೫೯]

# ಮನೆಯ ದೀಪ

ಆರಿಸದಿರು ದೀಪವ,
ಮನೆಯ ದೀಪವ;
ಬೀರುತಿರಲಿ ತೋರುಬೆಳಕ
ಮನೆ ನಿಂತಿಹ ತನಕ.
ಸೊಡರ ದೀಪ, ಬೆಳಕಲ್ಪ,
ಎಂದೇತಕೆ ಕೀಳೆಣಿಕೆ?
ಮನೆಯೊಳಗನೆ ಬೆಳಗಿದರೂ
ಸಾರ್ಥಕ ತಾನುರಿದುದಕೆ.
ಸೂರ್ಯನೆಷ್ಟೆ ಪ್ರಜ್ವಲಿಸಲಿ
ವಿಶ್ವವನ್ನೆ ಬೆಳಗಲಿ,
ಊಳಿಗತನ ಸೊಡರ ಪಾಲು
ಗುಡಿಸಿಲ ಕತ್ತಲೆಯಲಿ.
ಗುಡಿಸಿಲಾಚೆ ಕಿರಿದು ದೂರ
ಅದರ ಬೆಳಕು ಕಾಣಲು
ಬಡ ದಾರಿಗ ಪಡೆವನಲಾ
ನೆರವು ದಾರಿ ಸವೆಸಲು?
ಹೊತ್ತಿಕೊಳಲಿ ಸೊಡರು ನೂರು
ನಿನ್ನ ಮನೆಯ ದೀಪದೆ:
ಕತ್ತಲಳಿವ ಬೆಳಕು ಬೆಳಗೆ
ಬಿತ್ತು ನಿನ್ನ ಸೊಡರದೆ.
ಕೆಟ್ಟ ಗಾಳಿ ಬೀಸದಂತೆ
ದೀಪಕೊಡ್ಡು ಮರೆಯನು;
ಕಿಟ್ಟಗಟ್ಟದಂತೆ ಮಿಡಿದು
ತೆಗೆ ಬತ್ತಿಯ ಕರಿಕನು;
ಎಣ್ಣೆ ಮುಗಿಯೆ ಎಣ್ಣೆ ಹಾಕು,
ಬತ್ತಿಯುರಿಯೆ ಬತ್ತಿಯ;
ಸಣ್ಣಗಾಗೆ ಮೀಟಿ, ಬೆಳಗು

ದೀಪದ ಕುಡಿನೆತ್ತಿಯು.
ಬೀಸಿ ಬರಲು ಬಿರುಗಾಳಿ
ಆರಿದರದು ಆರಲಿ;
ನೀನಾಗಿಯೆ ಆರಿಸದಿರು
ನಿನ್ನ ಮನೆಯ ದೀಪವ.

೧೦-೧೨-೧೯೫೯]

## ಒಳದನಿ

ಜಾತಿಮತಗಳ ಹೊದಿಕೆಯನು ತೆಗೆದು ಹರಿದು
ಕುಲಗೋತ್ರವೆಂಬ ಹುಸಿ ಹೆಸರ ಕಿತ್ತೊಗೆದು
ಪ್ರೀತಿಗೆಲ್ಲರು ಒಂದೆ ಎಂಬುದನು ಅರಿದು
ಬಳಗ ಬಂಧುಗಳೆಂಬ ಭಾವನೆಯ ತೆಗೆದು
ಮಾತೆಯೊಬ್ಬಳ ಮುಂದೆ ಭೇದವನು ಮರೆದು
ಬಾಳು ಧರ್ಮದಲೆಂಬ ದನಿಯ ಕೇಳಿದೆನು:
ಹೃದಯದೊಳದನಿಯು ಅದು, ದಿವ್ಯ ದನಿಯು.
ಕೇಳಿದಂತೆಯೆ ನಡೆಯೆ, ಎಲ್ಲವನು ತೊರೆದು,
ಎದೆಯಿಲ್ಲ, ಎದೆಯಿಲ್ಲ, ಸುಮ್ಮನಿಹೆನು.
ಹಾಳಾದ ಈ ಹುಟ್ಟು-ಕಬ್ಬಿಣದ ಕಟ್ಟು:
ಅದ ಮುರಿದು ಬಿಸುಡುವೆನು, ಎಲ್ಲವನು ಸುಟ್ಟು;
ನಡೆಯಿಸೆನ್ನನು ದೇವ ಶಕ್ತಿಯನು ಕೊಟ್ಟು.

ಜುಲೈ ೧೯೩೧]

## ನೀನು–ನಾನು

ನಾ ಕೊಳಲು,
ನೀನುಸಿರು;
ನಾನೊಡಲು,
ನೀ ಪ್ರಾಣ.
ನಾ ಕುಸುಮ,
ನೀ ಗಂಧ;
ನನ್ನವಡಿ,
ನೀ ಛಂದ.
ನಾ ಸೊಡರು,
ನೀ ದೀಪ;
ನಾನು ಪಶು,
ನೀ ಮಡಿಲು;
ನಾನು ನದಿ,
ನೀ ಕಡಲು.
ನಿನ್ನಿಂದ
ನನ್ನ ಬೆಲೆ,
ನಿನ್ನಲ್ಲೆ
ನನ್ನ ಸೆಲೆ.
ನೀನಲ್ಲ–
ದೇನಿಲ್ಲ;
ನಾನಲ್ಲ–
ದೆಲ್ಲ ನೀ.

೧೮–೯–೧೯೫೨]

## ಹೆಣ್ಣ ಕಾಣುವ ಕಣ್ಣು

ಕಾಮಾಗ್ನಿ ಕೆರಳಿ ಸಾವಿರ ನಾಲಗೆಯ ಚಾಚಿ
ಸಿಕ್ಕಿದಿಂಧನ ಕೊಂಡು ನೊಣೆಯೆ ಹಾತೊರೆಯುತಿರೆ
ಸಾಕೆ ಕಾಮಿಗೆ ಸಾವಿರದ ಒಂದು ಹೆಣ್ಣು?
ಕಾಮದುರಿ ತನ್ನನ್ನೇ ಕಡೆಗೆ ಸುಟ್ಟುರಿಪದಿರೆ,
ಬೇಕು: ಹೆಂಗಳನೆಲ್ಲ ತನಗೆ ಹಾಲೂಡಿಸಿದ
ತಾಯಿಯಂತೆಯೆ ಕಾಂಬ ತಳಿವ ಕಣ್ಣು.

೧೬-೯-೧೯೪೮]

## ಕೈಗೋಲು

ಕುರುಡನಂತೆ ಬಾಳ ದಾರಿ
ನಡೆಯುತಿದ್ದೆನು;
ಶ್ರದ್ಧೆಯೂರೆಗೋಲದುಡಿಯೆ
ಕೆಳಗೆ ಬಿದ್ದೆನು:

ಬಿದ್ದೆಡೆಯೊಳೆ ಬಿದ್ದಿರುವೆನು,
ನಡೆಯಲಾರೆನು;
ಎದ್ದರೇನು? ಮುರಿದ ಕೋಲ
ಪಡೆಯಲಾರೆನು.

ದಾರಿಹೋಕರೆನಿತೊ ಮಂದಿ,
ಜೊತೆಗೆ ಬಾರರು:
ಪಾಪ! ಮುರಿದ ಕೋಲ ಕೈಗೆ
ಈಯಲಾರರು;

ಒಬ್ಬ ಮರುಗುನುಡಿಯನಾಡಿ
  ಮುಂದೆ ನಡೆವನು;
ಒಬ್ಬನಿನಿತು ದೂರ ನೆರವ
  ಕೈಯ ಕೊಡುವನು.

ಅಂತು ಇಂತು ಬಿದ್ದೆಡೆಯಲೆ
  ಬಿದ್ದು ನರಳುವೆ:
ನೆರವಿನ ಕೈ ವಿಡಿಯಲತ್ತ
  ಇತ್ತ ಹೊರಳುವೆ.

ಹಣದ ಆಸೆ, ಒಲುಮೆವೆಣ್ಣ
  ಪಡೆವ ಹಂಬಲು,
ಜನದ ಮೆಚ್ಚು ಪಡೆವ ಹುಚ್ಚು
  ಮನವ ತುಂಬಲು;

ಕಿರಿಯ ಗುರಿಯ ಸಾಧನೆಯಲಿ
  ಶ್ರದ್ಧೆಯಿಟ್ಟೆನು;
ಸೋಲೊ ಗೆಲವೊ, ಮುಂದೆ ನಡೆವ
ಛಲವ ತೊಟ್ಟೆನು.

ಸಾಗರವನೆ ಕುಡಿಯಬಯಸಿ
  ಹನಿಯ ಕುಡಿದೆನು;
ಸೂರ್ಯನನ್ನೆ ಹಿಡಿಯಬಯಸಿ
  ಸೊಡರ ಹಿಡಿದೆನು.

ನನ್ನ ಬಲದ ಮಿತಿಯ ಮರೆತು
  ನುಗ್ಗಿ ಸಾಗಿದೆ;
ನಿನ್ನ ಕೃಪೆಯ ಬೆಂಬಲವನೆ
  ಮರೆತು ಬೀಗಿದೆ.

ಬಲವು ಕುಗ್ಗಿ, ಛಲವು ತಗ್ಗಿ,
ಶ್ರದ್ಧೆ ಮುರಿಯಿತು;
ಸೋಲಿನ ಕಗ್ಗತ್ತಲೆಯೇ
ತುಂಬಿ ಹರಿಯಿತು.

ಇದುತನಕಜ್ಞತೆಯಲ್ಲಿಯೆ
ನಿನ್ನ ಮರೆತೆನು;
ಇರುಳುತಾರೆಯಂತೆ ನಿನ್ನ-
ನಿಂದು ಅರಿತೆನು.

ಮುರಿದರೆ ಮುರಿದರೆ ಮುರಿಯಲಿ ಆ ಹುಸಿ
ಹಮ್ಮಿನ ಕೈಲು;
ಅವರಿವರಾ ಕೈನೆರವನಿ
ನೆಚ್ಚಿಕೆ ಪೋಲು.

ಹೊಸ ಶ್ರದ್ಧೆಯ ಕೈಗೋಲನು
ನೀಡು ದೇವನೆ:
ಬೆಳೆಯಲಿ ನಿನ್ನನು ನೆಚ್ಚುವ
ದಿವ್ಯ ಭಾವನೆ.

೨೮-೭-೧೯೪೮]

## ನೆರೆಮನೆಯ ಕುಸುಮ

ನೆರೆಯ ಮನೆಯಂಗಳದ ಮಲ್ಲಿಕಾ ಕುಸುಮವದು;
ಅದ ಕೊಯ್ದು ಪಿಡಿಯಲೇಕೆಳಸುತಿರುವೆ?
ಇದೊ, ವಸಂತದ ಗಾಳಿ ಅದರ ಕಂಪನು ಕೊಂಡು
ತಂದೀಯುತಿದೆ; ಏಕೆ ಹೂವ ಬಯಕೆ?

ಏಪ್ರಿಲ್ ೧೯೪೦]

# ನಾ ತಾಯಿ ಸಾಕಿರುವ ಬಂಟ ಬಡಕಲ ಕಾವಲನಾಯಿ

ಇದು ನನ್ನ ಜನ್ಮಭೂಮಿ, ಈ ನನ್ನ ಕಾಲೇಜು–
ಆಯ್ತಿಲ್ಲಿ ಮರುಹುಟ್ಟು, ಕನ್ನಡವ ಕಲಿಸಿ ಕಲಿಯುವ ದೀಕ್ಷೆತೊಟ್ಟು.
ನನಗಾಗಿ ತಂಗಿದಳು ತಾಯಿಯಲ್ಲಿ:
ಎರಡು ದಶಕದ ಕಾಲ ಅನ್ನವಿಡಿಸಿದಳು.
ಜೀರ್ಣ ದೇಹದ ಗೇಹ! ಇಟ್ಟರಾರೋ ಹಣತೆ,
ಹೆರರು ಹಾಕಿದ ಬತ್ತಿ, ಗುರುಕರುಣೆ ತೈಲ;
ತನ್ನ ತೇಜದ ಕಿಡಿಯ ಮುಡಿಸಿದಳು ಹಣತೆಬತ್ತಿಯ ಕುಡಿಗೆ,
          ನಾನು ಕಲಿಸುವ ನುಡಿಗೆ;
ಇನ್ನು ಕತ್ತಲೆಯೆಲ್ಲಿ ನಾ ಕಟ್ಟಹೊರಟ ಗುಡಿಗೆ?
ಕಿರಿಯರೆನಿತೋ ಮಂದಿ ನೆರೆಯೆ ನಾ ಕರೆಯೆ–
ಜೊತೆಯವರು ನೆರವುನೇಹವನೆರೆಯೆ–
ಅಭಿಮಾನವಡಿಪಾಯ, ಒಲವು ಕಲ್ಲಿನ ಗೋಡೆ,
ನುಡಿಹುಚ್ಚು ಗಾರೆಗಚ್ಚು–
ನಡುವೆ ತಾಯಿಯ ಗುಡಿ, ಸುತ್ತ ಕಾಪಿನ ಕೋಟೆ;
ಕೆಲಸವರೆಬರೆ, ದಿಟ: ಏಕೆ ನಾವೇ ಮುಗಿಸಬೇಕೆಂಬ ಹುಲು ಹಟ?
ತಾಯ್‌ಬಂದು ನೆಲಸಾಯ್ತು, ಕಲಿಸಾಯ್ತು
          ಪೂಜೆಯೋಜೆಯ ಬಂದ ಮಕ್ಕಳಿಗೆ–
ನಿತ್ಯ ಪೂಜೆಗೆ ನಾಲ್ಕು ಹೂಬಿಡುವ ನಿತ್ಯಮಲ್ಲಿಗೆ
          ನೆಲದಿ ಬೇರುಕಚ್ಚಿಹುದು–
ನೀರೆರೆವ ಪುಣ್ಯ ಮಕ್ಕಳ ಹರಿಬ, ತಂದೆ ಕೋಲನು ಹಿಡಿಯೆ.
ಯಾರಾದರೂ ಬರಲಿ, ಗುಡಿಕೆಲಸ ಮುಗಿಯಲಿ.
          ಇಡಲಿ ಹೊನ್ನಿನ ಕಳಶ;
          ನನಗೆ ಹರುಷ.
ನಗುತಿರಲಿ ನಗುತಿರಲಿ ನಿತ್ಯ ತಾಯಿ–
ದೂರದಲ್ಲಿಯೆ ಕುಳಿತು ಅವಳ ತಂಟೆಗೆ ಹಬಹರನಟ್ಟುವೆನು:
ತ್ರಾಣವಿಲ್ಲದ ಮೈಗೆ ಉಂಟು ಬಗುಳುವ ಬಾಯಿ,
ನಾ ತಾಯಿ ಸಾಕಿರುವ ಬಂಟ ಬಡಕಲ ಕಾವಲ ನಾಯಿ.

೪–೪–೧೯೬೮

## ಆಶ್ರಯ

ಚೆಲು ಗುಲಾಬಿಯೆ, ಹೋಗು, ಮಿಗಿಲು ಚೆಲುವಾದವಳ
ಎದೆಯನಾಶ್ರಯಿಸು;
ಅವಳ ಬಲುವೊಲಿದಾತನೆಂದಿಗೂ ತಾನಲ್ಲಿ
ಇರಲಿಲ್ಲವೆಂದು ತಿಳಿಸು.

೧೪-೫-೧೯೬೮] [ಮೂಲ : Belloc

## ಮಡದಿಗೊಂದು ಮಾತು

ಇರಲಿ ಬಿಡು ಹರುಕು ಸೀರೆ
ಹರುಕಿಲ್ಲದುದಾವುದು?
ಕೊರಗಬೇಡ ಮೈ ಕಂಡರೆ
ಹಬ್ಬ ನ್ನ ಕಣ್ಣಿಗದು.

ಮೇಲೆ ನೋಡು ಗಗನಾಂಗನೆ
ಉಟ್ಟ ಸೀರೆ ಹರುಹರುಕು;
ನೀಲಾಂಬರಿಯವಳಿಗದೇ
ಶ್ವೇತಾಂಬರ ಬಲು ಸೊಗಸು!

ದಾಳಿಂಬೆಯ ಚೆಲುವುಕಣ್ಣು
ಕೆಂಪುನಗುವ ತುಟಿ ಬಿರುಕು;
ಸೀಳು ಬಾಳೆಗಿಡದ ಎಲೆ
ಗಾಳಿಯೊಡನೆ ಕೆಳೆ ಚುರುಕು.

ಸೋಗೆ ನವಿಲ ಬಣ್ಣ-ಕಣ್ಣ
ಬೀಸಣಿಗೆ ಹರುಕು;
ಮಾಗಿಯ ಮೈಬಡತನದಲಿ
ಗಿಡಮರ ಹರುಮುರುಕು.

ಇರಲಿ ಬಿಡು ಹರುಕು ಸೀರೆ
ಬಿಡು ನಾಚಿಕೆ, ನೀರೆ.
ಗರತಿ ನೀನು–ಮನೆಯೊಳಗಿರೆ
ಭಯವೆ ನಾನು ಬಳಸಾರ?

ಡಿಸೆಂಬರ್ ೧೯೫೮]

## ಹುಚ್ಚೆಳ್ಳ ಹೊಲದಾಗೆ

ಹುಚ್ಚೆಳ್ಳ ಹೊಲದಾಗೆ ಹುಚ್ಚನೆ ಹೂವಾದ್ವೆ
ಅಚ್ಚುಮೆಚ್ಚಿನ ಹುಡುಗಿಯನು
ಅಚ್ಚಮಲ್ಲಿಗೆ ಬೆಡಗಿಯನು
ಮೆಚ್ಚಿ ಕಾಣುತ್ತಲ್ ಹುಚ್ಚನ್ಹಾ ಹೋದನು
ಹೊಲದ ಗೇಮೇಲಿದ್ದ ಹೈದ
ಕೆಸವ ಬಿಟ್ಟಲ್ಲೆ ಸುಯ್ದು.

ಹುಚ್ಚೆಳ್ಳ ಹೂಕೊಯ್ದು ಹುಚ್ಚು ಕಟ್ಟುತ ಬಂದು
ಹುಡುಗಿಯ ಮುಂಗಡೆ ಹಿಡಿದ
ತಡತಡವರಿಸುತ ನುಡಿದ:
'ಇಚ್ಚೆಯಾಯ್ತು ಹೆಣ್ಣೆ ಮೆಚ್ಚಿಕೊಂಡೆ ನಿನ್ನ
ನಾ ಕುಯ್ದ ಹೂವ–ಮುಡಿದೀಯ.
ಬೇಕಾದ್ರೆ ಕೈಯ–ಹಿಡಿದೀಯಾ?'

'ಹುಚ್ಚೆಳ್ಳ ಹೂವಂತೆ ಹುಚ್ಚುಮುರುವ ಹೋಗು
ಕೆಂಪಿನ ಬಿಲ್ಲೆ–ತಂದೀಯ,
ಅಯ್ಯನ ಕೇಳೂಕೆ ಬಂದೀಯ?
ಮುಚ್ಚುಮಾರ್ಯಾತಕ್ಕೆ ನೆಚ್ಚಿಕೊ ಈ ಮಾತ–
ಬಿಲ್ಲೆಯ ತಂದರೆ ಮುಡಿದೇನು
ಸುಳ್ಳಾಡ್ದೆ ಕೈಯ ಹಿಡಿದೇನು.'

ಚುಚ್ಚುವ ಮಾತನು ಕೇಳಿದ ಹೈದನು
ಹೆಣ್ಣಿನಾಸೆಯ ತಾನು ಬಿಟ್ಟಾನು
ನಿಲ್ಲದೆ ಹೆಜ್ಜೆಯನಿಟ್ಟಾನು.
ಹುಚ್ಚೆಳ್ಳ ಹೂವೆಲ್ಲ ಹುಚ್ಚೆದ್ದು ನಕ್ಕವು:
'ಹೆಣ್ಣಿಗೆ ಕೊಟ್ಟರೆ ಹೊಸ್ಕೊಡವೆ,
ಕಣ್ಮುಚ್ಚಿಕೊಂಡವಳು ನಿಸ್ಕೊಡವೆ?'

೧೪-೧೨-೫೯]

## ಹೊಂದಿಕೆ

ಪರ್ವತವು ಮಹಮದನ ಬಳಿಗೆ ಬರಲಾಗದಿರೆ
ಮಹಮದನೆ ಪರ್ವತನ ಸಾರಬೇಕು;
ಸರ್ಪವೂ ನಮ್ಮ ಮೂಗಿನ ನೇರ ನಡೆಯುವವೆ?
ನೂರು ನೇರಕೆ ಮೂಗ ತಿರುವಬೇಕು.

೧೯೬೮]

## ಬೆಲೆ

ಓ ಪಕ್ಷಿ, ಓ ಪಕ್ಷಿ! ನೋಡು ಆ ಹಣ್ಣ!
ನಿನ್ನ ಕಣ್ಣಿಗೆ ಅದರ ಬಣ್ಣ ಬಣ್ಣ
ಸೊಗಸಿಹುದು; ಸುತ್ತಲೂ ಮುಳ್ಳಪೊದೆ; ರಕ್ತ ಬೆಲ
ತೆತ್ತು ಸವಿ, ಇಲ್ಲವೋ ಮುಚ್ಚು ಕಣ್ಣ!

## ನಿಜವಾದ ಒಲವು

ಒಲಿದು ಕದಲದ ಮನಸ್ಸುಗಳ ಸಂಲಗ್ನಕ್ಕೆ
ವಿಘ್ನ ಬರಗೊಡೆನು. ಒಲವು ಒಲವೇ ಅಲ್ಲ
ಮಾರ್ಪಾಡು ಹೊಂದಲದು ಮಾರ್ಪಡಲು ಅನು ದೊರಕ್ಕೆ,

ಒಯ್ಯಬಂದವನೊಡನೆ ಮಣಿದು ದೂರಕೆ ಸರಿಯೆ, ಅಲ್ಲ;
ಅಲ್ಲವೇ ಅಲ್ಲ! ಬಿರುಗಾಳಿಗಳ ಎದುರಿನಲಿ
ಎಂದಿಗೂ ಅಲುಗದದು, ನಿತ್ಯನಿಶ್ಚಲ ಚಿಹ್ನ;
ಕಡಲಲೆವ ಎಲ್ಲ ನೌಕೆಗು ತಾರೆ, ಅಳೆದಿರಲಿ
ಅದರ ಉನ್ನತಿ, ಅರಿವೆವೇನದರ ಒಲವನ್ನ?
ಒಲವು ಕಾಲನು ನಗುವ ಮಂಕಲ್ಲ, ಕೆಂಪು ತುಟಿ
ಕೆನ್ನೆಗಳು ಅವನ ಕುಡುಗೋಲ ಕುಯ್ಲಿಗೆ ಬಲಿ;
ಒಲವು ಮಾರ್ಪಡದವನ ಲಘು ಗಂಟೆ ವಾರಗಳು ಮುಟ್ಟಿ,
ನಾಶದಂಚನು ಸೋಕಿಯೂ ಸ್ಥಿರವು ತಾನಲ್ಲಿ:
ತಪ್ಪಾದರಿದು, ಅಂತು ತೋರಿಸಿದರೆನಗೆಲ್ಲ,
ನನ್ನ ನುಡಿ ಸಲ್ಲ; ಒಲಿದಾತನಾರೂ ಇಲ್ಲ.

೧೯೬೬]

(ಷೇಕ್ಸ್‌ಪಿಯರ್ ಮಹಾಕವಿಯ ಸಾನೆಟ್ ಒಂದರ ಅನುವಾದ)

## ವಲ್ಲಭೆಯ ಕಂಗಳು

ನನ್ನ ವಲ್ಲಭೆಯ ಕಂಗಳು ಸೂರ್ಯನಂತಿಲ್ಲ;
ಅವಳ ತುಟಿಗೆಂಪಿಗಿಂತಲು ಕೆಂಪು ಕೆಂಬವಳ;
ಹಿಮಬಿಳುಪು, ಬೂದುಮಾಸಲು ಅವಳ ಕುಚವೆಲ್ಲ;
ಕುರುಳು ತಂತಿಯೆನೆ, ಕರಿತಂತಿ ತಲೆಬೆಳಸವಳ.
ನೋಡಿಹೆನು ರೇಷ್ಮೆನುಣುಪಿನ ಕೆಂಪು ಬಿಳಿ ಗುಲಾಬಿಗಳ.
ಕಾಣೆನಂತಹ ಗುಲಾಬಿಯನವಳ ಕೆನ್ನೆಯಲಿ;
ನನ್ನ ಪ್ರಾಣೇಶ್ವರಿಯ ಉಸಿರಿಗಿಂತಲು ಬಹಳ
ಮಿಗಿಲಿನಾನಂದವಿದೆ ಕೆಲವು ಪರಿಮಳಗಳಲಿ;
ಅವಳ ನುಡಿ ಕೇಳಲೆನಗಿಷ್ಟ, ಆದರೆ ನಾನು
ಬಲ್ಲೆ ಸಂಗೀತಕಿದೆ ಮಿಗಿಲಾದ ಇಂಪುದನಿ;
ನಡೆತಂದೆ ದೇವತೆಯ ನಾ ಕಾಣೆ, ಒಪ್ಪುವೆನು!
ನಡೆವಾಗ, ನೆಲದ ಮೇಲೆಯ ನಡೆವಳೆನ್ನ ರಾಣಿ:

ಆದರೂ, ನನ್ನಿನಿಯೆ ಬಹು ವಿರಳ, ದೇವರಾಣೆ;
ಹುಸಿ ಹೋಲಿಕೆಗಳ ಹುಸಿಗೈದಳಿಗೆ ಎಣೆಯ ಕಾಣೆ.

೧೯೬೬]

(ಷೇಕ್ಸ್‌ಪಿಯರ್ ಮಹಾಕವಿಯ ಸಾನೆಟ್ ಒಂದರ ಅನುವಾದ.)

## ಒಂದು ಚಿಟ್ಟೆಗೆ

ಮೋಡಗಳು ಕವಿದಿಹುವು, ಆಗಸದಿ ರವಿಯಿಲ್ಲ.
ಎಲ್ಲಿ ನೋಡಿದರಲ್ಲಿ ಮಬ್ಬಿರುವುದು;
ಮಳೆಯು ಬರುವಂತುಹುದು, ನೀನೇಕೆ ಹಾರುತಿಹೆ,
ಏಕೆ ಬಲು ಕಷ್ಟದಲಿ ಹಾರುತಿರುವೆ?

ನೀನೇಕೆ ಒಂಟಿಯಲಿ ಇಲ್ಲಿ ಹಾರುತ್ತಿರುವೆ,
ಕುಳಿತುಕೊಳ್ಳಲು ಒಂದು ಕುಸುಮವಿಲ್ಲ;
ಹಾರಿ ಬಲು ನಲಿವುದಕೆ ಬಿಸಿಲು ಮೊದಲೇ ಇಲ್ಲ,
ಮಬ್ಬಿನಲಿ ಹಾರುವುದಕೇಕೆ ಬಂದೆ?

ನಿನ್ನ ರೆಕ್ಕೆಗಳೆರಡು ನೋಡುವುದಕತಿ ಚಂದ,
ಕಣ್ಣೆರಡು ಸಾಲದವುಗಳ ನೋಡಲು;
ಬಗೆಬಗೆಯ ಬಣ್ಣವನು ಬಗೆಬಗೆಯ ಚಿತ್ರವನು
ತೋರುವಾ ರೆಕ್ಕೆಯನು ನಲುಗಿಸುವೆಯಾ?

ನಿನ್ನ ಬಣ್ಣವ ನೋಡಿ ಆನಂದವನು ಪಡೆವ
ನಿನ್ನ ನೊಬಗನು ನೋಡೆ ನೆರೆ ನಲಿಯುವ
ಮಕ್ಕಳೆಲ್ಲರು ಬಲಿಯ ಚಳಿಗಂಜಿ ಒಳಗಿಹರು,
ನೀನೇಕೆ ಚಳಿಯಲ್ಲಿ ಹಾರುತಿರುವೆ?

ಮೋಡಗಳು ಕವಿದಿಹುವು, ಆಗಸದಿ ರವಿಯಿಲ್ಲ,
ಎಲ್ಲಿ ನೋಡಿದರಲ್ಲಿ ಮಬ್ಬಿರುವುದು;

ಮಳೆಯು ಬರುವಂತಿಹುದು, ನೀನೇಕೆ ಹಾರುತಿಹೆ,
ಏಕೆ ಬಲು ಕಷ್ಟದಲಿ ಹಾರುತಿರುವೆ?

೨೬-೮-೧೯೨೮]
(ಇದು ನನ್ನ ಮೊತ್ತಮೊದಲಿನ ಸ್ವತಂತ್ರ ಕವನ. ಈ ವರೆಗೆ ಅಪ್ರಕಟಿತ. ದಾಖಲೆ ಇರಲಿ ಎಂದು ಪ್ರಕಟವಾಗುತ್ತಿದೆ.)

## ಕಾಣದ ಕಡಲು

'ಸ್ನೇಹಿತನೆ ಬಾ ಒಡನೆ, ಕಡಲನ್ನು ತೋರಿಸುವೆ'–
ಎಂದೆನ್ನ ಪ್ರಿಯಮಿತ್ರ ಕರೆಯಲಂದು;
ಕಡಲಿನೊಳಗೇನಿಹುದು, ಬರಿಯ ನೀರಿನ ರಾಶಿ–
ಎಂದೆನುತ ಮನದಲ್ಲಿ ಸುಮ್ಮನಾದೆ.

ಆದರೂ ಕಾದಿಹ ಕಡಲಂದು ಮನದಲ್ಲಿ
ತೆರೆಗೈಗಳಿಂದೆನ್ನ ಕರೆಯುತಿರಲು–
ಕಾಣದಿಹ ಕಡಲನ್ನು ಕಂಡೆನಾ ಕನಸಿನಲಿ,
ಕಾಣುತಲೆ ಕನಸಿನಲಿ ಕುಣಿದಾಡಿದೆ.

ಕ್ಷಣದಲ್ಲಿ ಹೃದಯ ತಾ ಕಲಕಿದುದು ಕಡಲಂತೆ–
ಕಲ್ಪನೆಯ ತೆರೆಗಳವು ಉಬ್ಬಿದುವು ಮೊರೆದು.
ಕಲ್ಪನೆಯ ಕಡಲಂದು ಕುಣಿಕುಣಿದು ಹೃದಯದಲಿ,
ತರತರದ ಗಾನವನ್ನು ಪಾಡಿತಲ್ಲಿ.

ಕಲ್ಪನೆಗೆ ಕಣ್ಣಿಲ್ಲ; ಬಾನಿಂಗೆ ಬಣ್ಣಿಲ್ಲ;–
ಕಲ್ಪನೆಯ ಕಡಲೊಂದ ಕಂಡೆ ನಾನು.
ಕಲ್ಪನೆಯ ಕಡಲೊಂದ ಮನಸಿನಲಿ ಚಿತ್ರಿಸಿದೆ,
ಕಾಣದಿಹ ಕಡಲನ್ನು ಚಿತ್ರಿಸಿದೆನು.

ನಾ ಚಿತ್ರಿಸಿದ ಕಡಲು ಮೊರೆಮೊರೆದು ಕುಣಿಕುಣಿದು
ನೀಳ್ದರೆಯ ತೋಳ್ಗಳಿಂದೆನ್ನನಪ್ಪಿ
ಮುಳುಗಿಸುತ ತೇಲಿಸುತ ಉರುಳುರುಳಿ ಬರುತಿರಲು
ಹೃದಯವದು ಹಡಗಾಗಿ ತೇಲುತಿತ್ತು.

ದಡವ ಕಾಣದೆ ನಾನು ಅಂತಲ್ಲಿ ತೊಳಲುತಿರೆ
ಪೆರ್ದೆರೆಗಳುರುಳುರುಳಿ ಬಂದುವಾಗ;
ಬಂದೆನ್ನ ದಡಕೊಯ್ದು ಮರಳಮೆಲ್ಮಲಗಿಸಿತು–
ಕಣ್ದೆರೆಯೆ ಕಾಣದಾ ಕಡಲಿಲ್ಲವು.

* * *

ಎಲೆ ಕಡಲೆ, ಎಂತಿರುವೆ? ನಾ ಕಂಡ ತೆರದಲ್ಲಿ
ಕೋಪದಲಿ ಕೂಗುತ್ತ ಮೊರೆಯುತಿಹೆಯ?
ಇಲ್ಲದಿರೆ, ನೊರೆದೆರೆಗಳಿಂ ನಗುತ ನಲ್ಮೆಯಿಂ
ಶಾಂತಿಗಾಗರವಾಗಿ ಮರೆಯುತಿಹೆಯ?

ಎಂತಾದರೂ ಇರಲಿ, ನೀನೆನ್ನ ಕರೆಯುತಿಹೆ,
ಬಾರೆಂದು ಮೊರೆಮೊರೆದು ಕೂಗಿ ಕರೆವೆ.
ನಿನ್ನಿರವು ಕಾಣುತಿದೆ, ನಿನ್ನ ದನಿ ಕೇಳುತಿದೆ.
ಆದರೂ ನಿನ್ನ ನಾ ಕಂಡರಿಯೆನು.

ನಿನ್ನೆಡೆಗೆ ಹರಿದು ಬರಲೊಂದು ನದಿ ನಾನಲ್ಲ,
ಮುಗಿಲು ಮೊದಲೇ ಅಲ್ಲ ಸಾರಿ ಬರಲು;
ಹಕ್ಕಿಯಾಗಿರೆ ನಾನು ಹಾರಿ ಬರುತಿದ್ದೆ–
ಎಂತು ನಾ ನಿನ್ನೆಡೆಗೆ ಬರಲಿ, ಕಡಲೆ?

ನಿನ್ನನೆಂದಿಗೆ ನಾನು ನೋಡುವೆನೊ, ನಾನರಿಯೆ.
ಅದುವರೆಗೆ ಎಂತುನಾ ಸುಮ್ಮನಿರಲಿ?

ಅದರಿಂದ, ಎಲೆ ಕಡಲೆ, ಕಾಣದಿಹ ಕಡಲೆ,
ಬಂದೆನ್ನ ಮನದಲ್ಲಿ ನಿರುತ ನೆಲಸು.

ಎನ್ನ ಮನದಲಿ ನೆಲಸಿ ನೀನೊಮ್ಮೆ ನಲಿದಾಡೆ
ಚಿಮ್ಮಿ ಕುಣಿವುದು ಎನ್ನ ಹೃದಯವುಬ್ಬಿ.
ಅಂದೆನ್ನ ಮನ ತಣಿಯೆ, ಎನ್ನ ಹೃದಯವು ಕುಣಿಯೆ,
ಸಂತಸದ ಕಡಲಿನಲಿ ನಾ ಮುಳುಗುವೆ.

೧೯೨೯]

(೧೯೩೦ಕ್ಕಿಂತ ಮುಂಚೆ, ನನ್ನ ವಿದ್ಯಾರ್ಥಿದೆಸೆಯಲ್ಲಿ ರಚಿತವಾದ ಮೊಮ್ಮೊದಲಿನ ಕವನಗಳಲ್ಲಿ ಒಂದು. ಶ್ರೀ ಕೆ.ವಿ. ಪುಟ್ಟಪ್ಪನವರು (ಈಗ 'ಕುವೆಂಪು') ಇದೇ ಹೆಸರಿನಲ್ಲಿ ಒಂದು ಕವಿತೆ ರಚಿಸಿದ್ದಾರೆಂದು ಕೇಳಿ, ಇದನ್ನು ಆಗಲೂ ತರುವಾಯವೂ ಪ್ರಕಟಿಸಲಿಲ್ಲ. ಕುತೂಹಲ ತೃಪ್ತಿಗಾಗಿ ಈಗ ಪ್ರಕಟಿಸುತ್ತಿದ್ದೇನೆ.)

## ರುಚಿ

ನರನ ರಕ್ತದ ರುಚಿಕಂಡ ಹುಲಿಯದೊಮ್ಮೆ
ನರನ ಬೇಟೆಯನೆಂದೂ ಬಿಡದು;
ಪರಮಾಧಿಕಾರದ ರುಚಿಕಂಡ ಮೇಲೊಮ್ಮೆ
ವರ ಯತಿಯಾದರೂ ಬಿಡನು.

೧-೧೧-೧೯೬೯]

## ಏಕಾಂಗಿ

ನಿರ್ಜನ, ಉದ್ಯಾನ–
ಬಿಳಿಮುಗಿಲಿನ ನಿಧಾನದೋಟದ ಮೇಲಾಟ,
ನೀಲಿಯ ಬಯಲಿನಲಿ
ಒಂದರ ಹೆಗಲನ್ನೊಂದು
ಸೋಕಿ ತಾಕಿ ನೂಕಿ
ನಡೆದಿತ್ತು.

ಬಣ್ಣದ ಚಿಟ್ಟೆ–
ಹೂವ ಮೇಲೆ ಹೂಕುಳಿತು ಕಣ್ಣ ಮುಚ್ಚಿ,
ರೆಕ್ಕೆಯ ಬಿಚ್ಚಿ, ಮೈಗೆ ಮೈಯ ಹಚ್ಚಿ,
ಬಂಡನುಂಡು ತೊಂಡುಗೆಡೆದು,
ಹೂಡಿದ್ದವು ಕಣ್ಣು ಮುಚ್ಚಾಲೆಯಾಟ.

ಈ ಗಿಡತಲೆಹೂ ಆ ಗಿಡತಲೆಹೂ
ಅತ್ತ ಇತ್ತ ಬಾಗಿ, ತಾಗಿ,
ಮುತ್ತಿಡುತಿದ್ದುವು ತೂಗಿ, ತೂಗಿ.

ಹೊಂಬಿಸಿಲು–
ಹೊನ್ನುಡೆ ಹರಡಿ, ಹಚ್ಚಹಸಿರ ಹಸಲೆಯ ತಬ್ಬಿ,
ಎಚ್ಚರದಲಿ ಮಲಗಿತ್ತು.

ತಂಗಾಳಿ–
ತನಿಗಂಧದ ಹೊರೆ ಹೊತ್ತು
ಯಾರಿಗೆ ಕೊಡಲೆಂದು
ಕೊಳ್ವರ ಹುಡುಕಿತ್ತು.

ಭ್ರಮರಗಳ ಗುಂಪ ಜೊಂಪನು ಬಿಟ್ಟು
ಒಂಟಿ ಭ್ರಮರಿ ಭ್ರಾಮಕ ಭ್ರಾಂತಿಯಲಿ
ಸುತ್ತಿ ಸುಳಿದು ಮತ್ತಿನಲಿ ಹೊರಳಿ ಹೊರಳಿ
ಭ್ರಮಿಸುತ್ತಿತ್ತು–
ಅರಕೆಯ ಕಂಡು, ಬೆರಕೆಯ ಬಯಸಿ:

"ಗೆಳೆತನದಾಟ ಗೆಲವುಗೊಂಡಿದೆ
ಎಲ್ಲಿ ನೋಡಿಲಲ್ಲಿ–
ಏಕೆ ಏಕಾಂಗಿಯಾಗಿರುವೆ?

ಒಂಟಿತನದ ಬೇಸರದ ಮೂಟೆ ತಲೆಭಾರ ಭಾರ ಭಾರ.
ನರಕವೂ ಸ್ವರ್ಗ ಸಹಚರಿಯಿದ್ದರೆ:
ಸೇರುವೆ ಸಂಗಾತಿಯ ಗುಂಪಿಗೆ ಮರಳಿ"
ಎಂದೇಕಾಂಗಿಯ ಕಿವಿಯಲಿ ಮೊರೆದು
ಕಣ್ಮರೆಯಾಯಿತು ದಿಗಂತದಲ್ಲಿ,
ಸ್ನೇಹ ನಿರೀಕ್ಷೆಯ ಅನಂತದಲ್ಲಿ.

ನಿಸರ್ಗದರ್ಶನನಿಮಗ್ನ ಕವಿಯೇಕಾಂಗಿ–
"ನಾನೇಕಾಂಗಿಯೆ?"
ಎಂದೆಲ್ಲೆಡೆಯೂ ತಿರುಗಿ ನೋಡಿದನು:
"ಅಲ್ಲ ಅಲ್ಲ ಅಲ್ಲ" ಎನ್ನುತ
ನಿಸರ್ಗ ರಮಣಿಯ ಸ್ನೇಹಸೂಕ್ತವನು ಹಾಡಿದನು.

೧೯೩೫/೧೯೭೦]

## ಆರುವ ದೀಪ

ತೈಲ ಮುಗಿದಿರಲು ನೀಲಿಯನೆ ಮೆರೆದು
ದೀಪವಾರುವುದೆ ಚೆಂದ!
ಹಣ್ಣು ಮಾಗಿರಲು ತಿನ್ನುವರ ಕೈಗೆ
ಕಳಚಿ ಬೀಳುವುದೆ ಚೆಂದ!

೧೯೫೦]

## ಚೆಲುವಿನ ಚಣದ ಹನಿ

ಹರಿದು ಬಂದುದೇನೊ ಬಳಿಗೆ:
ಹಿಡಿಯಲು ಕೈಯಿಕ್ಕೆ
ತೆರೆಯಿತು ರೆಕ್ಕೆ,
ಹಾರಿತು ಮೇಲಕ್ಕೆ–

ನೋಡಲು ಬಲು ಸಣ್ಣ;
ಒಮ್ಮೆ ಹಸುರು, ಒಮ್ಮೆ ನೀಲಿ.
ಒಮ್ಮೆ ಎರಡು ಬೆರೆತ ಬಣ್ಣ;
ಸೆಳೆಯಿತೆನ್ನ ಮನವ, ಕಣ್ಣ,
ಬಣ್ಣ–ಬಿಂದುವಾಗಿ ತೇಲಿ.
ಹರಿದ ಕೀಟ ಹಾರಿದಾಟ
ತೋರಿ ಸೃಷ್ಟಿಕಲೆಯ ಮಾಟ
ತಟ್ಟನಲ್ಲೆ ಕೆಳಕ್ಕೆ
ಬಿತ್ತು, ಮುದುಡಿ ರೆಕ್ಕೆ.
ಹರಿದು ಬಾರದಿನ್ನು ಬಳಿಗೆ,
ಹಿಡಿಯಲು ಕೈಯಿಕ್ಕೆ
ತೆರೆಯದು ರೆಕ್ಕೆ.
ಅದು ಚೆಲುವಿನ ಚಣದ ಹನಿ:
ಅದಕಿದೆನ್ನ ಕಂಬನಿ.

೨೭–೧೨–೫೯]

## ಹೇಮಂತನ ದೊರೆತನ

ಹಿಮಮಕುಟವಿಟ್ಟು ಹಿಮವಂತನಿಗೆ, ಸಾಮಂತ
ಹೇಮಂತ ಹಿಮಕಾಂತೆಯೊಡನೆ ಬಂದ;
ಇಳೆವೆಣ್ಣ ಮಡಿಲಿನಲಿ ದವಸಧಾನ್ಯವ ತುಂಬಿ
ಹೊಂಗಿರಣ–ಜರಿಯ ಬಿಳಿಯುಡೆಯ ತಂದ,

ಎಲ್ಲೆಲ್ಲು ನೆಲ್ಲು ಹೊಂದೆನೆ–ಕಾಣಿಕೆಯ ನೀಡೆ,
ತೆನೆಹಾಲನುಂಡು ಗಿಳಿವಿಂಡು ತೋರಣ ಕಟ್ಟೆ,
ಬೆಳ್ಳಕ್ಕಿ ಪಹರೆ ಕೊಡೆ, ಹಿಡಿದು ಬೆಳ್ಮುಗಿಲ ಕೊಡೆ
ರವಿಯೆ ಗದ್ದುಗೆಯಿತ್ತ ಹೇಮಂತಗೆ.

ಕಾಮನಿಗೆ ಬಿಲ್ಲಾಗಿ ಕಬ್ಬು ಮೈಬಾಗಿಸಲು,
ಬಾಣವಾಗಲು ಬಾಗೆ ಸುರಗಿ ಮಂದಾರ,
ಪ್ರೇಮಕಲಹದ ಕೋಪ–ಕಾವಿಗಿದು ಮದ್ದೆನುತ
ಹಂಚಿದನು ಹೇಮಂತ ಲೋಕಕೆ ತುಷಾರ.

ಕೊಂಡು ಪಡುವಣ ವನದ ಕಿತ್ತಿಳೆಯ ಗುತ್ತಿಗೆಯ,
ಬಾನ ಬೀದಿಯ ತೆರೆದು ತಾರೆ–ದಿಬ್ಬಣಕೆ,
ಬನದೇವಿಗಿಬ್ಬನಿಯ ಮುತ್ತಿನೊಡವೆಯನಿತ್ತು
ದೊರೆತನವ ಗೈದ ಹೇಮಂತ ಜಗ ನಡುಗೆ.

೨೯–೯–೧೯೬೦

## ನಿಸರ್ಗದ ಒಂದು ನೋಟ

(ಬೆಂಗಳೂರು–ಮೈಸೂರು ರೈಲು ಪ್ರಯಾಣದಲ್ಲಿ, ಮಂಡ್ಯ–ಮೈಸೂರು ನಡುವಣ ಹಸುರು ಗದ್ದೆಯ ನೋಟದ ನೆನಪಿನ ಚಿತ್ರ)

ಕಣ್ಣು ಹರಿಯುವ ವರೆಗೆ ಪಯಿರು ಹಬ್ಬಿದೆ, ಹಬ್ಬಿ
ತಬ್ಬಿದೆ ದಿಗಂತವನು ಹಸುರು–ಮುತ್ತಿಟ್ಟು;
ತನ್ನ ಪಯಿರಿನ ವಯಿರಮುಡಿಯ ತಲೆಯ ತೂಗಾಟಕ್ಕೆ
ಹಿಗ್ಗಿ ಸುಗ್ಗಿಯಲಕೋ ನೆಲ–ನಲ್ಮೆಗುವರ:
ಅವನ ಹಿಗ್ಗಿನ ಸುಗ್ಗಿ–ತೆನೆ–ಹಾಲು–ಚೆಲುಮೆಯೆನೆ
ಬಾಣಚಿಗಿಯುತ್ತಿಹುದು ಬೆಳ್ಳಕ್ಕಿ ಸಾಲು;
ನಿಂತ ನೀರ್‌ಗನ್ನಡಿಯ ಬಾನೊಡಲ ಬಿತ್ತರ
ನೆಲಕೆ ನೀಲಿಮೆಯಿತ್ತು ಧನ್ಯವಾಗಿಹುದು;
ತೆವರುತೆವರಿನ ಸಾಲು ಚೌಕ ಚೌಕಳಿಯಲ್ಲಿ
ಚದುರಂಗ–ನಡೆಯುತಿವೆ ಕೊರಳೆತ್ತಿ ಕೊಕ್ಕರೆ;
ಸುಗ್ಗಿಯೋಲೆಯಕಾರ–ತಂಡ ಗಿಳಿಗಳ ಹಿಂಡು
ನೆಲದ ನಲವನು ದವಕೆ ಒಯ್ಯುತಿಹುದು;
ಎಲ್ಲ ನಲವಿಗು ಉಂಟು ಕಣ್ಮರೆಯ ಸರಹದ್ದು
ಎಂದು ಬಾನಳೆಯುತಿದೆ ಸುತ್ತ ಹದ್ದು;

ಕವಿಯ ಧ್ಯಾನವ ಸೀಳುತೆಲ್ಲಿಂದಲೋ ಬಂತು
ನಭವಸ್ತ್ರ ತೂರಿ ಲೋಹದ ಹಕ್ಕಿ ಸದ್ದು.

ಜೂನ್ ೧೯೬೧]

## ನಾಗರಾಜ

ಬಲುಸೆಕೆಯ ಒಂದು ದಿನ, ಸೆಕೆಯೆಂದು ಪೈಜಾಮ ಹಾಕಿಕೊಂಡಿದ್ದೆ,
ನೀರು ಕುಡಿಯಲು ಬಂದನಾಗ ನಾಗ
ನಮ್ಮ ನೀರಿನ ತೊಟ್ಟಿಬಳಿಗೆ.
ದೊಡ್ಡ ಕ್ಯಾರಬ್ ಮರದ ವಿಲಕ್ಷಣವಾಸನೆಯ ದಟ್ಟನೆರಳಿನಲಿ
ಮೆಟ್ಟಲಿಳಿಯುತ ಬಂದರೇನು ಹೂಜಿಯ ಹಿಡಿದು
ನಾನು ಕಾದಿರಬೇಕು, ನಿಂತೆ ಕಾದಿರಬೇಕು, ಏಕೆನಲದೋ
ಅಲ್ಲಿ ತೊಟ್ಟಿಬಳಿಯಿಹನಾತ ನನ್ನ ಮುಂದೆ.
ಮಣ್ಣ ಗೋಡೆಯ ಬಿರುಕಿನಿಂದಿಳಿದು,
ಕಲ್ಲ ತೊಟ್ಟಿಯ ಏಣ ಮೇಲೆಳೆದು ಸರಿಸುತ್ತ
ಕಂದುಹಳದಿಯ ತನ್ನ ಮೆತು ಹೊಟ್ಟೆಯಡಿಯ,
ಕಲ್ಲಿನ ತಡಿಯ ಮೇಲೆ ಕೊರಳಿಟ್ಟು ಕುಳಿತನವ,
ತೊಟ್ಟಿಕ್ಕಿ ನಲ್ಲಿಯಿಂದಲ್ಲಿ ತೆಳ್ಳನೆ ತಿಳಿದು ನಿಂತ ನೀರೆಡೆಯಲ್ಲಿ,
ಹೀರುತ್ತ ತನ್ನ ನಿಡುಮೂತಿಯಿಂದ,
ಕುಡಿಯುತ್ತ ತನ್ನ ನಿಡುವೊಸಡಿಂದ ಸಡಿಲಬಿಟ್ಟೊಡಲೊಳಕ್ಕೆ
ಮೆಲ್ಲನೆ ಮೌನವಾಗಿ.
ನಮ್ಮ ನೀರಿನ ತೊಟ್ಟಿ ಬಳಿಯಿದ್ದರಾರೋ,
ನಾ ತಡೆದುಬಂದವನ ತೆರ ನಿಂತು ಕಾದಿದ್ದೆ.
ಕುಡಿಯುವುದ ಬಿಟ್ಟವನು ತಲೆಯನೆತ್ತಿದನು, ದನದ ಹಾಗೆ,
ತೇಲುಗಣ್ಣಿನಲೆನ್ನ ಕಡೆಗೆ ನೋಡಿದನು, ನೀರು ಕುಡಿಯುವ ದನದ
ಹಾಗೆ
ತುಟಿಯ ಹೊರಗಡೆ ತನ್ನ ಸೀಳುನಾಲಗೆಯನ್ನು ಮಿಣುಕಿಸುತ
ಕ್ಷಣಕಾಲ ಚಿಂತಿಸಿದನು.
ಬಗ್ಗಿ ಕುಡಿದನು ಮತ್ತೆ ತುಸ ನೀರನು.

ಸಿಸಿಲಿಯ ಜುಲೈ ದಿನದೆ ಎಟ್ನ ಹೊಗೆಯಾಡುತಿರೆ,
ನೆಲದ ಬೇಯುವ ಬಸಿರಿನೊಳಗಿಂದ ಬಂದು ಎರೆಗಂದು
ಎರೆಹೊನ್ನ ಬಣ್ಣದಲಿ.

ನನ್ನ ವಿದ್ಯೆ ದನಿ ನನಗುಸುರಿತು
ಕೊಲ್ಲಲೇಬೇಕವನನೆಂದು.
ಏಕೆನಲು ಸಿಸಿಲಿಯಲಿ ನಿರಪಾಯ ಕಪ್ಪು ಹಾವು.
ವಿಷಯುಕ್ತ ಹೊನ್ನ ಬಣ್ಣದವು.

ನನ್ನ ಒಳಗಿನ ದನಿಗಳಿಂತು ನುಡಿದವು:
ನೀನು ಗಂಡಸಾಗಿದ್ದರೆ
ಕೋಲೊಂದ ತೆಗೆದುಕೊಂಡದನು ತುಂಡರಿಸಿ
ಪೂರೈಸಿಬಿಡುತಿದ್ದೆ.

ನಾನೊಪ್ಪಿಕೊಳಬೇಕೇನು–
ಹೇಗವನ ಮೆಚ್ಚಿಕೊಂಡೆನು ಎಂದು,
ನನ್ನ ನೀರಿನ ತೊಟ್ಟಿಯಲಿ ಕುಡಿಯೆ ಮೆಲ್ಲನೆ
ಶಾಂತನಾಗುತ ತಣಿದು ವಂದನೆಯ ಸಲ್ಲಿಸದೆ
ನೆಲದ ಬೇಯುವ ಬಿಲಕೆ ಹಿಂದಿರುಗಿದಾಗ
ನಾನೆಂತು ಹರ್ಷಿಸಿದೆನೆಂದು?
ಅವನ ಕೊಲ್ಲಲು ನಾನು ಧೈರ್ಯಗೊಳಲಿಲ್ಲ, ಅದು
ಹೇಡಿತನವೇ?

ಅವನೊಡನೆ ಮಾತಾಡಬಯಸಿದೆ, ವಿಚಿತ್ರವೆ?
ಮನ್ನಣೆಯ ಪಡೆದಂತೆ ಭಾವಿಸಿದೆ, ದೈನ್ಯವೆ?
ಅಹುದು, ಮನ್ನಣೆ ಪಡೆದ ರೀತಿ ಭಾವಿಸಿದೆ.
ಆದರಾ ದನಿಗಳೋ:
ನೀನಂಜದಿದ್ದರೆ, ಅವನ ಕೊಲ್ಲುತ್ತಿದ್ದೆ!
ನಿಜವಾಗಿ ಅಂಜಿದ್ದೆ, ಬಹಳ ಅಂಜಿದ್ದೆ,
ಆದರೂ, ಅದಕಿಂತ ಹೆಚ್ಚಾಗಿ, ಗೋಪ್ಯವಾದಾ ನೆಲದ
ಕತ್ತಲ ಬಾಗಿಲಿಂದ
ನನ್ನ ಆತಿಥ್ಯವನು ಹುಡುಕಿ ಬಂದವನಿಂದ
ಮನ್ನಣೆಯ ಪಡೆದಿದ್ದೆ.

ಸಾಕಷ್ಟು ಕುಡಿದನವ,-
ಕುಡಿದು, ಕುಡಿದವನ ಹಾಗೆಯೇ, ಕನಸು ಕಾಣುವ ರೀತಿ,
ತನ್ನ ತಲೆಯೆತ್ತಿದನು.
ಎತ್ತಿ, ತನ್ನ ತುಟಿ ನೆಕ್ಕುವೊಲು, ಇರುಳು ಕವಲೊಡೆದಂತೆ
ಗಾಳಿಮೇಲೆ
ಕಗ್ಗಪ್ಪು ನಾಲಗೆಯನಲುಗಿಸಿದನು,
ಸುತ್ತಲೂ ಗಾಳಿಯನೆ ತಿರುಗಿ ನೋಡಿದನು, ಶೂನ್ಯ ದೃಷ್ಟಿಯಲಿ,
ತಾನೆ ದೇವತೆಯೆನೆ;
ಮೆಲ್ಲನಾ ಬಳಿಕ ತಲೆ ತಿರುಗಿಸಿದನು,
ಮೆಲ್ಲನೆ, ಮೆಲ್ಲಮೆಲ್ಲನೆ, ಮೂಮೆ ಕನಸುಕಂಡಂತೆ,
ಸುತ್ತುಮುತಿಯುತ ತನ್ನ ವಿಲಂಬಿತ ನೀಳತೆಯನೊಳಸೆಳೆಯತೊಡಗಿ,
ನಮ್ಮ ಗೋಡೆಯ ಮುಂಗಡೆಯ ಮುರುಕು ದಿಣ್ಣೆಯನು
ಏರತೊಡಗಿದನು ಮರಳಿ.
ಆ ಭಯಂಕರ ಬಿಲದೊಳಗೆ ತಲೆಯನಿಡುತಿರಲು,
ತನ್ನ ಭುಜಸವರಿಸುತ ಭುಜಗಭಂಗಿಯಲಿ,
ಮುದುಡಿಕೊಂಡೊಳಹೊಗಲು ಮುಂದುಮುಂದಕ್ಕೆ,
ಆ ಭಯಂಕರ ಕಪ್ಪು ಬಿಲದೊಳಕ್ಕವನು ಮೈಗರೆವುದನು
ತನ್ನ ತಾನೆಳೆಯುತ್ತ ಮೆಲ್ಲನಾ ಕತ್ತಲಾಳಕ್ಕೆ ಬೇಕೆಂದೆ ನುಗ್ಗುವುದನು
ಸಹಿಸದಿಹ ಭಾವ. ಒಂದು ರೀತಿಯ ದಿಗಿಲು,
ಬೆನ್ನು ತೋರಿಸಲವನು ಬಂದೆನ್ನ ಮೆಟ್ಟಿತು.
ಸುತ್ತ ನೋಡಿದೆ ನಾನು, ಹೂಜಿಯನು ಕೆಳಗಿಟ್ಟೆ,
ಎತ್ತಿಕೊಂಡೆನು ಮೊರಟು ಕಟ್ಟಿಗೆಯ ತುಂಡೊಂದ,
ನೀರತೊಟ್ಟಿಯ ಕಡೆಗೆ ಎಸೆದೆನು ಧಡಾರೆಂದು.
ಅವನನದು ಸರಿಯಾಗಿ ತಾಕಲಿಲ್ಲವೊ ಏನೊ,
ಆದರಾ ಒಡನೆಯೇ ಅವನ ಹಿಂದುಳಿದಿದ್ದ ಅವನ ಮೈಭಾಗವದು
ಸಲ್ಲದಾತುರದಿಂದ
ಒದ್ದಾಡಿತು ಮಿಲಿಮಿಲಿ,
ಮಿಂಚಂತೆ ಮೈನುಲಿದು, ಆ ಕಪ್ಪು ಬಿಲಕೆ,
ಗೋಡೆ ಮುಂದಣ ಮಣ್ಣ ತುಟಿಬಿಟ್ಟ ಬಾಯ್ಗೆ,

ನಿಚ್ಚಳದ ನಿಬ್ಬರದ ನಡುಹಗಲು ನಾನದನು ದಿಟ್ಟಿಸುತ್ತಿರೆ
ಮೋಹಮುಗ್ಧನಾಗಿ.
ಒಡನೆಯೇ ಮರುಗಿದೆನು:
ಎಂಥ ಕ್ಷುಲ್ಲಕ ಕ್ಷುದ್ರ ನೀಚಕಾರ್ಯವದೆಂದು ಬಗೆದು!
ನನ್ನ ನಾ ಹಳಿದೆ, ನನ್ನ ಆ ಹಾಳು ಮಾನುಷ ಶಿಕ್ಷಣವನೂ ಹಳಿದೆ,
ಆ ಕಡಲಕೋಳಿಯ ನೆನೆದೆ:
ಮತ್ತೆ ಬರಬಾರದೇ ಆ ನನ್ನ ನಾಗ, ಎಂದೆನಿಸಿದಾಗ,
ರಾಜನಂತೆಯೆ ಕಂಡ ನನಗವನು ಮರಳಿ,
ದಿಟ, ನಾಗರಾಜ: ರಾಜ್ಯಭ್ರಷ್ಟ,
ಅಧೋಲೋಕದ ಮಕುಟರಹಿತರಾಜ,
ಮರಳಿ ಮಕುಟವ ಧರಿಸಲಿಹ ನಾಗರಾಜ.
ಇಂತು, ತಪ್ಪಿತು ನನಗೆ,
ಜೀವನ ಪ್ರಭುಗಳಲಿ ಒಬ್ಬನೊಡನಾ ಯೋಗ,
ಉಳಿದಿರುವುದಿನ್ನೂ ನನಗೆ ಪ್ರಾಯಶ್ಚಿತ್ತ:
ಆ ಕ್ಷುದ್ರತನಕೆ.

೧೯೫೯]

(ಆಂಗ್ಲ ಮೂಲ : D.H. Lawrence (೧೮೮೫–೧೯೩೦) ಕವಿಯ 'Snake' ಎಂಬ ಕವನ)

## ತೇವಳುಮೋಡ

ತೇವಳುತಿದೆ ಮೋಡ ನೋಡಲ್ಲಿ:
ಏತಕೀ ಕುಂಟುನಡಗೆ?
ಅದಕಿರುವ ಸರ್ವಸ್ವಾತಂತ್ರ್ಯ
ಕರುಬ ಕೊನರಿಸುವುದು, ಕೊರಡಿಗೂ ಕೂಡ:
ಓಡಾಟಕಿಹುದದಕೆ
ದೇಶೋವಿಶಾಲ ನೀಲ ನಭದಾನಂತ್ಯ;
ಹಿಂದುಗಡೆಯಿಲ್ಲ
ಹಿಂಡುಮೋಡವನಂಡಲೆವ ಗಂಡುಗಲಿ ಗಾಳಿ;

ಆಶಾನಿರಾಶೆಗಳ ಹಳ್ಳತಿಟ್ಟುಗಳಲ್ಲಿ ಬಾನಬಟ್ಟೆಯಲಿ;
ಏನ ಮಾಡಿದರೂ, ಏನ ಹಾಡಿದರೂ
ಎಲ್ಲ ಸರಿಗಮ–ಸುಗಮ;
ಇಲ್ಲ ಶಂಕೆ, ಇಲ್ಲ ಅಂಕೆ.
ತೆವಳುತಿದೆ ಮತ್ತೇಕೆ?
ನೀರುಮೈ ಕರಗಿಹುದು;

ಸ್ವಾತಂತ್ರ್ಯಮಧುಮತ್ತ ಜಡಜ ಜಡನಾಯ್ತೋ?
ಅದಕ್ಕಿಲ್ಲ ಗೊತ್ತುಗುರಿ:
ಆದಕೇನೊ ಈ ಪರಿ!
ನಿಂತು ನಿಂತು ನಡೆಯೆ, ಸವೆಯುವುದೆ ದಾರಿ?
ಮಳೆಸುರಿಯಬೇಕೆಂಬ ನಿರ್ಬಂಧವಿಲ್ಲ,
ಹುರುಡು ಹುಟ್ಟಿಸೆ ಜೊತೆಯ ಮೋಡ ಮೊದಲೇ ಇಲ್ಲ;
ನಿಂತಕಡೆ ನಿಂತಿರಲು ಸ್ಥಾವರವು ಅಲ್ಲ;
ನೋಡೆ ಜಂಗಮ, ರೆಕ್ಕೆಯಿಲ್ಲದ ವಿಹಂಗಮ;
ನೆಲಕಿಳಿಯಲಾರದು, ಮೇಲೇರಲಾರದು,
ನಡೆಯದು, ನಿಂತಿರದು;
ಕುರುಡುದಾರಿಯ ಹಿಡಿದು
ತೆವಳುತಿದೆ ಮೋಡ ನೋಡಲ್ಲಿ.
ತೆವಳು ಮೋಡ ನೋಡೆ, ಇಂತು ತೋರುವುದು:
ಕೆಲಸವಿಲ್ಲದ ಬಿಡುತಗಿಂತ ಗೈಮೆಯ ಗುಲಾಮಗಿರಿ ಮೇಲು.

೧೧–೬–೧೯೫೯]

## ಲಾಭ

ಹಸು ಕರುವ ನೆಕ್ಕಿತು
ಮೊಲೆಯಲಿ ಹಾಲುಕ್ಕಿತು
ಕರೆದ ಹಾಲೆಲ್ಲವೂ
ಕವಾಡಿಗಗೆ ದಕ್ಕಿತು!

೧೨–೧೧–೫೮]

## ತಾರೆಗಳ ಮರುಮಾತು

ತಾರೆಗಳೆ! ಚಿತ್ತರದ ಬಾನಿನಲಿ ಮೆರೆವ ಕಣ್ಣುಗಳೆ!
ನೀವು ಕಂಡಿಹುದೇನು ನಿಮ್ಮ ಬದುಕಿನಲಿ?
ಸಾರಿ ಮರಳಿಹವು ಶತಮಾನಗಳು ಎನಿತೆನಿತೊ ನಿಮ್ಮ ಕಣ್ಮುಂದೆ.
'ಕಂಡುದನು ಹೇಳುವೆವು, ಕಲ್ಪನೆಯ ಕಥೆಯಲ್ಲ ನಮ್ಮ ನೋಟದ ಕಥೆ
ಮೇಲೆ ಸಾಗರದಂತೆ ಗಂಭೀರ ನೋಟ,
ಸೊಗದ ಸುಗ್ಗಿಯ ಬೆಳಸು; ಒಳಗೆ ಹೊಲಸು;
ಎಲ್ಲೆಲ್ಲು ಕಾದಾಟ, ಬರಿಯ ಕಾದಾಟ;
ಬಲು ಘೋರತರ ನೋಟ
ನಿಮ್ಮ ಈ ಆಟ–
ಕಂಡಿಹೆವು ಇದನೆಲ್ಲ ನಮ್ಮ ಬದುಕಿನಲಿ!'

ದೂರ ಬಲು ದೂರದಲಿ ಶೂನ್ಯ ವಿಸ್ತಾರದಲಿ ನೆಲಸಿ ನೀವು
ಏನನಾಲೋಚಿಸುತ ಕಾಲ ಕಳೆಯುವಿರಿ?
ನೀರವತೆಯಲಿ ಮುಳುಗಿ ಮಾತಾಡದೆಯೆ ನಿವು ಏನ ಮಾಡುವಿರಿ?

'ಹಿಂದೆ ನಡೆದುದನೆಲ್ಲ, ಇಂದು ನಡೆವುದನೆಲ್ಲ ಯೋಚಿಸುತ್ತಿಹೆವು;
ಸಾಲುಮೋಡಗಳಂತೆ ಒಂದಾಗುತೊಂದು
ಚಕ್ರಾಧಿಪತ್ಯಗಳು ಕಂಡು ಕಾಣದಿವೆ–
ಜಗವನಾವರಿಸಿಹುದು ರಕ್ತಮಯ ಕ್ರಾಂತಿ!
ಕ್ರಾಂತಿರಾಕ್ಷಸಗಂಜಿ
ಇಲ್ಲಿಹಳು ಶಾಂತಿ,
ಚೆಲುವೆ ಶಾಂತಿ!
ನಿಮ್ಮ ಬಳಿ ಸಾರುವಳೆ?–ಎಂದು ಯೋಚಿಸುತಿಹೆವು!'
ಕ್ಷಣಕೊಮ್ಮೆ ಏಕಿಂತು ಮಿನುಗಿ ಕಣ್ಮರೆಯಾಗಿ ಮತ್ತೆ ಮಿನುಗಿ,
ಬಾನ ಕತ್ತಲೆಯಾಳದಲ್ಲಿ ಮುಳುಗುವಿರಿ?

ಮನವನಾವರಿಸಿರುವ ಶಂಕೆಯಾವುದು? ಬೆರಗುಗಣ್ ಬಿಡಲು
ಭಯವಾವುದು?
'ನಮ್ಮ ಮುಂದಿನ ಬಾಳು ಎಂತೊ ಏನೋ ಎಂದು ನಡುಗುತಿಹೆವು.
ಈ ವಿಶ್ವದಾ ಹುಟ್ಟು, ಅದು ಹಿರಿಯ ಗುಟ್ಟು,
ದಿವ್ಯಾನುಭೂತಿಗದು ತೋರುವುದು ಮೈಗೊಟ್ಟು,
ಐಂದ್ರಿಯಕೆ ಮೇಲ್ಪಟ್ಟು:
ಅದರ ಬುಡವನು ಬೆದಕೆ
ನೀವು ಹಟ ತೊಟ್ಟು
ಪಡೆಯೆ ಕಣ್‌ಕಾಣಿಕೆಗೆ
ಹೆಣಗುತಿರುವಿರಿ; ನಮ್ಮ ಬಳಿಸಾರಲೆಂದು
ಹಾರುತಿರುವಿರಿ ನೀವು–
ನಿಮಗಿಲ್ಲ ಕಟ್ಟು.
ಗೆರೆ ಮೀರಿ ಬರುತಿಹಿರಿ;
ಸರಿಯಾದುದಲ್ಲವದು:
ನಿಮ್ಮ ಕುಣಿದಾಟಕ್ಕೆ ನಿಮ್ಮ ಹಾರಾಟಕ್ಕೆ
ನಿಮ್ಮ ನೆಗೆದಾಟಕ್ಕೆ ನಿಮ್ಮ ಹೋರಾಟಕ್ಕೆ
ಸೃಷ್ಟಿ ಮುನಿದುರಿಯುವುದು!
ಸೂತ್ರ ಹರಿಯುವುದು!
ನಿಮ್ಮ ಬುದ್ಧಿಯ ಮಾಟ,
ನಿಮ್ಮ ಕೊನೆಯಾಟ!
ಎಂದು ಬರುವುದೊ ಏನೊ ನಮಗೆ ನಿಮ್ಮಯ ಸಂಗ.
ನಮ್ಮ ಶಾಂತಿಗೆ ಭಂಗ–
ಎಂಬ ಶಂಕೆಗೆ ಸಿಲುಕಿ ಬೆರಗುಗಣ್ ಬಿಡುತಿಹೆವು,
ಭಯದಿ ಮಿಡುಕುವೆವು!
ಸಾಕು ಮಾನವ ನಿನಗೆ ಸಾವಿರ ನಮಸ್ಕಾರ!'

೧೯೩೫]

## ಜೇಡನ ಬಲೆ

ನೋಡಾ ನೋಡಾ! ಮನೆಮೂಲೆಯ ಜೇಡ!
ಅಲ್ಲಿಂದಿಲ್ಲಿಗೆ ಎಳೆಯಿತು ಒಂದೆಳೆ,
ಎರಡು ಮೂರು ನಾಲ್ಕೆಂಟಾಯಿತು ಎಳೆ:
ಆಯಿತೆಂಟು ಮೂಲೆ.
ಎಂಟೆಳೆಯಾಯಿತು ಸುತ್ತೆಳೆ–ಬಂಧನ.
ಸಿದ್ಧವಾಯಿತು ಚೆಲುವು ಬಲೆ
ಒಂದೇ ಚಣದಲ್ಲೆ!
ಏನು ಪವಾಡ.
ಕಾರನೀ ಜೇಡ!
ತನ್ನೊಳಗಿಂದಲೆ ತಂದನೊ ದಾರ
ನಿಸರ್ಗಲೋಕದ ಈ ನೇಕಾರ!
ಪರಬ್ರಹ್ಮನಿಭನೀ ಊರ್ಣನಾಭ,
ಇವ ನೇಯುವ ಬಲೆ ಮಾಯಾಲೋಭ!
ಜೇಡನ ಈ ಬಲೆ ಬ್ರಹ್ಮಸೃಷ್ಟಿಕಲೆ;
ಹೊಕ್ಕ ಜೀವಿಗಳಿಗದರಿಂದಲೆ ಕೊಲೆ!

೧೯೬೦]

## ಹಿಮವಂತ ಪ್ರಗಾಥ

೧

ಓ ಹಿಮವಂತ!
ಅಪಾರ ಮಹಿಮಾವಂತ!
ಹಬ್ಬಿದೆ ನಿನ್ನ ಹಿಮಧವಳಕೀರ್ತಿ
ದಿಗ್‌ದಿಗಂತ.
ಅರುಣಕಿರಣ ನಿನಗಾಭರಣ
ಸೂರ್ಯನಿಗರಿದು ನಿನ್ನಾರೋಹಣ

ಹಿಮಾಂಶು ನಿನಗಾಗಿಹ ತಾ ಶರಣ
ಧನ್ಯ ನೀನು ಧರಿಸಿಹೆ ಶಿವಚರಣ!

೨

ಅಗಣಿತ ತಪಸ್ವಿಜನ ನಿನ್ನನಾಶ್ರಯಿಸುತ್ತ
ತಪವೆಸಗಿಯೂ ನೀನು ಕರಗದಿರುವೆ;
ಅವರ ಧನ್ಯತೆ ತಪಃಫಲಭಾಗವನ್ನಿತ್ತು
ಯುಗಯುಗಾಂತರದಿಂದ ಬಾಳುತಿರುವೆ.

ಕೆಳಗೆ ಮಾನವ ಕರ್ಮಭೂಮಿ ಪದತಲದಲ್ಲಿ
ನಡುವೆ ತೊಡೆ–ತಪ್ಪಲು ತಪೋಭೂಮಿಯು;
ನಿನ್ನ ವಕ್ಷಸ್ಥಲವು ದಿವಿಜ ಭೋಗದ ಭೂಮಿ
ನಿನ್ನ ತಲೆಗಾಯುವನುಮಾಸ್ವಾಮಿಯು,

ಎರಡು ತೋಳ್ ಚಾಚಿರುವೆ ಮೂಡ ಪಡುವಲ ಕಡೆಗೆ
ದಿಕ್ಕುಗಳ ಮಾರಿನಿಂದಳೆವ ತೆರದಿ;
ವ್ಯೋಮಕೇಶನ ಹೆಸರು ನಿನ್ನಿಂದಲಾಯ್ತೆನಲು
ಪೀಠಗೊಟ್ಟೆತ್ತಿರುವೆ ಶಿವನ, ಶಿರದಿ.

ಸೃಷ್ಟಿಸೀಮೆಯ ಸರ್ವ ಸೌಂದರ್ಯದಾವಾಸ
ನಿನ್ನ ತಪ್ಪಲು ತವರು ತ್ರಿಪುರಸುಂದರಿಗೆ;
ಸೃಷ್ಟಿಶೂನ್ಯಶ್ಮಶಾನಾಭಾಸ ಹಿಮಸೌಧ
ಮೆಚ್ಚಿನಾವಾಸ ಮಹದೇವದೇವನಿಗೆ.

ಸೃಷ್ಟಿ ಕಾರಣಕರ್ತೆ ಮಾತೆ ಲಲಿತೆಯನಿತ್ತೆ
ಓ ಹಿಮಾಲಯ, ಭಯಂಕರ ರುದ್ರಗೆ;
ಜಗದ ತಾಯ್ತಂದೆಗಳ್ಗಾಗಿ ಮನೆ ನಿನ್ನ ಶಿರ
ತಳೆಯಿತ್ತು ಹೆಸರು ಗೌರೀಶಂಕರ.

ಗಂಗೆಯನು ತಡೆದು ಕೈಹಿಡಿದು ಗೌರೀಪತಿ
ತೊರೆಯೆ ಬಾನ್‌ತೊರೆಗಾಗೆ ಸಾಕುತಂದೆ,
ಸರ್ವಕಾಲದಲವಳ ಜೀವನವ ಪೋಷಿಸುತ
ನಮ್ಮ ನಾಡಿಗೆ ನೀನೆ ಕರೆದು ತಂದೆ.

ಕ್ಷೀರವಾರಿಧಿಯಲ್ಲಿ ಹುಟ್ಟಿ ಮೈತಳೆದಂತೆ
ಹಿಮವಲ್ಕಲವ ಧರಿಸಿ ತಪನಿಂದಿಹೆ;
ನಿನ್ನ ತಂಪಿನ ತಪದ ಗುರಿಯೇನೊ ಗುಟ್ಟೇನೊ?
ರಣತಪ್ತ ಲೋಕಕ್ಕೆ ತಂಪೆರೆವುದೆ?

ಮಾನವತೆ ದೈವತ್ವಕೇರ್ವ ದಾರಿಯಿದೆಂದು
ಆ ತಪಸ್ಸೇತುಮಾರ್ಗವ ಮೊದಲು ತೋರಿ
ತವಸಿಗಳಿಗಳಲ್ಲಲ್ಲಿ ಎಡೆಮಾಡಿಕೊಟ್ಟಿರುವೆ
ಅವರ ತಪಕಾಗುತ್ತ ನಿತ್ಯ ಸಹಕಾರಿ,

೩

ಓ ಹಿಮವಂತ,
ಇದು ಪುರಾತನ ಮಹಿಮೆ, ನಿನ್ನ ಹಿಂದಿನ ಗರಿಮೆ,–
ಒಳಹುರುಳ ಹಿಡಿದು ಕಾಣುವ ಕಣ್ಗೆ ಅಚ್ಚರಿಯ ನಿಜಮೆ.
ಎಂದೆಂದಿಗೂ.

ಒಮ್ಮೆ ಆ ಕಡೆಗೆ, ಮೇಣಿನ್ನೊಮ್ಮೆ ಈ ಕಡೆಗೆ,
ಮಗುದೊಮ್ಮೆ ಮೇಲ್ಗಡೆಗೆ
ದಿಟ್ಟಿಹಾಯಿಸಿ ನಿಟ್ಟಿಸಲುಬಹುದೆ ನಿನ್ನ ಭವ್ಯಾಕೃತಿಯ?
ಬೃಹತ್ತು ಮಹತ್ತು ಉನ್ನತೋನ್ನತಿವಡೆದು
ಭೂಮಂಡಲದ ಭೂಮಭೂಮಿಕೆಯನಾಕ್ರಮಿಸಿ
ದಿವವ ತಿವಿವ ಕೋಡುಗಳಿಂದ ಕಂಗೊಳಿಪ
ವಿಶ್ವಂಭರನ ವೃಷಭವಾಹನವೊ ಎನುವಂತೆ

ಭೂವ್ಯೋಮವ್ಯಾಪಿಯಾಗಿರುವ ನಿನ್ನೆತ್ತರದ ಬಿತ್ತರವ-
ನಿಟ್ಟಿಸಲಹುದೆ ಮಾನವನ ಕುಬ್ಜದೃಷ್ಟಿ?

ಇದು ಸಟೆಯೆ?-
"ಎತ್ತರಕ್ಕೇರುವೊಡೆ ಬೇಕು ಬಿತ್ತರ ಕೆಳಗೆ."
ಯುಗಾಯುಗಾಂತರದಿಂದ, ಮಾನವನ ಕರೆಯುತಿಹೆ
ಸರ್ವಸಿದ್ಧಿಯ ಪರ್ವತಾರೋಹಣಕ್ಕೆ,
ಊರ್ಧ್ವಮುಖಯಾತ್ರೆಗೆ,
ಶಿಖರಸಾಧನೆಗೆ.

ಓ ಹಿಮತೇಜ! ಪರ್ವತರಾಜ!
ಪುರಾಣ ಮಹಿಮಾಭಾಜ:
ಕವಿ ಋಷಿ ವೃಂದ ಸ್ತೋತ್ರಪಾತ್ರ ನೀ-
ನಿದು ಅತಿಶಯವೆ? -ಬಹು ಸಹಜ.

೪

ಓ ಹಿಮವಂತ!
ಅಂದಿಗು ಇಂದಿಗು ಎಂದೆಂದಿಗು ನೀ
ಎತ್ತರದೇರಿಗೆ ದೃಷ್ಟಾಂತ.
ನಿನ್ನ ಶಿಖರ ಆ ಗೌರೀಶಂಕರ
ನೀಡುತ್ತಿದೆ ಆಹ್ವಾನ ನಿರಂತರ:
ಬನ್ನಿರಿ ಬನ್ನಿರಿ! ಏರಿರಿ ಏರಿರಿ!

ಅಲ್ಲಿ ಅದೋ ಮೇಲ್‌ಮೇಲ್ಗಡೆ ನೋಡಿರಿ
ಹಕ್ಕಿಹಾರಿಗೂ ಮಿಕ್ಕಿಹ ಮೇಲ್‌ಗುರಿ;
ಕೆಳಗೆ ತೆವಳೆ ನೀವ್ ಹೆಳವರೇ ಸರಿ,
ಏರಿರಿ ಏರಿರಿ ಮೇಲಕ್ಕೇರಿರಿ
ಏರುತೇರುತ್ತ ಎತ್ತರ ಎತ್ತರ
ಸಾರುತಿರುವುದು ಹತ್ತಿರ ಹತ್ತಿರ:

ಮಾನವತೆಯ ಗುರಿ ಗೌರೀಶಂಕರ,
ಸಿದ್ಧಿಯ ಕೈಸಿರಿ ಉತ್ತರೋತ್ತರ,
ಮರೆಯಿರಿ ಜೊತೆಯಲಿ ಬಾರದೆ ಸತ್ತರ
ಕರೆಯಿರಿ ಸಿದ್ಧಿಗೆ ಜೀವನ ತೆತ್ತರ,
ಗುರಿಯ ಗುಡಿಯಲಿಹ ಗೌರೀಶಂಕರ–
ದರ್ಶನ ಕಾದಿದೆ ನಿಮಗೆ ನಿರಂತರ;
ಎಲ್ಲವನೆಲ್ಲವನುಳಿಯುತ ಕೆಳಗಡೆ
ಗುರಿಯ ಮೆಟ್ಟುತ್ತ ನಿಲ್ಲೆ, ನಿಲುಗಡೆ:
        ಗೆಲುವಿನ ಬಾವುಟ ನಟ್ಟು
        ಏರಿತಕ್ಕೆ ಗುರುತೊಂದನ್ನಿಟ್ಟು
                ಇಳಿಯಿರಿ ಕೆಳಗಡೆಗೆ
ಮರಳಿ ಏರಲು ಮೇಳ್ಗಡೆಗೆ
ಆರ್ಪರನೊಯ್ಯಲು ಗುರಿಯೆಡೆಗೆ.

೫

ಹುಟ್ಟುತೊಟ್ಟಲಿನಿಂದ ನಮ್ಮ ನಾಡವರ ಬಯಕೆ
ಕಟ್ಟುಮೆಟ್ಟಲನಿಟ್ಟು ಏರುತಿದೆ ದಿವಕೆ:
ಮುಟ್ಟಲಿ, ಮುಟ್ಟದಿರಲಿ, ದಿವವ–
ಹೇರಾಸೆ ಹೆಬ್ಬೆಟ್ಟವಾಗಿ, ಹಟ ಹಿಮಾಲಯವಾಗಿ!
ಇಂತು–
ನಾಡ ತಪವೇ ಮೂರ್ತಿವೆತ್ತ ನೀನು,–
ಆತ್ತಣೆತ್ತಣಿನಿಂದ ಬೀಸಿ ಬಹ ಕುಳಿರ್ಗಾಳಿ
                                        ಕೆಡಕುಗಾಳಿಗಳ ತಡೆಯೆ
ತಾನೆ ಕುಳಿರೊಡಲಾಗಿ, ಮಾರೊಡ್ಡು ಗೋಡೆಯಾಗಿ,
ಶಾಂತಿಯಲಿ ತಣ್ಣಿನಲಿ ಚಂದ್ರನಿಗೆ ಮುಡಿ ತಾಗಿ,
ಮಿಂಚು ಚಿಮುಕಿಸಿದಂತೆ ನಕ್ಷತ್ರಲೋಕವನೆ
ಬೆಳ್ನವಿರ ತಲೆಗೆ ತೊಡವಾಗಿರಿಸಿ,
ಲೋಕಕಲ್ಯಾಣಕ್ಕೆ ನಾಕವನೆ ಸೂರೆಗೈವ ಸಾಹಸಿ ತವಸಿ
ತಾನೆನಿಸಿ ನಿಶ್ಚಲ ತಪೋನಿಷ್ಠೆಯಿಂದ,

ಸಾಧು ಗೋಧನಮಾತೆ ಕಾಮಧೇನುವ ಬಯಸಿ
ಕೈಯ ತುಡುಕಿದ ಕೌಶಿಕಕ್ಷಾತ್ರವನ್ನಣೆವ
ಉದ್ದಂಡ ಯೋಗದಂಡವನಿಟ್ಟು ಮಂಡಲವ ಹಾಕಿ
ಸ್ವಸ್ಥಸುಸ್ಥಿರ ಸಮಾಧಾನ ಚಿತ್ತತೆಯಿಂದ
ಕಾಪು ಕುಳಿತಿರುವ
ವಿಪ್ರಋಷಿ ವಾಸಿಷ್ಠನಾಗಿರುವೆ, ಸುಕ್ಷೇಮರಕ್ಷೆಯೆನಿಸಿ,
ಓ ಹಿಮಾಲಯವೇ!

೭

ಮುನ್ನಿನಂತೆಯೆ ದೌಷ್ಟ್ಯದಾಕ್ರಮಣಶೀಲಕ್ಕೆ
ಪ್ರತಿರೋಧವೊಡ್ಡಯ್ಯ ಪರ್ವತಾಗ್ರಣಿಯೆ;
ನಿನ್ನ ಕೂರ್ಮೆಯ ಕೆಳೆಯ ನೀಡಿ ತಾಪಸ ಜನರ
ತಪವ ವರ್ಧಿಸು ತಪಶ್ಶೀಲ ಶೈಲಾ!
ಉನ್ನತಧ್ಯೇಯ ಧ್ರುವತಾರೆಯನು ಮುಡಿದಿರುವ
ನಿನ್ನ ಮುಡಿ ವಿಶ್ವಕ್ಕೆ ದಿಕ್ಸೂಚಿಯಾಗಿ,
ದೇವಸಾನ್ನಿಧ್ಯಕ್ಕೆ ಸರ್ವರಿಗು ಸುಲಭವಹ
ಏರುದಾರಿಯ ತೋರು ದೇವತಾತ್ಮ;
ಹೈಮಧವಳಧ್ವಜವ ಹಿಡಿದ ನಿನ್ನಯ ನೆರಳು
ಆಗಲಯ್ ಶರಣರಿಗೆ ಶಾಂತಿಧಾಮ;
ಸುತ್ತಲೂ ಸೌಹಾರ್ದವನು ಬೀರುತಿರಲಯ್ಯ ನಿನ್ನ ಹಿಮಹಾಸ
ಎತ್ತಲೂ ಮಾರ್ಮೊಳಗಿ ಇಳೆಗೆ ಕೇಳುಗೆ ನಿನ್ನ ಮೌನ ಶಮಘೋಷ

ಡಿಸೆಂಬರ್ ೧೯೫೧]

## ಚೆಲುವ ಟಪಾಲು

ನೋಡದೊ ಸಂಧ್ಯಾಗಗನ ಗಂಗೆಯಲಿ
ಸಾಗಿದೆ ಮುಗಿಲ್‌ದೋಣಿಯ ಸಾಲು–
ಯಾರೂ ಪಯಣಿಗರೇ ಇಲ್ಲ:
ಸ್ವರ್ಗಕ್ಕೆ ಭೂಮಿಯ ಚೆಲುವ ಟಪಾಲು,

೧೯೬೯]

## ವೆಂಕಟ–ಪತಿ ಸುಪ್ರಭಾತ

ಏಳೇಳಿ ಮಹರಾಯ್ರೆ, ಕಾಫಿ ಪುಡಿಯೇ ಇಲ್ಲ,
ಏಳಿ, ಏಳಾಯ್ತು ಗಂಟೆ!
ಏಳಿ, ನಮ್ಮ ಕುಮಾರ 'ಇಸ್ಕೂಲಿಗ್ಹೋಗಲ್ಲ'
ಅಂತ ಮಾಡ್ತಿದ್ದಾನೆ ತುಂಬ ತಂಟೆ!
ನಾನು ಪದ್ಮಾವತಿ, ನೀವು ವೆಂಕಟಪತಿ–
ಕೇಳಿ, ನೆರೆಮನೆಯ ರೇಡಿಯೊ ಸುಪ್ರಭಾತ;
ಭಾನು ಮಹಡಿಯ ಮನೆಯ ಮೇಲೆ ತಲೆಹಾಕಿದನು,
ವಾಕಿಂಗು ಹೊರಟರದೊ ಬೀದಿತಾತ.

ಇರುವೆರಡು ಸೀಳು ಹಸಿ; ಆಗಿಲ್ಲ ನೀರು ಬಿಸಿ;
ನಮಗೆ ದೊರೆಯೋದಿಲ್ಲ ಸೌದೆ ಸಾಲ;
ತರದೆ ಹೋದರೆ ಸೌದೆ, ನಮ್ಮ ಸ್ನಾನಕ್ಕಿಂದು
ನಿಮ್ಮ ಗೋಳ್ಕವಿತೆಯೇ ಗಂಗಾಜಲ!

ಕವಿಯೆಂದು ಕೈಹಿಡಿದೆ; ಹೆಸರಿಗೇ ಮರುಳಾದೆ;
ಬೀಯೆ ಬೀಯೆಲ್ಲಂತ ಭ್ರಾಂತಳಾದೆ;
ಕವಿತೆಗೋ, ಕಾಸಿಲ್ಲ; ಬೋರ್ಡಿಗೋ, ಬೆಲೆಯಿಲ್ಲ;
ಬೆಳಗಾದ ಕೂಡಲೇ ಸಾಲದ ತಗಾದೆ.

ಬುಡುಬುಡುಕೆಯವ ಬಂದ, ಒಳ್ಳೆ ಶಕುನವ ತಂದ,
'ನೀವು ಪತ್ತೇದಾರಿ ಕಾದಂಬರಿ
ಬಡಬಡನೆ ಬರೆಬರೆದು ಭಾಗ್ಯ ತರುವಿರಿ' ಎಂದ–
ಏಳಿ, ಬೇಗೆದ್ದೇಳಿ–ಶುರುಮಾಡಿರಿ.

ಶೆಟ್ಟರಿನ್ನೇನು ಬರಬಹುದು ಬಾಗಿಲ ಮುಂದೆ–
ಏಳಿ, ಬೇಗನೆ ಎದ್ದು ಹೊರಟುಹೋಗಿ;

ಕೊಟ್ಟ ಸಾಲಕೆ ಕಾಸು ಬಡ್ಡಿಯೂ ಕೊಟ್ಟಿಲ್ಲ-
ಓ! ಬಂದರಕೊ, ನಿಮ್ಮ ಹೆಸರು ಕೂಗಿ.

೧೯೭೦]

## ಪ್ರ(ಗ)ತಿಗಾಮಿ

ಪ್ರತಿಗಾಮಿಗೂ ಪ್ರ(ಗ)ತಿಗಾಮಿಗೂ ವ್ಯತ್ಯಾಸ
ಒಂದಕ್ಷರದೊಳಿಹುದು; ಅದು 'ಗ' ಕಾರ.
ಹಿಂದಕಿವ ಮುಂದಕವ ಚಲಿಸಿ ಒಂದೆಡೆ ಸೇರಿ
ಗತಿಸಿದಾಗಿಬ್ಬರಿಗು ಸಮ 'ಗ' ಕಾರ.

೭-೩-೧೯೭೧]

## ಕಾವ್ಯ

ಮುಡಿಯೆ ಕಾವ್ಯವು ಕುಸುಮ ಹಿಡಿಯೆ ಕೈಯಲಿ ಖಡುಗ
ಹೊಡೆಯಲೆಚ್ಚರಗೊಳಿಪ ಭೇರೀನಿನಾದ;
ಕುಡಿಯೆ ಅಮೃತದ ಪಾನ ನಡೆಯೆ ದಾರಿಯ ದೀಪ
ಕಡೆಯೆ ಸುಜ್ಞಾನದಿಂ ತತ್ತ್ವಬೋಧ.

ಕೆಡೆನುಡಿವೆಯೇತಕ್ಕೆ ಕಾವ್ಯಕರ್ಮವ, ಕೆಳೆಯ,
ಕೆಲಸವಿಲ್ಲದರ ಒಣ ಹವ್ಯಾಸವೆಂದು;
ಹುಡಿಮಣ್ಣು ಹೂಬಿಡುವ ಇಂದ್ರಜಾಲವಿದಯ್ಯ-
ನೆಲ ಬೀಜಗಳ ಯೋಗ, ಸೃಜನೆ ಕಾವ್ಯ.

ಕಾವ್ಯಕಾಂತೆಯ ಕಿವಿಯ ಸವಿಯ ಮಾತಿನ ಮಧು
ಹೃದಯಕ್ಕೆ ಹಿತಕಾರಿ, ಮುದ್ದು ಮನಕೆ;
ಸೇವ್ಯಮಾದಾ ಕಾವ್ಯಮಧುವಿನೊಳು ಬೆರೆತಿಹುದು
ಹುದುಗಿದೌಷಧ ನಿನ್ನ ಆತ್ಮಗುಣಕೆ.

೧೨-೯-೧೯೬೧]

# ಒಡೆಯದ ಕನ್ನಡಿ

ಕಾವ್ಯ ಅನ್ನೋದ್ ಕನಡಿ ಸ್ವಾಮಿ,
ಲಾಗಾಯಿತ್ನಿಂದ್ ಇರೋದು:
ಯಾಕ್ ಹಾಗ್ ನನ್ ಮುಖ ನೋಡ್ತೀರಿ?
ಕನ್ನಡಿ ನೋಡಿ: ನಿಮ್ಮುಖ ನೋಡ್ಕೋಳೋದು.
ಶಂಕೆ ಯಾಕೆ? ಸಂದೇಹ್ವ್ಯಾಕೆ?
ಕಾವ್ಯ ಅನ್ನೋದ್ ನಿಜವಾಗ್ಲೂ ಒಂದ್ಕನಡಿ
        ಆದರೆ ನೋಡಿ,
ಅದು ವಿಚಿತ್ರ ಕನಡಿ ಸ್ವಾಮಿ, ಮಾಯಾಬಜಾರಿಂದು:
ಇದ್ದದ್ದಿರೋ ಹಾಗೆ, ಇಲ್ಲದ ಹಾಗೆ, ಇರ್ಬೇಕಾದ್ಹಾಗೆ–
ಹಿಂದಿಂದು ಇಂದಿಂದು ಮುಂದಿಂದು–
ಕಂಡದ್ದು ಕೇಳಿದ್ದು ಕಟ್ಟಿದ್ದು–
        ನಾನು ನೀವು
        ಅದು ಇದು ಉದು
        ಆತ ಈತ ಊತ
        ಆಕೆ ಈಕೆ ಊಕೆ–
                ಸಾಕೆ?
        ಇನ್ನೂ ಏನೇನೋ–
ಹೊರಗಿನ್ದು ಒಳಗಿನ್ದು
ಮೇಲಿನ್ದು ಕೇಳಗಿನ್ದು–
ಎಲ್ಲ ಅದರಲ್ ಕಾಣ್ಸುತ್ತೆ,
ತಸ್ವೀರ್ ಹಿಡಿದ್ಹಾಗ್ ತೋರ್ಸುತ್ತೆ;
ಕಾಣ್ಸೋದೊಂದೇ ಅಲ್ಲ ಸ್ವಾಮಿ,
ಕೇಳ್ಸೋ ಹಾಗೂ ಮಾಡುತ್ತೆ–
ಏನೇನೋ ಕಾಣ್ಸೋ ಹಾಗೆ
ಏನೇನೋ ಕೇಳ್ಸೋ ಹಾಗೆ
ಮಾಡುತ್ತೆ ಆ ಕನಡಿ–
                ರಸಲೇಪದ್ದು, ನುಡಿಗಾಜಿನ್ದು.

*        *        *

ಎಲ್ಲಿಕ್ಕುತ್ತೆ ಅಂದ್ರಾ?
ಮಾರೋ ಮಾಲಲ್ಲ, ಸ್ವಾಮಿ, ಅದು,
ಮಾರೋ ಮಾಲಲ್ಲ.
ಮುದ್ಮಗು ಮುಖದ್ ನಗು ಹಾಗೆ
ಹೆಂಡ್ತಿ ತೋರ್‍ಸೊ ಪ್ರೀತಿ ಹಾಗೆ
ಮೂಡಲ ಪಡುವಲ ಕೆಂಪಿನ ಹಾಗೆ
ತಿಂಗಳ ಬೆಳಕಿನ ತಂಪಿನ ಹಾಗೆ
ತಾನಾಗೇ ಕೈಗ್ ಬರ್‍ಬೇಕು;
ಅದಕ್ಕಿಲ್ಲ ಕಿಮ್ಮತ್ತು.
ಬಂತೋ, ಒಡೆಯೋದಿಲ್ಲ, ನಿಂಸ್ವತ್ತು:
ಅದೇ ಅದರ ಗಮ್ಮತ್ತು.

೨೬-೧೨-೧೯೬೮]

## ಪ್ರಾಸ

ಸುಲಭದಿ ದೊರೆತರೆ ಜೋಡಿಸು ಪ್ರಾಸ:
ಸಂತೋಷ;
ಅದರಿಂದಿದೆ ಕವಿತೆಗೆ ತುಸ ಮೆರುಗು,
ಪ್ರಾಸಕ್ಕಾಗಿಯೆ ಪಡುವ ಪ್ರಯಾಸ
ಕವಿತೆಯ ಕೊರಳಿಗೆ ಪಾಶ;
ನಿತ್ಯದ ಕೊರಗು.
ಈ ಮಾತಿಗೆ ಈ ಪದ್ಯವೆ ಸಾಕ್ಷಿ:
ನಿನಗಿರೆ 'ಕವಿತಾಕ್ಷಿ'

ಇನ್ನೂ ಪ್ರಾಸಗಳೇನೋ ಉಂಟು:
ಮೋಸ, ಹಾಸ, ದೋಷ, ರೋಷ....
ದ್ರಾಕ್ಷಿ, ಕುಕ್ಷಿ, ಕಕ್ಷಿ, ಭಕ್ಷಿ.....
(ಹಕ್ಷಿ, ಹಕ್ಷಿ.....

ಇದು ನಡುವೇನು)
ಇನ್ನೆಲ್ಲಿಯ ಕವಿತೆಯ ಜೇನು?
ದೊರೆತನಿತೋ ಬರಿ ಅಂಟಂಟು,
ಇನಿತೂ ಸವಿಯಿಲ್ಲ:
ಸಾಕ್ಷಿ ಪ್ರಾಸದ ಅತಿ ನಂಟು.
ಪ್ರಾಸದ ದಾಸನು ಕವಿಯಲ್ಲ!

೧೬-೬-೧೯೫೨]

## ಅರಳಲಾರದ ಮೊಗ್ಗು

ಮೊಗ್ಗು ಹೆಣಗುತಿದೆ-ಅರಳಲು
ಮೊಗ್ಗು ಹೆಣಗುತಿದೆ.

ಬಿಸಿಲ ಜಳಕದ ಹುರುಪು ದೊರಕದೆ
ಗಾಳಿ-ಗೆಳೆತನ ನಿಲುಕೆ
ನೆರಳ ಕತ್ತಲೆಗವಿಯ ಸೆರೆಯಲಿ
ತನ್ನ ಕಂಪನು ಬೀರಲಾರದೆ-

ಮೊಗ್ಗು ಹೆಣಗುತಿದೆ-ಅರಳದೆ
ಮೊಗ್ಗು ಒಣಗುತಿದೆ.

(ದುಃಖಿತನಾದ ಉತ್ತೇಜನರಹಿತ ತರುಣ ಕವಿಯೊಬ್ಬನನ್ನು ನೆನೆದು)

೨೭-೧೨-೫೯]

# ಅಪವಾದ

ಕಮಲೆಯೊಬ್ಬಳು ತರುಣಿ, ಬಹಳ ಚೆಲುವೆ;
ಅಪವಾದ ಭೀತಿಯಿಂದೊಡಲುಳಿದ ವಿಧವೆ.
ಬೇಡದವರುಸಿರೊಂದು–
ಇವಳೆದಗೆ ಕಿಚ್ಚಿಟ್ಟು ಕಳೆಯ ಕುಗ್ಗಿಸಿತು,
ಭಯದ ಶೂಲವ ನಟ್ಟು ತಲೆಯ ತಗ್ಗಿಸಿತು;
ಬಾಳಿಗಿಂತಲು ಸಾವು ಸವಿಯೆನಿಸಿತು.

ನಂಜುಗುವ ಮೆಲ್ನುಡಿಯು–
ಇವಳ ಬಾಳಿನ ಬೇರ್ಗೆ ಬೆನ್ನೀರ ಹೊಯ್ದು,
ಅರಳದಿಹ ಸಮವೊಂದ ಮೊಗ್ಗಿನಲೆ ಕೊಯ್ದು,
ಇಳೆಗೆಲ್ಲ ಕೇಳಿತಾವೊಂದು ನುಡಿಯು,

ಕೇಡಿಗರ ಪಿಸುಮಾತು–
ಇವಳ ನಡತೆಯ ಕುರಿತು ದೂರು ಹಬ್ಬಿಸಿತು,
ಸಂಶಯದ ಸರ್ಪವನು ಸೃಜಿಸಿ ಎಬ್ಬಿಸಿತು:
ಎಲ್ಲೆಲ್ಲಿಯೂ, ಅಯ್ಯೊ! ಇವಳ ಮಾತು!

ಕಟುಕಿಯರ ಕೈಸನ್ನೆ–
ಕೂರ್ವಾಳಿನಂತೊಗೆದು ಚಿಗಿದು ಬರುತಿರಲು
ಅದರ ಹತಿಯನು ತಡೆಯದಾಯ್ತಿವಳ ಕೊರಲು;
ತಡೆಯಲಾರದೆ ತಲೆಯನೊಡ್ಡಿದಳು ಕನ್ನೆ.

ಚಿಂತಿಸುವ ಮನದೊಳಗೆ
ಅಪವಾದವನು ಕೇಳಿ ಹೃದಯ ನಡುನಡುಗೆ.
ಅದನೆದುರಿಸಲು ಇದ್ದ ಶಕ್ತಿಯೆಲ್ಲವು ಉಡುಗೆ–
'ತಾಯಿ ಪೊರೆ' ಎಂದು ಹಾರಿದಳು ಹೊಳೆಗೆ!

ಡಿಸೆಂಬರ್ ೧೯೩೨]

## ಮಾನವ ಪ್ರಾಣಿ

ನಿನ್ನ ಕೈಯಲಿ ಕರಡಿ ನಿನ್ನ ಮೈಯಲಿ ಹುಲಿ
ಮನದಲ್ಲಿ ಮರ–ಕುಣಿವ ಮುದಿ ಮರ್ಕಟ
ನಿನ್ನುದರದಲಿ ತೋಳ ಎದೆಯಲ್ಲಿ ರಣಹದ್ದು
ನೆಲಸಿರಲು ನೀ ಮನುಜನೆಂತೊ, ಅಕಟ!

## ಕುರಿಯ ಮೆರೆವಣಿಗೆ

೧

ಸಾಗಿತ್ತು ಪೇಟೆಯಲಿ ಕುರಿಯ ಮೆರೆವಣಿಗೆ–
ಆ ಉದ್ದದಿಂದ ಈ ಉದ್ದಕ್ಕೆ, ಸಾಲಾಗಿ,
ಸಾಗಿತ್ತು ಸಂಜೆಯಲಿ ಕುರಿಯ ಮೆರೆವಣಿಗೆ;
ಬಳ್ಳಿಬೆಳಕುಗಳಿಂದ ಕೊಳವೆದೀಪಗಳಿಂದ
ಒಳ್ಳೆ ಸರಕುಗಳೆಂದು ಸಾರುವಂಗಡಿ ಸಾಲ ನಡುವೆ
ಮೂಸಿ ಮುಟ್ಟುವ, ನೋಡಿ ಕೊಳ್ಳುವ, ಗಿಜಿಗಿಜಿ ಗಿರಾಕಿಗಳ
ಕಣ್–ಗಮನ ಸೆಳೆದು,
ಸರಸರನೆ ಸಡಗರಿಸಿ ಬೆಡಗು ನಡಗೆಯ ಮೆರೆದು
ಸಾಗಿತ್ತು ಸಾಲಾಗಿ, ಕುರಿಯ ಮೆರೆವಣಿಗೆ,
ಕೂಗಿ ಕರೆವಂತೆ ವಾದ್ಯದ ಮೇಳ ಮೊಳಗೆ,
ಹಿಡಿದ ದೀಪದ ಸಾಲು ಕುರಿಹಿಂಡ ಬೆಳಗೆ.

೨

ಕೆಲ ಕುರಿಯ ಕೊರಳಲ್ಲಿ ಝಣಝಣಿಪ ಕಿರುಗೆಜ್ಜೆ–
ಗೆಜ್ಜೆ–ಝಣಝಣಕಿಟ್ಟ ಓಡು–ನಡೆ–ಹೆಜ್ಜೆ;
ಕತ್ತರಿಸಿ ತುಪ್ಪಟವ ತೆಗೆದು, ಸಾಫಾಗಿ ಕಾಣುವ, ಮೆಯ್ಯಿ;
ಮಾರಿಗುಡಿ–ಗಂಧಕೆನೆ, ಅರಚು–ಬ್ಯಾ–ಬ್ಯಾ–ಬಾಯಿ;
ಪ್ರಾಣತೆಗೆಯುವ ನೇಣು ಗೋಣಾಲೇ ಕಂಬಳಿಯ ಹುರಿಯ ಸಿಂಗಾರ

ಕೊಬ್ಬಿ ಬೆಳೆದಿಹ ಕುರಿಯ–ಮಂದೆ–ನಾಯಕ–ಕುರಿಗೆ
ಬಣ್ಣ ಬಣ್ಣದ ಹೂವನಚ್ಚಿಟ್ಟ ಹಚ್ಚಡದ ಹೊದಿಕೆ, ಬೆನ್ಗೆ.
ಎಲ್ಲಿಗೆ, ಏತಕ್ಕೆ, ನಮಗೇಕೆ ಮೆರೆವಣಿಗೆ?–
ಎಂದುದರಿಯದ ಕುರಿಯ ಮೆರೆವಣಿಗೆ, ಸಾಗಿದೆ.

೩

"ಏಕೊ ಈ ಮೆರೆವಣಿಗೆ, ಈ ಕುರಿಯ ಮಂದೆಗೆ?
ನಾಳೆ ಸಲ್ಲುವುದೇನು ಹರಕೆ, ಮಾರಿಯ ಗುಡಿಗೆ?"
ಎಂದೊಬ್ಬ ದಾರಿಗುರಿ–ನನ್ನಂತೆ ಬೆರಗುಗೊಂಡಿಹ ಬೆಪ್ಪ–
ಕೇಳೆ ನನ್ನನು, ನುಡಿದೆ: 'ಗೊತ್ತಿಲ್ಲವಪ್ಪ,
ಚೈತ್ರಮಾನಸವಿದಲ್ಲ, ಮಾರ್ನೋಮಿ ಮೊದಲಲ್ಲ,
ಎಲ್ಲಿ ಬಂತೀಗ ಮಾರಿಯ ಹಬ್ಬ? ಇಲ್ಲ.
ಹರಕೆ ಹೊತ್ತಿಹ ಮುಗ್ಧ ಭಕ್ತ ಜನರಲ್ಲ, ಈ ಗುಂಪು.
ನೋಡಿ, ಅವರುಡುಪು : ರಂಗುರಂಗಿನ ಷರಟು,
ಪೈಜಾಮ ಬುಷ್‌ಕೋಟು–
ಧೂಪ ಊದಿನ ಬತ್ತಿ ದೀಪ ಕಣಿಗಿಲ ಹೂವು
ಮೆರೆವ ತಂಬಿಟ್ಟುಂಡೆ ತಲೆ–ಹೊತ್ತ ಹೆಂಗಳೆಯರಿಲ್ಲ.
ಇಷ್ಟೇ ಅಲ್ಲ: ಎಲ್ಲ ದೇವರ ಜೊತೆಗೆ,
ಅಣುಬಾಂಬಿನೀ ಯುಗದ ವಿಷಯದ ಗಾಳಿಗೆ ಬೆದರಿ
ಮಾರಿಯೂ ಮೈಗರೆದು ಅಡಗಿಕೊಂಡಿಹಳು.
ಕಾಣೆನೇತಕೊ, ಆಹ! ಈ ಪರಿಯ ಮೆರೆವಣಿಗೆ!"

೪

ಇದ್ದಕ್ಕಿದ್ದಂತೆಯೆ, ಮೊಳಗ ತೊಡಗಿತು ಬ್ಯಾಂಡು,
ಚೆದರಿತ್ತು ಅತ್ತಿತ್ತ, ಸಾಲೊಡೆದ ಕುರಿಹಿಂಡು–
ಕೆಲವು, ಕಟ್ಟಿಗೆಕಾಲನೂರಿ ನಿಂತವು ಮೊಂಡು–
ನಡೆದೀತೆ? ನಡೆದವು, ಬೆತ್ತಬಿಸಿಯುಂಡು.
ಇಂತು ಸಾಗಲು, ಒಬ್ಬ, ತುಟಿಗೆ ತುತ್ತುರಿಯಿಟ್ಟು
ಕೂಗಿದನು, ಬಯಲಾಯ್ತು ಮೆರೆವಣಿಗೆ–ಗುಟ್ಟು:

"ನಾಳೆಯೇ ಬನ್ನಿ: ಕೊಬ್ಬಿದ ಕುರಿಯ ಹೊಸ ಮಾಂಸ!"
ಮೆರೆವಣಿಗೆ, 'ಜೀವಂತ–ಅಡ್ವರ್‌ಟೈಸ್‌ಮೆಂಟು'!
ಕೊಬ್ಬಿದ ಕುರಿಯ ಕಂಡು, ಮೊದಲೇ ಹೊಳೆಯಲಿಲ್ಲ ನನಗೆ–
ಅನ್ನಸಾರುಂಬ ಜಂಜದ ಮೂಳೆ–ವೀರನಿಗೆ–
"ಕುರಿ ಕೊಬ್ಬಿದಷ್ಟೂ ಲಾಭ ಕುರುಬನಿಗೆ"
ಎಂಬ ಹಳೆಗಾದೆ: ನಾನೀಗ ಕುರಿಯಾದೆ.
ಸಾಗಿತು ಕಸಾಇಖಾನೆಯ ಕಡೆಗೆ, ಕುರಿಯ ಮೆರೆವಣಿಗೆ.

೫

ಹಳೆಗಾದೆ ಮರೆತರೂ ಹೊಸ ಸತ್ಯ ತೋರಿತೆನಗೆ:
"ನಾವೆಲ್ಲರೂ ಕುರಿ, ನಡೆಯುತಿದೆ ನಮ್ಮ ಮೆರೆವಣಿಗೆ–
ಯುದ್ಧಮಾರಿಯ ಗುಡಿಗೊ, ಕ್ಷಾಮದೇವತೆಯೆಡೆಗೊ,
ಕ್ರೌರ್ಯದಲಿ ನಲಿವ ನಿಷ್ಠುರ ರಾಜಕಾರಣಿಯ
ಔತಣದ ಅಡಗಡುವ ಬಾಣಸಿನ ಮನೆಗೊ–
ಕೊಂಬನಾರುಬನಾರೆಂಬುದರಿಯದ ಹುಂಬ.
ಕುರಿ–ತೆರನ ಅಜ್ಞತೆಯ ಮಬ್ಬು ತಬ್ಬಿಬ್ಬಿನಲಿ
ಗುರಿಕಾಣದಜ್ಞಾತದಾಳಕ್ಕೆ ನಡೆಯುತಿದೆ
ನಮ್ಮ ಮೆರೆವಣಿಗೆ–
ಕುರಿಯ ಮೆರೆವಣಿಗೆ!"

೧೯೬೩]

## ನಗರ ದೀಪದ ಜೊತೆ ಮಾತುಕತೆ

೧

ಏಕಾಂಗಿಯಾದೆನಗೆ ನಗರದೀಪದ ಜೊತೆ
ಇಂತಾಯ್ತು ಒಮ್ಮೆ ಮೌನದಲೆ ಮಾತುಕತೆ:

–"ಯಾರು ನೀನು?"
–"ಈ ಪ್ರಶ್ನೆ ಅನಗತ್ಯ: ನಾ ನಗರದೀಪ.
ನನ್ನ ಬಲ್ಲರು ನಗರದವರೆಲ್ಲ.
ನಗರ ಶಿಶುಗಳಿಗೆ ನಾ ನೆಲದ ಚಂದ್ರಮ,
ಏಕೆ ಶಿಶುಗಳಿಗೆ? ಎಲ್ಲರಿಗೂ.
ನನ್ನ ಸೌಮ್ಯಮಂದಪ್ರಕಾಶ ನಗರದಿರುಳಿನ ನಿತ್ಯ ಬೆಳುದಿಂಗಳು.
ಬೆಳುದಿಂದಗಳಿನ ತಂಗಳನ್ನ ಕವಿಗಳಿಗಿನ್ನೂ ನೆಗಡಿ ಹಿಡಿಸಿಲ್ಲವೆ?
ನನ್ನ ವರ್ಣಿಸರೇಕೊ ನಾನರಿಯೆ.
ನನ್ನ ಯಾರೆಂದು ಕೇಳಿದ ನೀನು
ಹಳ್ಳಿಯ ಗಮಾರ, ಚಿಮಣಿದೀಪದ ಭಕ್ತ,
ಇಲ್ಲವೋ, ಕಾಡ ಕವಿ–ಮಿಣುಕುಹುಳುಗಳ ಗೆಳೆಯ.
ನಾನಿರಲಿ ನೀನಾರು?"

–"ನಾನೊಬ್ಬ ಯಃಕಶ್ಚಿತ ನಗರದ ಬರಡು ಕವಿ:
ನನ್ನ ಕವಿತಾಶಕ್ತಿ ಮಸುಳುತಿದೆ,
ಕುಂಟುತಿದೆ ಕಲ್ಪನೆ, ಬತ್ತುತಿದೆ ಭಾವನೆ:
ನಕ್ಷತ ಸೂರ್ಯ ಚಂದ್ರರ ನೋಡುತಿಹೆನೆಳಮೆಯಿಂದ,
ಬತ್ತಿರುವುದವರೊಳೇ ಸ್ಫೂರ್ತಿಯ ಸೆಲೆ
ಹೊಸ ಬೆಳಕನರಸುತ್ತ ತೊಳಲುತಿರೆ,
ನಿತ್ಯವೂ ನಿನ್ನ ಕಂಡೂ ಕಾಣದಂತಿದ್ದ ನಾನಿಂದು ನಿನ್ನ ಕಂಡೆ.
ಓ! ನಗರದೀಪವೇ!
ನವ ನಾಗರಿಕತೆಯ
ಅಂತರಾತ್ಮಪ್ರಭಾಮೂರ್ತಿಯೇ,
ಅಂಧಕಾಸುರ ಭಂಜನಾ ಲೀಲಾ ವಿನೋದಿಯೇ,
ಕಾರಿರುಳ ಕನ್ನೆಗೆ ಧವಳವಸ್ತ್ರವನೀವ ದಾನಿಯೇ,
ನನ್ನ ಬಗೆ–ಮಂಕುಗತ್ತಲೆಯ ಕೊಲ್ಲು;
ನಿಲ್ಲು ಬಗೆಬೀದಿಯಲಿ ಹೊಸತು ಭಾವದ ಬೆಳಕುಗಂಬವಾಗಿ."

–"ಸಾಕಯ್ಯ ಸಾಕು ಈ ಹಳೆಯ ಹೊಗಳಿಕೆ ಲಂಚ:
ಮೀಸಲದು ನಿನ್ನಂಥ ಕವಿಗಳಿಗೆ, ಅಧಿಕಾರವ್ಯಭಿಚಾರಶೀಲರಿಗೆ.
ಇರಲಿರಲಿ. ಅರಿಯೆ ನೀನೆನ್ನ ನಿಜ ಮಹಿಮೆಯನು:
ದೂರಲೇತಕೆ ನಿನ್ನ, ಅರಿತವರು ವಿರಳ."

–"ತವಕಗೊಂಡಿಹೆನದನು ಅರಿಯಲೆಂದೇ:
ಅರುಹಣ್ಣ ಅರುಹು, ಎಂತದರ ಇರವು."

೨

–"ಆತ್ಮಪ್ರಶಂಸೆ ಸಲ್ಲದು, ದಿಟ.
ಲೋಕಕ್ಕೆ ಬೆಳಕ ನೀಡುವೆವೆನುವ ನೀವೇ
ಅದರಲ್ಲಿ ಮುಳುಗಿ ಮೀಯುತ್ತಿರಲು, ಮಿಂದು ಸಾಯುತ್ತಿರಲು,
ವಾಸ್ತವದ ಬೆಳಕ ನೀಡುತ್ತಿರುವ ನಾನೇಕೆ
ಅದರ ಮಾದಕ ಗುಟುಕ ಗುಟುಕರಿಸಬಾರದು?
'ರವಿ ಕಾಣದುದ ಕಾಣ್ಬ ಕವಿ' ಎಂಬ ಸೂಕ್ತಿಯನು
ಕೇಳಿರುವೆಯಲ್ಲವೆ?"
–"ಕವಿಯಾದ ನನಗೆ ಆ ಹೇಳಿಕೆಯಲುಂಟಲ್ಲ ಸ್ವಲ್ಪ ವಿಶ್ವಾಸ"
–"ಕವಿಸಹಜಗರ್ವ! ಇರಲಿರಲಿ.
ಸಂಜೆಗೆಂಪಿನ ಸೊಗಸ ಚಣದ ನೋಟಕೆ ಸೋತು,
'ಅಯ್ಯೊ ಹೋಯಿತೆ, ಎಂದು ಕತ್ತಲೆಯ ಬಯ್ಯುತ್ತ
ಮನೆಗೂಡ ಹೊಗುವ ಕವಿಪಕ್ಷಿಗಳಿಗೆಂತು
ಇರುಳ ನಡವಳಿಕೆಗಳು ಅರಿವುಗೊಳ್ಳುವುವು?
ರವಿಯಿರಲಿ ಕವಿಯಿರಲಿ,
ಪೋಲೀಸು ಪತ್ರಿಕಾಪ್ರತಿನಿಧಿಗಳೂ ಕಾಣದಿಹ ನೋಟಗಳ
ಕಾಂಬ ದೀಪದ ಕಂಬ ನಾನು:
ಇದೆ ನನ್ನ ಮಹಿಮೆ;
ನಿಂತೆಡೆಯೆ ನಿಂತೆಲ್ಲವನು ಕಾಂಬುದೇ
ಆ ಮಹಿಮೆಗಿಹ ಕೋಡು".
–"ನಿನ್ನ ಮಹಿಮಾ ದೀಪ್ತಿ ಕಿರಣ ಕೆಲವನು ಕಳುಹಿ

ನನ್ನ ತಲೆಗತ್ತಲೆಯ ನೀಗಿಸಯ್ಯ,
ಓ ಪ್ರಭಾ ಪ್ರಭುವೇ!"
–"ಅಂತಿರಲು, ಕೇಳಯ್ಯ, ಕೇಳು ಬೆಳಕಿನ ಗೆಳೆಯ:
ಮೊದಲು ಮಣಿವೆನು ನಾನು ವೈರಿಕತ್ತಲೆಗೆ–
ಸ್ಥಾನ ನನಗೆಲ್ಲಿಯದು ಕತ್ತಲಿಲ್ಲದರೆ?
ದಾರಿಗರ ದಾರಿನಡೆತಕ್ಕಷ್ಟೆ ನಾ ನೆರವು,
ಉಳಿದಂತೆ ನಾನವರಿಗೇಕೇಸರವನು?
ಮಿನುಗುಟ್ಟಿದರು ಕೂಡ ಮನೆದೀಪಕಿರುವ ಬೆಲೆ
ದಾರಿದೀಪಕ್ಕುಂಟೆ?
ದಾರಿದೀಪಕ್ಕೆ ದೀಪಾವಳಿಯಲ್ಲೂ ಇಲ್ಲ ಹಬ್ಬದ ಸಡಗರ,
ಇರಲಿ. ನಾನದಕೆ ಕೊರಗೆ.
ಜಗದ ಕಣ್ ಸೂರ್ಯನೆಲ್ಲರಿಗು ಸಮ ಹಗಲಿನಲಿ;
ನಾನಂತೆ, ಇರುಳಿನಲಿ:
ನಿರ್ಭಯದ ಒಳಿತೆಲ್ಲ ನನ್ನ ಬೆಳಕೊಳು ಮೀನು–
ಈಸಿ ಸಾಗುವುವು, ಈಸು ನೆನೆಯದೆ ನನ್ನ–
ಅದರಿಂದ ನನಗಿಲ್ಲ ಕೊರಗು ಮರುಗು.
ಪ್ರತ್ಯುಪಕೃತಿಯ ನಿರೀಕ್ಷೆಯಿರೆ, ಉಪಕೃತಿಯಲ್ಲ ಉಪಕೃತಿ,
ಬಾಚಿ ತಬ್ಬುವುವೆನ್ನ ಬೆಳಕಿನಗಣಿತ ಬಾಹು ಸರ್ವರನು ಸಮನಾಗಿ:
ಕಂಡುಕ ಬಂದೆನ್ನ ತಬ್ಬುವನು ನಲ್ಲೆಯ ನೆನೆದು,
ಪ್ರಿಯವಚನ ತೊದಲುವನು; ನನ್ನ ನಿಶ್ಚಲ ಮೌನ
ಸ್ವರ್ಗ ಸುಖವವನಿಗೆ, ಮಾಡೆನುಪಹಾಸ.
ಬೀದಿನಾಯ್ ಬೀದಿಲಾಂದ್ರದ ಕಂಬದ ಕೆಳೆತನ ಬಯಸಿದರೆ ತಪ್ಪೇನು?
ನಗಬೇಡ ಕವಿಯೆ,
ಒಂಟಿಗಾಲೆತ್ತಿ ನನಗರ್ಪಿಸುವುದಾ ಶ್ವಾನ ಪಾದ್ಯವನು;
ನಾಯ್ಗೆ ನಾ ಮುನಿಯೆ.
('ಶುನಿಚೈವ ಶ್ವಪಾಕೇವ ಪಂಡಿತಾಃ ಸಮದರ್ಶಿನಃ' ಅಲ್ಲವೆ?)
ಹತಭಾಗಿನಿಯ ಕತೆಯ ಕೇಳೀಗ:
ಒಬ್ಬಳಿದ್ದಳು ಚೆಲುವೆ, ವಿಧವೆ; ಸಂಭಾವಿತನ ಸವಿಸಖ್ಯ
ಲಭಿಸಿತವಳಿಗೆ; ಇದೇ ಗೊತ್ತಿನೆಡೆ ದಿನನಿತ್ಯ;

ಇಲ್ಲಿಯೇ ಸೇರುವರು, ಎಲ್ಲಿಗೋ ತೆರಳುವರು,
ಇಲ್ಲಿಗೇ ಮರಳುವರು ಬೀಳ್ಕೊಳ್ಳುವಾಗ;
ನನ್ನ ಬೆಳಕಿನ ಸಾಕ್ಷ್ಯದಲಿ ಬೆಳೆಯಿತಿಂತವರ ಅನುರಾಗ.
ಇರಲಿರಲು ಹೆಣ್ಣ ಭೋಗದ ಬಳ್ಳಿ ಹೀಚು ಕಚ್ಚಿತು;
ಗಂಡು, ಕಾಲಿಗೆ ಬಳ್ಳಿ ತೊಡರುಸುತ್ತುವುದೆಂದು ಅದ ತಳ್ಳಿ ನೂಕಿದನು.
ನಿಷ್ಠೆ ತೋರಿದ ನೀರೆ ನೀರನ ನಿರೀಕ್ಷಿಸುತ
ನನ್ನ ಸಾಕ್ಷ್ಯವ ನೆಮ್ಮಿ ಇಲ್ಲಿಗೆ ಬರುವಳು,
ಕುಳ್ಳಿರುವಳೂಡಿಸುತ ಕಂದನಿಗೆ ಎದೆಹಾಲ;
ಕಂದನನು ಕೊಟ್ಟಾತ ತಂದೆಯಾಗದೆ ತೊರೆಯೆ–
ಕಂದನೇನಾಯಿತೋ ನಾ ಕಾಣೆ, ತೆರಪವಳ ತೊಡೆತೊಟ್ಟಿಲು–
ಅವಳ ಮೈ ಮುಚ್ಚುತಿತ್ತೆನ್ನ ಬೆಳಕಿನ ಬಟ್ಟೆ ಕೆಲಕಾಲ.
ಹೊಟ್ಟೆಯನ್ನವ ಕೇಳೆ, ಈಗವಳು ಬೀದಿಸೂಳೆ;
ವಾಸ ಜಗಲಿಯ ಮೇಲೆ ಆ ಪಾಳುಮನೆಯ,
ಸುತ್ತ ಕತ್ತಲೆಯ ಸೊಳ್ಳೆಯ ಪರದೆಯ ಮರೆ.
ಎನಿತೊ ಸಲ ನನ್ನ ಬಳಿಯೇ ನಡೆದುಹೋಗಿಹನು ಆ ದ್ರೋಹಿ,
ತನ್ನ ಪೂರ್ವದ ನಲ್ಲೆಯನು ಕಂಡರೂ ಕಾಣದಂತೆ.
ಕತ್ತಲೆಯ ಬತ್ತಲೆಯ ವ್ಯವಹಾರವಿನ್ನೆಷ್ಟೊ!
ಬಿತ್ತರಿಸಲವುಗಳನು, ಹೊಲ್ಲ ನಡತೆಯ ಕೊಚ್ಚೆಗೆಸೆದಂತೆ ಕಲ್ಲ.
ಇಂಥವಂಥವು ಎನದೆ ನಾ ಕಂಡ ಸಂಗತಿಗಳಿನ್ನೆಷ್ಟೊ,
ಲೆಕ್ಕಸಿಕ್ಕದು ಯೆಣಿಕೆಗೊಕ್ಕಣಿಕೆಗೆ!
ಚಿತ್ರಗುಪ್ತನ ಕಿವಿಗೆ; ಕವಿಯ ಕೇಳ್ಮೆಗೆ ಸಲ್ಲ."

೩

–"ಓ ಸರ್ವಸಾಕ್ಷಿ! ಸೂಕ್ಷ್ಮದಲಿ ತಿಳಿಸು ಕೆಲವ,
ಕಾಣಿಸಯ್ಯಾ ನಗರ ಜೀವನದ ನೈಜದಿರವ.

–"ಅಂತಾದೊಡೆರೆವೆನಾಲಿಸು, ಕವಿಯೆ:
ನನ್ನ ಬೆಳಕಂಗಳದಿ ತಿರುಪೆತಂಗಳ ತಿಂದು
ನಲಿದಿಲ್ಲೆ ಪವಡಿಸಿದ ತಿರುಕದಂಪತಿಗೆನ್ನ ಬೆಳಕಿನೆದೆ ಮರುಗಿಹುದು,

ಕಿರಣ ಕರುಣೆಯ ಬೆರಳನಾಡಿಸುತ ಮೈಮೇಲೆ.
ನನ್ನ ಬೆಳಕಿನಲೋದಿ ಕಡುಬಡವ ವಿದ್ಯಾರ್ಥಿ
ತಿಳಿವ ಬೆಳಕಲಿ ಮಿಂದು ಧನ್ಯನಾದುದ ಕಂಡು ಹಿಗ್ಗಿಹೆನು.
ಒಲವಿನೋಲೆಗಳೆನಿತೊ ನನ್ನ ನಂಬುತ ತಮ್ಮ
ಎದೆದೆರೆದು, ಎದೆಗಳನ್ನರಳಿಸಿವೆ, ನಾನಲಿಯೆ.
ಯಾರ ಮೇಲೋ ಕೋಪ–ನನ್ನ ತಲೆಯೊಡೆಯುವರು,
ಕಳ್ಳಪೇಟೆಗೆ ಸರಕುಸಾಗಣೆಯ ಕಂಡಿಹೆನು,
ಕಳ್ಳಲೆಕ್ಕದ ಬರಹಕೂ ನೆರವು ನೀಡಿಹೆನು.
ಒಳಿತುನುಡಿ, ಕೆಡುಕುನುಡಿ, ಹಲತೆರನ ನಡೆವಳಿ,
ಸಿರಿವಂತಿಕೆಯ ಮೆರೆತ, ಬಡತನದ ಚಳಿಕೊರೆತ,
ಯೌವನದ ಸುಮ್ಮಾನ, ಮುದಿತನದ ದುಮ್ಮಾನ;
ವಾದ ಸಂವಾದ ಬೈಗುಳ ಜಗಳ ಪರಿಹಾಸ,
ಹುಚ್ಚನಪಲಾಪ ಪಾಂಡಿತ್ಯದಾಟೋಪ,
ಕೋಪತಾಪವಿಲಾಪ, ಚರ್ಚೆ ಟೀಕೆ ವಿಮರ್ಶೆ–
ಇಂತು ಈ ನಗರ ಜೀವನದಿರುಳ ನವರಸದ ನೆರಳ ನಾಟಕವೆಲ್ಲ
ನನ್ನ ಬೆಳಕಿನ ರಂಗದಲ್ಲಿ ಅಭಿನಯವಹುದು ಅನುದಿನವು:
ಇದಕೆಲ್ಲ ಏಕೈಕ ಸಾಕ್ಷಿ ನಾನೇಕೈಕ ಪ್ರೇಕ್ಷಕ."

ಏಕಾಂಗಿಯಾದೆನಗೆ ನಗರದೀಪದ ಜೊತೆ
ಇಂತಾಯ್ತು ಒಮ್ಮೆ ಮೌನದಲೆ ಮಾತುಕತೆ.

೧೯೬೩]

## ಲೋಕದ ಪರಿ

ಚಂದ್ರಲೋಕಕ್ಕೆ ಹಾರಿದರೇನು?
ಇಂದ್ರಲೋಕವನು ತಲಪಿದರೇನು?
ತೊಂದ್ರೆ ನೀಗಿತೆ ಲೋಕದ ಜನಕೆ?

ಮೂಢಾ ಮೂಢಾ! ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಗೂಢ! ೧

ಕೆಲಸವಿಲ್ಲವೊ? ಕಂಟ್ರಾಕ್ಟ್ ಮಾಡು–
ಕಂಟ್ರಾಕ್ಟ್ ಬೇಕೆ? ಮಂತ್ರಿಯ ನೋಡು–
ಮಂತ್ರಿಯ ಭೇಟಿಗೆ ಜವಾನಗೆರಗು–
ಮೂಢಾ ಮೂಢಾ! ಅಳಬ್ಯಾಡಾ!

ಲೋಕದ ಪರಿ ಅತ್ಯಂತ ನಿಗೂಢ! ೨
ಹೊಟ್ಟೆಗಿಲ್ಲವೋ? ಉಪವಾಸವ್ರತ!
ಬಟ್ಟೆಗಿಲ್ಲವೊ? ನಿರ್ವಾಣಪದ!
ಮಟ್ಟಿಗೆ ತಲೆಗೊಟ್ಟರೆ ಕೈವಲ್ಯ!
ಮೂಢಾ ಮೂಢಾ! ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಗೂಢ! ೩

ಕುಟುಂಬ ಯೋಜನೆಗೇಕೊ ಪ್ರಚಾರ?
ಆಟಂಬಾಂಬಿನ ವೀರರು ಬಿಗಡಿಸೆ
ಈಟೆಂಬುದು ಈ ಲೋಕದಿ ಉಳಿವುದೆ?
ಮೂಢಾ ಮೂಢಾ! ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಘೂಢ! ೪

ನಿನ್ನೆ ಮೊನ್ನೆ ನಾವ್ ಭಾಯಿ ಭಾಯಿ!
ಇಂದವರೊಡನೆಯೆ ಭಾರಿ ಲಡಾಯಿ!
ದೈವದ ಅಣಕತೆ ನಾವು ಕಸಾಯಿ!
ಮೂಢಾ ಮೂಢಾ, ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಗೂಢಾ! ೫

ಅಣ್ಣತಮ್ಮಂದಿರು–ಬೆನ್ನಿಗೆ ಬೆನ್ನು!
ಬೆನ್ನಿಗೆ ನಾಟಲು ಚೀಣೀ ಗನ್ನು

ಕೊರಳಿಗೆ ಕೊರಳು–ತೆರೆಯಿತು ಕಣ್ಣು!
        ಮೂಢಾ ಮೂಢಾ, ಅಳಬ್ಯಾಡಾ!
        ಲೋಕದ ಪರಿ ಅತ್ಯಂತ ನಿಗೂಢಾ! ೬

ಅಪತ್ಕಾಲದ ಸೋದರನಂಟು
ಅಭಾವ ಕಾಲದ ಬೂದಿಸಿಮೆಂಟು;
ಹರುಕಲು ಸೀರೆಯ ತೇಪೆಯ ಗಂಟು!
        ಮೂಢಾ ಮೂಢಾ, ಅಳಬ್ಯಾಡಾ!
        ಲೋಕದ ಪರಿ ಅತ್ಯಂತ ನಿಗೂಢಾ!

ಹೆಣ್ಣಿನ ಕೈಗೆ ಆಳುವ ಖಡುಗ,
ಗಂಡಿನ ಕೈಗೆ ಅಡುಗೆಯ ಸಟುಗ!
ಲೋಕ ಸಮಾರಾಧನೆಯಿದು ಸೋಜಿಗ!
        ಮೂಢಾ ಮೂಢಾ, ಅಳಬ್ಯಾಡಾ!
        ಲೋಕದ ಪರಿ ಅತ್ಯಂತ ನಿಗೂಢಾ!

ಪೇಟೆಯಲೇರಿತು ಅಕ್ಕಿಯ ಧಾರಣೆ,
ಹಿಡಿ ಉಪೋಶ್ಯ ವೈರಾಗ್ಯದ ಧೋರಣೆ:
ಲಭ್ಯವೊ ಮುಂದಿನ ಜನ್ಮದ ಪಾರಣೆ!
        ಮೂಢಾ ಮೂಢಾ, ಅಳಬ್ಯಾಡಾ!
        ಲೋಕದ ಪರಿ ಅತ್ಯಂತ ನಿಗೂಢಾ!

ಜಾತಿಭೇದಗಳ ಹೊಡೆಹಾಕೆಂಬೆ–
ಜಾತಿಯ ಹೆಸರಲಿ ಔತಣವುಂಬೆ:
ನೀತಿಯ ಮಾಣಿಕ ಕೋತಿಯ ಕೈಲಿ!
        ಮೂಢಾ ಮೂಢಾ, ಅಳಬ್ಯಾಡಾ!
        ಲೋಕದ ಪರಿ ಅತ್ಯಂತ ನಿಗೂಢಾ!

ಯುವಕನ ಪ್ಯಾಂಟು ಬರುಬರುತ ಬಿಗಿ!
ಯುವತಿಯ ಕಮೀನು ಕುಪ್ಪಸ ಬಲುಬಿಗಿ!

ಸಡಿಲವ್ಯಾವುದು? ನಡತೆಯೆ? ತೆಗಿತೆಗಿ!
ಮೂಢಾ ಮೂಢಾ, ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಗೂಢಾ!
ಕನ್ನಡ ಮಕ್ಕಳು ಕನ್ನಡ ಶಾಲೆಗೆ
ಎನ್ನುವ: ತನ್ನವು ಕಾನ್ವೆಂಟ್ ಸ್ಕೂಲಿಗೆ:
ಅನ್ನದ ಗಳಿಕೆಗೆ ಎರಡು ನಾಲಗೆ!
ಮೂಢಾ ಮೂಢಾ, ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಗೂಢಾ!

ಇಂದೀ ಕೇಳಿದ ಕವಿತೆಗೆ ಚಪ್ಪಾಳೆ!
ಇದರ ನೆನಪು ನಿಂತಿರುವುದೆ ನಾಳೆ!
ಇಹುದೆ ಅದಕೆ ಬರೆದೀ ಹಾಳೆಯ ಬೆಲೆ?
ಮೂಢಾ ಮೂಢಾ, ಅಳಬ್ಯಾಡಾ!
ಲೋಕದ ಪರಿ ಅತ್ಯಂತ ನಿಗೂಢಾ!

೧೯೬೩]

## ಕಂಬನಿ ಕಾಣಿಕೆ

೧

ಓ ಕನ್ನಡದ ನೆಲನೆ, ಕನ್ನಡದ ಪೊಲನೆ,
ಮೌನದಿಂ ಮರುಗಿಂ;
ಓ ಕನ್ನಡದ ಬಾನೆ,
ಕನ್ನಡದ ಬಾನೊಳಾಡುವ ಚೆನ್ನ ಮುಗಿಲೆ,
ಕಂಬನಿಯ ಕರೆಯಿಂ;
ಓ ಕನ್ನಡದ ಎಲರೆ–
ಕನ್ನಡವ ಪಯಿರ ಪರಿಮಳಪೊತ್ತ ತಂಬೆಲರೆ.
ಕಾವೇರಿ ಕೃಷ್ಣೆಯರ ನಡುನಾಡೊಳೆಲ್ಲಂ
ಸುಯ್ಯುತ್ತೆ, ಸುಯ್ಯುತ್ತೆ ಸುದ್ದಿಯಂ ಸಾರಯ್.
ಓವೊ ಕನ್ನಡವಕ್ಕಿ,

ಎಂದಿನಂತಲ್ಲದೆಯೆ ಏನ್ ಮೂಗುವಟ್ಟಿರ್ಪೆಯ್?
ಕನ್ನಡದ ಮಕ್ಕಳ್ಗೆ ಸವಿನುಡಿಯನೊರೆಯಯ್,
ಒರೆದು ಸಂತವಿಸಯ್.

೨

ಅಮ್ಮ, ಕನ್ನಡ ತಾಯೆ,
ನಿನ್ನಳಲ್ ಪಿರಿದಲ್ತೆ
ಎಮ್ಮಳಲ್ಗಿಂ:
ನಿನ್ನ ಶ್ರೀಕಂಠಮೇ
ಪೋಯ್ತು ತಾಯೇ
ಕಳಿಯೆ ಶ್ರೀಕಂಠನ್
ನಿನ್ನ ವರಪುತ್ರನ್:
ಕೊರಗದಿರ್
ಸೊರಗದಿರ್:
ನಿನ್ನೆಲ್ಲ ಮಕ್ಕಳೊಳಮವನೆ ಧನ್ಯನ್
ನಿನ್ನೆಲ್ಲ ಮಕ್ಕಳೊಳಮವನೆ ಸನ್ಮಾನ್ಯನ್
ನಿನ್ನ ಸೇವೆಯೊಳವನೆ ಅಗ್ರಗಣ್ಯನ್
ನಿನಗುಸಿರ ಮುಡಿಪಿಟ್ಟ ಕನ್ನಡ ವರೇಣ್ಯನ್.

೩

ಓ ಗುರುವೆ, ಓ ಗುರುವೆ,
ಕನ್ನಡದ ಕಲ್ಪತರುವೆ,
ಕನ್ನಡದ ಸಿರಿಯೆ!
ಇನಿತು ಬೇಗದಿನೇಕೆ ಕಣ್ಮುಚ್ಚಿದಯ್,
ನಮಗೆ ಕಾವಳ ಮುಚ್ಚಿದಯ್?
ಬರಿದಾಯ್ತು ಕನ್ನಡದ ಆಚಾರ್ಯಪೀಠಂ:
ಮರೆಯಾಯ್ತು ಬೆಳಕೀವ ನಿನ್ನ ನೋಟು;
ಕೇಳದಾಯ್ತಿನ್ನು ಕನ್ನಡದ ಕಲಕಂಠಂ:
ಬಿಮ್ಮೆನುತ್ತಿದೆ ನಾಡನುಡಿಯ ತೋಂಟಂ.

ನಿನ್ನ ಕೃತಿಗಳೆ, ನಿನ್ನ ನೆನಪೆ, ನಮಗಿಂದು ಸಿರಿ;
ನಿನ್ನ ಶಾಶ್ವತ ಕೀರ್ತಿ ನಿನ್ನ ತೇಜೋಮೂರ್ತಿ.
ನಿನ್ನ ಗೈಮೆಗಳೊಂದೆ, ಎರಡೆ, ಮೂರೆ?
ಎನಿತು ಕೊಂಡಾಡುವುದೊ ನಮ್ಮ ಮನವಾರೆ!
ಕನ್ನಡದ ಕಲ್ಮೆಯಂ ಬೀರಿದಯ್ ಗುರುವೆ
ಕನ್ನಡದ ನಯನಲ್ಮೆ ಸಾರಿದಯ್ ಗುರುವೆ
ನಾಡು ನುಡಿಯೊಕ್ಕೂಟಕೊರ್‌ದಾರಿ ತೋರಿಸಿದೆ
ಕುರಿಪಾಗಿ, ಕನ್ನಡದ ಬಾವುಟದ ಹಾರಿಸಿದೆ.
ನಿನ್ನಂತೆ ಕೊಟ್ಟರಾರ್ ತನುಮನ ಧನವ ನುಡಿಗೆ,
ನಿನ್ನಂತೆ ಇಟ್ಟರಾರ್ ವಯಿರಮುಡಿ ತಾಯ ಮುಡಿಗೆ?
ನಿನ್ನ ನೆನೆವೆವು, ಗುರುವೆ, ಅನುದಿನಂ ಅಡಿಗಡಿಗೆ;
ನಿನಗೆ ಸದ್ಗತಿ ನೀಡಲೆಂದೆರಗುವೆವು ಪರಮನಡಿಗೆ.

ಕನ್ನಡದ ತೇಜ, ಕನ್ನಡದೋಜ, ಹರಸಯ್:
ಸಗ್ಗದಾ ನಾಡಿಂದ
ಬಾನವರ ಬೀಡಿಂದ
ಕನ್ನಡಕೆ ಶುಭವ ಹರಸಯ್.
ನೀನ್ ಕಂಡ ಹೊಂಗನಸು
ಅಕ್ಕೆ ನಾಳಿನ ನನಸು!
ನಿನ್ನ ಕಡೆ ಹಾರೈಕೆ ಸಲ್ಗೆ, ಸಲ್ಗೆ!

'ಸಿರಿಗನ್ನಡಂ ಗೆಲ್ಗೆ, ಕನ್ನಡದ ತಾಯ್ ಬಾಳ್ಗೆ'!
ಸಂತತಂ 'ಶ್ರೀ' ಪೆಸರ್ ನಿಲ್ಗೆ, ನಿಲ್ಗೆ!

ಜನವರಿ ೧೯೪೬]

# ನುಡಿಗುಡಿಯ ಗೊಮ್ಮಟ

(ಗೋವಿಂದ ಪೈ)

ನುಡಿಗುಡಿಯ ಗೊಮ್ಮಟನೆ! ಅಡಿಗಿದೋ ನುಡಿ ಹೂವು-
ಮುಡಿಗೇರಿಸುವೆನೆನಲು, ಕುಬ್ಜನಯ್ಯ;
ಪೊಡಮಡುವೆ-ನಿನ್ನಡಿಯ ಹುಡಿಯ ತಲೆಗಾನುವೆನು,
ನಿನ್ನುನ್ನತಿಯ ಮೈಮೆ ಪೊರೆಯಲಯ್ಯ!
'ಪೂಜೆ ಲಾಭ ನೆಗಟ್ತೆ'ಗಳ ಲೋಭಜಾಲಕ್ಕೆ
ಸಿಲುಕದುತ್ತುಂಗ ನಿಲುವಿನಲಿ ನಿಂದೆ:
ಓಜೆಯಲಿ ಗೈದ ವಾಙ್ಮಯ ತಪಃಪ್ರಭೆಯಲ್ಲಿ
ನೀಳುವುದು ನಿಡುಗಾಲ ನೆರಳು ಮುಂದೆ!

ಬುದ್ಧ ಕ್ರಿಸ್ತರ ಹೃದಯದರ್ಶನವ ನೀ ಪಡೆದೆ,
ನಡೆದೆ ಅವರೆಂದಂತೆ ಚಿನ್ಮಾರ್ಗದಿ;
ಸಿದ್ಧಿಯ ಸುಧಾರಸವ ಕಾವ್ಯ ಕಲಶಕ್ಕೆ ತುಂಬಿ
ಎರೆದೆ ನಾಡಿನ ಜನಕೆ ನಲ್‌ನೇಮದಿ.

ಕನ್ನಡದ ಹೊನ್‌ನೆಲವನಗೆದು ನೀ ತೆಗೆದು
ಒಟ್ಟಿಲೊಡ್ಡಿದೆ ಚಿನ್ನ ರನ್ನ ರಾಶಿಯನು;
ತನ್ನ ತನದರಿವಿನಾ ಕನ್ನಡದ ಕೋಟೆಯನು
ಕಟಟಿ ನೀ ಬರೆದೆ ಒಳ್ಳೆಯ ನಕಾಶೆಯನು.

ಮೊಳಕೆ ಗಿಡವಾಗುವೊಲು ಮೊಗ್ಗು ಬಿರಿದರಳುವೊಲು
ಹೀಚು ಹಣ್ಣಾಗುವೊಲು ಒಲುಮೆದೋರಿ-
ಹೊಯ್‌ನೀರು ತಂಗಾಳಿ ಹೊಂಬಿಸಿಲು ನೀನಾಗಿ
ನುಡಿಯ ತೋಟದ ಪೊರೆದೆಯದರ ಹಿತಕಾರಿ.

೨೪-೩-೧೯೬೪]

# ರಸಲೋಕ ರವಿ

ನಮ್ಮ ನಾಡ ಹೊಸ ಹುಟ್ಟಿನ ಬೆಟ್ಟದಿ
ನೀನುದಿಸಿದೆ ರಸಲೋಕ ರವಿ;
ತಮೋಜಾಡ್ಯದ ಜವನಿಕೆ ಸರಿಯಿತು,
ಹರಿಯೆ ಹೊನ್ನ ಕಿರಣಚ್ಛವಿ.

ಮುಚ್ಚಿದ ತಾವರೆ ಬಿಚ್ಚಿದವೆನಿತು!
ಎದೆತೆರೆದು ಮೊರೆದುವೋ ತುಂಬಿ!
ಕಟ್ಟಿದ ಕೊರಲು ಬಿಟ್ಟಿತು ಹಕ್ಕಿಗೆ,
ತುಳುಕೆ ನಾದಬಿಂದಿಗೆ ತುಂಬಿ.

ಮಿಣ ಮಿಣ ಸೊಡರೂ ನಂದಲು, ಬೆಳಗೆ
ಸೂರ್ಯನೆ ಮೂಡಲು ಮನೆಯೊಳಗೆ
ತಡೆದಿಡಬಹುದೆ ಬೆಳಕು ತಬ್ಬಿ?
ಹರಡಿತು ತಾನೇ ನಾನಿಳೆಗೆ.

ಹೇ ಕವಿಮಿತ್ರಾ! ವಿಶ್ವಮೈತ್ರಿಯ
ಹಾಡಿನ ಜಾಡಿನ ಹರಿಕಾರ,
ವಿಶ್ವಭಾರತಿಯ ಕೊರಳಲಿ ಮೆರೆಯಲಿ
ನಿನ್ನ ಕಿರಣ ಕಾಂಚನ ಹಾರ!

೨-೫-೧೯೬೧]

# ನಾನ್ನೂರು ವರ್ಷಗಳ ಹಿಂದೆ ನಾನಿದ್ದೆ

೧

ಎಂಥ ಕನಸೆಂಥ ನಿದ್ದೆ!
ನಾನ್ನೂರು ವರ್ಷಗಳ ಹಿಂದೆ ನಾನಿದ್ದೆ!
ಶ್ರೀ ಪುರಂದರದಾಸರನ್ನು ಕಂಡಿದ್ದೆ!

ದಾಸರಾಗುವ ಮೊದಲು ಅವರು 'ಸೀನಣ್ಣ'.
ಆಗ ನಾನಿನ್ನೂ ಚಿಣ್ಣ:
ನಮ್ಮಪ್ಪ ಹರಿದಾಸ, ಹರಿದಾಸ ಮನೆತನ;
ತುಟಿತುದಿಯ ಹರಿನಾಮ ತರುತಿತ್ತು ಹೊಟ್ಟೆಗನ್ನ,
ಇಲ್ಲದಿರೆ ದಿನದಿನವು ಬನ್ನವೋ ಬನ್ನ.
ಸೀನಣ್ಣನಪ್ಪನೂ ಹರಿದಾಸರೇ
ನಾವೆಲ್ಲರೂ ಒಂದೆ ಜಾತಿ, ಬಹು ಪ್ರಖ್ಯಾತಿ:
ತೂಕಡಿಪ ಮೈಗಳ್ಳತನಕೆ ಹಾಸಿಗೆ ಹಾಸಿ
ದೀರ್ಘಾಯು ಕುಂಡಲಿಯ ಬರೆದಿಡಲು ಕೈಕೊಂಡ
ಹರಿದಾಸ ದೀಕ್ಷೆ, ಕೇರಿಕೇರಿಯಲಿ ಮನೆಮನೆಯ ಭಿಕ್ಷೆ!
ನಮ್ಮ ಕೇರಿಯಲಿ ಸೀನಣ್ಣನಪ್ಪನಿಗಿತ್ತು ಹಿರಿದೊಂದು ಕೋಡು:
ಬಿಕ್ಕೆ ಬೇಡುವ ನಾಲಗೆಯ ಮೇಲೆ ನಲಿವ ನಲ್ವಾಡು.
ಹಾಡಿನೀ ಹರಿದಾಸ ಕಣ್ಮುಚ್ಚೆ,
ಮಗನಿಗುಳಿಯಿತು ಆಸ್ತಿ:
ಮುರುಕು ಮನೆ, ತಂಬೂರಿ, ಗೋಪಾಳ ಬುಟ್ಟಿ–
ಮರೆತೆ, ಸಂಗೀತವಿದ್ಯೆಯ ರಸದ ಘಟ್ಟಿ.

೨

ಹರಿದಾಸ ವೇಷವನು ಧರಿಸಿ ದಂಡಿಗೆ ಹಿಡಿಯೆ
ನಾಚಿತ್ತು ಸೀನಣ್ಣ ಸಾಕಿದ್ದ ಸೊಗಸುಗಾರಿಕೆ ಚಾಳಿ;
ಹೊಟ್ಟೆಗಿಲ್ಲದೆ ಜುಟ್ಟಿಗಾಯ್ತು ಮಲ್ಲಿಗೆ, ಕಲಿತ ರಸಿಕ ಗೀತಾವಳಿ
ಹಾರುವನ ಹುಟ್ಟನಣಕಿಸಿತು ಹರುಕಲು ಧೋತ್ರ,

ನೊಂದು ನೆತ್ತರ ಕಾರಿತವನ ಗೋತ್ರ.
ಮೊಂಡ ಗಂಡನ ಕೈಗೆ ದಂಡಿಗೆಯನು ಕೊಡಬಂದ ಹೆಂಡತಿಗೆ
ಬೈಗುಳದ ಕೆಂಡಮಳೆಯಾಗೆ ಹೂದಂಡೆಯೆನೆ ತಳೆದಳಾ ಸಾಧ್ವಿ
ಹರಿ ಪೊರೆಯಲೆಂದು ಶುಭ ಕೋರಿದಳು ಪತಿಗೆ.
ಸಿರಿವಂತನಾಗಿಯೇ ಮನೆಗೆ ಮರಳುವುದೆಂದು ಹೂಣಿಕೆಯ ಹೊತ್ತು
ಸೀನಣ್ಣ ಕರಣಿಕನಾದ ಚಿನಿವಾರ ಪೇಟೆಯಲಿ–
ಹರಿನಾಮವಾಯ್ತು ಮನೆಮಡದಿಗನ್ನದ ತುತ್ತು.
ಎನ್ನ ಓರಗೆಯ ಮಗನಾದನೆಮ್ಮ ಮನೆಯನ್ನಕ್ಕೆ ದತ್ತು.

೩

ಭಾಗ್ಯಲಕ್ಷ್ಮಿಯ ಸೀರೆ ಸೆರಗಿನ ಗಾಳಿ ಬೀಸಿ
ಸೀನಣ್ಣ ಕರಣಿಕ ಆದ ವರ ವಣಿಕ,
ಆದ ನಾಯಕ ಶ್ರೀನಿವಾಸರಾಯ:
ಮುರುಕು ಮನೆ ಮಹಲಾಯ್ತು!
ಲಾಭ ಲೋಭಗಳವನ ಕರ ಕಂಕಣಗಳಾಗಿ,
ಜಿಪುಣತನ ವ್ರತವಾಗಿ,
ಮುತ್ತು ರತ್ನಗಳಾಯ್ತು ಮನೆಯ ಜೋಳದ ರಾಶಿ.
ಹರಿನಾಮವನು ಮರೆತು ಸಿರಿಯ ಸೇವೆಯಲಿರಲು
ಹರಿಯ ಕೃಪೆ ತೋರಿತ್ತು ಕಳ್ಳರಿಗೆ ಮಳಿಗೆ.
ಗರಿಕೆಹುಲ್ಲಿನ ಮೇಲೆ ಹೊಳೆವ ಇಬ್ಬನಿ. ರತ್ನ ರಾಶಿ ಜಗುಳುವ ರೀತಿ
ನಿಧಿ–ನಾಗರಾದ ಸೀನಣ್ಣ, ಲೋಭದ ಹೆಡೆಯ ತೂಗುತ್ತ,
ಕೊಡದುಣ್ಣದೆಲ್ಲವನು ನೆಲಮಾಳಿಗೆಯಲಿ ಬಯ್ತಿಟ್ಟು.
ಇಂತಿರಲು, ಗುರು ವ್ಯಾಸಮುನಿರಾಯರೈತಂದು
ಹರಿಭಕ್ತಿ ಹೊನಲನ್ನು ಹರಿಸಿದರು ಊರಿನಲಿ ಕೇರಿಕೇರಿಯಲಿ,
'ಕಳುವಾಗದಿರುವ ಸಿರಿ ಹರಿನಾಮವೊಂದೇ'
ಎಂದೆಂಬ ಗುರುವಚನ ಸತಿಯ ಸಿರಿನುಡಿಯಾಗಿ ಮನಮುಟ್ಟೆ,
ಗುರುದರ್ಶನಕೆ ಧಾವಿಸಿದ ಸೀನಣ್ಣ, ನೂಕೆ ಅಮೃತದ ಗಳಿಗೆ,
ಹಿಂದಿರುಗಿದಾತ ಸೀನಣ್ಣನಲ್ಲ,
ಗುರುದತ್ತ ವಿಠ್ಠಲಾಂಕಿತ ಪುರಂದರದಾಸ.

ಕಳುವಾದ ಮನೆತನದ ನಿಧಿ ಮತ್ತೆ ಮರಳಿತ್ತು ಮನೆಗೆ.
ಸಿರಿದಾಸ ಹರಿದಾಸರಾಗಿ ಬಂದವರೆ,
ಸತಿಯು ಕರೆದರು, ಕರೆದು, 'ತಾ' ಎಂದರು, ದಿವ್ಯ ಹಾಸವ ಬೀರಿ.
ಸತಿಗರ್ಥವಾಯ್ತು: ಜೋಪಾನವಿಟ್ಟಿದ್ದ
ದಂಡಿಗೆಯ ತಂದಿತ್ತಳವರ ಕೈತಾವರೆಗೆ–
ಹೊರಹೊರಡಲೊಡನೆ ಹರಿನಾಮ–ತುಂಬಿಯ ಗಾನ, ಕೇರಿ ಮೊಳಗೆ.

೪

ಅಳಿದುಳಿದ ಧನವೆಲ್ಲವನು ಊರ ಹರಿದಾಸರಿಗೆ ಹಂಚಿ–
ಕೆರೆಯ ನೀರನು ಕೆರೆಗೆ ಚೆಲ್ಲಿ.
ಹರಿಕೃಪೆಯೊಳಾದುದನು ಹರಿಸಮರ್ಪಣೆ ಮಾಡಿ.
ಸಿರಿಗೈಯ ಸೀನಣ್ಣ ಬರಿ ಪುರಂದರರಾಗಿ,
'ಅಲ್ಲಿಹುದು ನಮ್ಮ ಮನೆ, ಇಲ್ಲಿದ್ದೆ ಸುಮ್ಮನೆ', ಎಂದು ಮನೆಬಿಟ್ಟು
ಹರಿಭಕ್ತಿ ಸಂಪದವನಾರ್ಜಿಸಲು ಹೊರಟರ್ರೈ ಹಟತೊಟ್ಟು–
'ಕೈಯಲ್ಲಿ ದಂಡಿಗೆ, ಕಂಕುಳಲಿ ಜೋಳಿಗೆ; ಮಗ ಮುಂದೆ, ಸತಿ ಹಿಂದೆ
ಅವರ ಜೊತೆಗೂಡಬೇಕೆಂಬಾಸೆ ನನಗೆ,
ಅಪ್ಪನಪ್ಪಣೆ ಕಟ್ಟಿತೆನ್ನ ಮನೆಗೆ.
ನೋಡುತ್ತ ನಿಂತಿದ್ದೆ ಹರಿದಾಸ ನಿಬ್ಬಣವ:
ಆಗ ನಾ ಕಂಡೆ ತೇಜಃಪುಂಜರಂಜಿತ ಶ್ರೀ ಪುರಂದರ ದಾಸರ,
ಅದೆ ಕಡೆಯ ಸಾರಿ.
ನಾ ಕಾಣಲಿಲ್ಲ ಮರಳಿ.
ಆದರೇನು,
'ದಾಸರೆಂದರೆ ಪುರಂದರ ದಾಸರಯ್ಯ' ಎಂಬ ಕೀರ್ತಿಯ ಮೊಳಗ
ಕೇಳಿತ್ತು ನಮ್ಮ ಕೇರಿಯು ಕೂಡ–
ನಾಡೆಲ್ಲ ಹಾಡಿತ್ತು ಅವರ ಹಾಡ.

* * *

ನಿದ್ದೆಯಿಂದೆದ್ದೆ:
ಎಂಥ ಕನಸೆಂಥ ನಿದ್ದೆ!

ನಾನ್ನೂರು ವರ್ಷಗಳ ಹಿಂದೆ ನಾನಿದ್ದೆ!
ಶ್ರೀ ಪುರಂದರ ದಾಸರನ್ನು ಕಂಡಿದ್ದೆ!

೨೬-೧೨-೧೯೬೩]
(ಅರೆನಿದ್ದೆ ಅರೆಯೆಚ್ಚರದ ಸ್ಥಿತಿಯಲ್ಲಿ ಕವಿಕಲ್ಪನೆ ಕಂಡ ಈ 'ಪುರಂದರ ದರ್ಶನ ಸುಪ್ರದಾಯದ ಕಥೆಯ ಜಾಡನ್ನೇ ಹಿಡಿದಿದ್ದರೂ ಕೆಲವಂಶಗಳಲ್ಲಿ ಅದರಿಂದ ಬೇರೆಯಾಗಿದೆ ಎಂಬುದನ್ನು ಆ ಕಥೆ ಬಲ್ಲವರಿಗೆ ಬಿಡಿಸಿ ಹೇಳಬೇಕಾಗಿಲ್ಲ.)

## ಬಾರಯ್ಯ ಮತ್ತೊಮ್ಮೆ ಬಸವೇಶ್ವರ

ಎಂಟುನೂರಾಯ್ತಬ್ದವಿಂದಿಂಗೆ ಅವತರಿಸಿ
ಬಾರಯ್ಯ ಮತ್ತೊಮ್ಮೆ ಬಸವೇಶ್ವರ!
ಗಂಟುಗಂಟಾಗಿರುವ ನಮ್ಮ ಜನಜೀವನದ
ಗೋಜ ಬಿಡಿಸಯ್ಯ ವೃಷಭಾವತಾರ!

ಕರ್ಮಗಳ ಧಿಕ್ಕರಿಸಿ ಕಾಯಕವ ಹಿಡಿದೆತ್ತಿ
ಕರ್ಮಯೋಗಕೆ ಹೊಸತು ಕಲಶವಿಟ್ಟವನೆ
ಧರ್ಮಮಾರ್ಗದ ದಾರಿ ಹೂವು-ಮುಳ್ಳಿನ ಹಾದಿ
ಹಗುರ ನಡೆಯಿರಿ ಎಂದು ಹೇಳಿಕೊಟ್ಟವನೆ

ಮೇಲುಕೀಳುಗಳೆಂಬ ಭೇದಗಳ ಬದಿಗೊತ್ತಿ
ಸರ್ವಸಮತಾ ಸೌಧವನ್ನು ಸಮಕಟ್ಟಿ
ಹೊಸಯುಗದ ಹೆಬ್ಬಾಗಿಲು ತೆರೆದು, ಶಿವಮಾರ್ಗ
ಶೀಲ ಸಂಪದವೆಂದು ಸಾರಿದವನೆ

ತ್ರಿವಿಧ ದಾಸೋಹಕ್ಕೆ ತೆರೆದ ಬಾಗಿಲ ನಿನ್ನ
ಮಹಾಮನೆಯ ಮಹಿಮೆ ಹಬ್ಬಲು ನಾಡಿನಲ್ಲಿ
ಲಿಂಗ ಜಂಗಮನಾಗಿ ಕೋಟಿ ಬಾಯಲಿ ತಣಿಯೆ
ಹೊರ ಪೂಜೆಯೋಜೆಯನು ನಿಲಿಸಿದವನೆ

ಹೃದಯ ಸಂಪುಟದಲ್ಲಿ ಭಾವಲಿಂಗವನಿರಿಸಿ
ಭಕ್ತಿಜಲವನ್ನೆರೆದು ಅಭಿಷೇಚಿಸಿ
ವಚನಪುಷ್ಪಾರ್ಚನೆಯೊಳಾತ್ಮನೈವೇದ್ಯದೊಳು
ಒಳ ಪೂಜೆಯೋಜೆಯನು ಕಲಿಸಿದವನೆ

ಒಡಲ ಹಣತೆಯ ಮಾಡಿ ನುಡಿಯ ಬತ್ತಿಯ ಹಾಕಿ
ನಡತೆ ನಿಷ್ಠೆಗಳ ನಲ್‌ತೈಲವೆರೆದು
ಅಂಗಲಿಂಗದ ಸಂಗದಿಂದೊಗೆದ ಜ್ಯೋತಿಯಲಿ
ಶೈವಾನುಭವ ದೀಪ ಹಚ್ಚಿದವನೆ

ಬಿಜ್ಜಳನ ಸಜ್ಜನಿಕೆ ದುರ್ಜನರ ದೂರಿಂದ
ನಂಜಾಗಲುಂಡು ನಂಜುಂಡನಾದವನೆ
ವೈದ್ಯ ಭವರೋಗಕೆನಿಸಿದ ನಮ್ಮ ಕೂಡಲದ
ಸಂಗನೊಳು ಸಂಗಡಿಸಿ ಲಿಂಗವಾದವನೆ

ಅನುಭವದ ಮಂಟಪವನನುಗೊಳಿಸುತದರಲ್ಲಿ
ಶೂನ್ಯಸಿಂಹಾಸನವ ಪರಿಕಲ್ಪಿಸಿ
ಅನುಭಾವಿಗಳ ದೊರೆಯನಲ್ಲಮನನದರಲ್ಲಿ
ಮೆರೆಯಿಸಿದ ಶೈವಮಾನಸಹಂಸನೆ

ಶರಣಚರಣ ಸರೋಜ ಭೃಂಗರಾಜನೆ ಬಾರ
ಮತ್ತೆ ಮೊರೆಯಲಿ ನಿನ್ನ ವಚನದೋಂಕಾರ!
ನೀ ಕಂಡ ಕನಸಿಗೂ ನನಸಿಗೂ ಇಹ ದೂರ
ನಶಿಸಿ ಕನ್ನಡ ಜನತೆಗಾಗಲಯ್ ನಿಸ್ತಾರ!

೧೯೬೮]

## ಸಿದ್ಧವೃಕ್ಷದ ಸಿದ್ಧೌಷಧ

ಕರುನಾಡಿನ ಪುಣ್ಯಗಂಧಿ ಹೂದೋಟದಿ
ವ್ಯೋಮಕೇಶನ ಜಡೆಹೊಡೆಯಿಂದ ಜಗುಳಿ
ಬಿತ್ತು
ಬಯಲಿನ ಬೆಳಕಿನ ಬಿತ್ತು:
ಲಿಂಗದ ಸಂಗದಿ ಅಂಗವಡೆದಿತ್ತು:
ಬ್ರಹ್ಮದಿ ತವರು,
ಅಲ್ಲೆ ಅದರ ಬೇರು–
ಅಚಲ, ಸ್ಥಾವರ, ಸ್ಥಾಣು.
ಅಚ್ಚರಿ! ಅಚ್ಚರಿ!
ಜಂಗಮಲತೆಯಾಗಿ
ಬೆಳೆದು
ಮಾಮರನಾಗಿ
ಕೋಗಿಲೆಯುಲಿಯಲ್ಲಿ ಮೇಲಿನ ಕೂಗಾಗಿ
ಕಾಡುಮೇಡನು ತಬ್ಬಿ
ಊರೂರಿಗೂ ಹಬ್ಬಿ
ದಿಕ್ಕು ದಿಕ್ಕಿಗೆ ನೆರಳ ನೀಡುವ ತೋಳ್ ಚಾಚಿ
ರೆಂಬೆರೆಂಬೆಗೆ ರತ್ನವಜ್ರದ ಹೂಬಿಟ್ಟು
ಬಳಲಿದ ಜನರ ಕರೆಯುತ ಬಳಿಗೆ
ಪಾವನ ಭೂಮಿಯ ಜೀವನ ತೋಟದಿ
ತಲೆಯೆತ್ತಿ ನಿಂತಿದೆ
ಆರ್ಯವೃಕ್ಷ
ಸಿದ್ಧವೃಕ್ಷ!
ಇದ ಕಂಡು ಬಾಡಿತು ಸುರತರು ಸೊರಗಿ
ಬರಡಾಯಿತು ಕಾಮಧೇನು ಕೊರಗಿ.
ಐನೂರು ವರ್ಷದ ಈ ಯೋಗಿ ವೃಕ್ಷದ
ನೆರಳನು ನೆಮ್ಮಿ
ಆರಾದರೂ ಸರಿ ಆರು ಹೆಜ್ಜೆಯ ನಡೆದು

ನಿಂತರೆ–
ಹೊಮ್ಮಿ
ಹೊಳೆವುದು ಹುರುಳು,
ದೊರೆವುದು ತನಿವಣ್ಣ ಇನಿದಾದ ತಿರುಳು:
ಹರಿವುದು ರೋಗ,
ಐಕ್ಯ ಸರಾಗ.
ಈ ಸಿದ್ಧವೃಕ್ಷದ ನೆರಳು ಹಣ್ಣಿನ ತಿರುಳು–
ಸಿದ್ಧೌಷಧ
ಬದ್ಧರಿಗೆಲ್ಲರಿಗೆಲ್ಲರಿಗೂ
ಎಲ್ಲೆಡೆ ಎಲ್ಲೆಡೆ ಎಲ್ಲ ಕಾಲಕ್ಕೂ
ಸಿದ್ಧ, ಸಿದ್ಧ.

೪-೭-೧೯೭೧]

## ವಿವೇಕಾನಂದರನ್ನು ಕುರಿತು

ಓ ವಿವೇಕಾನಂದ ಪುರುಷಸಿಂಹ ನರೇಂದ್ರ!
ನಿನ್ನ ನೂರನೆ ಹುಟ್ಟುಹಬ್ಬದಿಂದಿನ ದಿನದಿ
ನಿನ್ನ ಎಚ್ಚರುನುಡಿಯ ನೂರು ನೆನಪುಗಳೊಗೆದು
ನಿನ್ನ ತೇಜೋಮೂರ್ತಿಯನು ತಹವು ಕಣ್ಣೆದುರು:
ಆ ವಿಶಾಲ ಲಲಾಟ, ಆ ತೀಕ್ಷ್ಣ ಕಣ್‌ನೋಟ;
ಬಿಗಿದ ತುಟಿ, ಬಿಗಿದ ತಲೆಯ ರುಮಾಲು, ಬಿಗಿ ಹುಬ್ಬು;
ಬಿಗಿದ ಕೈಕಟ್ಟು, ಕಾವಿಯ ಅಂಗಿ, ನಡುಕಟ್ಟು–
ಬಿಗುವಿನಲಿ ಹುಗಿದಿಟ್ಟ ಚೇತನದ ಕಡಲೊಡಲು;
ಈ ಭವ್ಯದೇಹಿ ನೀನಿಂದು ನಮ್ಮೊಡನಿರಲು,
ಯಾರಿಗೆದೆ ನಮ್ಮ ತಾಯ್‌ನೆಲದಂಚ ಮೇಲ್ನಿಲಲು,
ಸ್ನೇಹದಾಪೋಶನವ ಕೊಂಡು ಔತಣವುಂಡು
ಕಾರುತ ಕೃತಘ್ನತೆಯ ಹಗೆ–ಹೊಗೆ–ಮದ್ದುಗುಂಡು?

ಮೈತಳೆದು ಗರ್ಜಿಸುತ ಬಾ ಧೀರ ವೇದಾಂತಕೇಸರಿ!
ಸಮರಯೋಗವ ಕಲಿಸೆ ಸಮರಾರು ನಿನಗೆ? ನೀನೇ ಸರಿ!

೨೦-೧-೧೯೬೩]

## ಪರಮಹಂಸರ ಮುಂದೆ ಪ್ರಶ್ನೆ ನಿಂತಿತ್ತು

ಪರಮಹಂಸರ ಮುಂದೆ ಪ್ರಶ್ನೆ ನಿಂತಿತ್ತು:
ಪಡುವ ಸೀಮೆಯ ಗುಡುಗು ಸಿಡಿಲು ಮಿಂಚಿನ ಕುಲುಮೆಯಲ್ಲಿ
ಕಾದು,
ತಿಕ್ಕಾಟದುರಿ ನೆಕ್ಕಿದುಕ್ಕುಮೈ ಪಡೆಸಾಗಿ ಗಡುಸಾಗಿ
ನೇರುತ್ತರಕ್ಕಾಗಿ ನೆಟ್ಟನೆಯ ದಿಟ್ಟತನದಲಿ ಕಾದು ನಿಂತಿತ್ತು:
ಪಾರ ಕಾಣದ ಕಡಲಿನಾಳಕ್ಕೆ ದುಮ್ಮಿಕ್ಕಿ
ರತ್ನದನ್ವೇಷಣೆಯ ಯತ್ನದಲ್ಲಿ
ಕೈಕಾಲು ಸೋತು ಮೈಬಳಲಿ ಮನ ಕುಗ್ಗಿ,
ತಿಮಿತಿಮಿಂಗಿಲಬೆಟ್ಟಗಳ ನಡುವೆ ನುಸುಳಿ ಬದುಕಿ
ದಿಕ್ಕು ಕಾಣದೆ ತೀರತುಣುಕು ಗೋಚರಿಸದೆ
ಬಾಂಗಡಲ ಸಂಪುಟದ ಸಿಕ್ಕ ಸೆರೆಯಾಗಿ,
ಮುಮ್ಮುಂದಕೆಳೆದೊಯ್ದ ಗುರಿಗಾಳದೆರೆಯಾಗಿ
ಬಿಟ್ಟ ತವರಿನ ನೆನಪ ಹುಟ್ಟುಹಾಕುತ್ತ ನೈರಾಶ್ಯನೌಕೆಯಲಿ ಸಾಗಿಬಂದು,
ತಟ್ಟನೆಯ ಕಂಡ ಹುಡಿಹೊನ್ನ ಕರೆಹಿಡಿದು ನಿಂದು–
ದಿವ್ಯಾಗ್ನಿಯಲಿ ಮಿಂದ ಹೊನ್ನ ಪುತ್ತಳಿ–ಆ
ಪರಮಹಂಸರ ಮುಂದೆ ಪ್ರಶ್ನೆ ನಿಂತಿತ್ತು:
ದಿಟ ಪ್ರಶ್ನೆ, ದಿಟ್ಟ ಪ್ರಶ್ನೆ–
ಯುಗಯುಗದನ್ವೇಷಕ ಪ್ರಶ್ನೆ–
ನಾಸ್ತಿಕ್ಯದಣಕು ಪ್ರಶ್ನೆ–
ಆಸ್ತಿಕ್ಯದಾರ್ತ ಪ್ರಶ್ನೆ–
ಆಟಕ್ಕೆ ಮರೆಯಾದ ತಾಯ ತಡಕುವ ಶಿಶುಪ್ರಶ್ನೆ
ನೆಲ್ಲನಗಲಿದ ನಲ್ಲೆಯೆದೆಯೊಲವ ಕಡಲ ಬಡಬಪ್ರಶ್ನೆ
ನಿರ್ಗಂಧ ಕುಸುಮವಾಟಿಯಲಲೆದು ಬೇಸತ್ತು ಬಾಯಾರಿ

ಮಕರಂದಪೂರ್ಣ್ಯಪುಷ್ಪಕ್ಕೆ ಧಾವಿಸುವ ಭ್ರಮರಪ್ರಶ್ನೆ-
ಧೀರಗಂಭೀರವಾಣಿಯಲಿ ಮೈತಳೆದು
ಪರಮಹಂಸರ ಮುಂದೆ ಪ್ರಶ್ನೆ ನಿಂತಿತ್ತು,
ಸೆಟೆದು ನಿಂತಿತ್ತು:
"ದೇವರನು ಕಂಡಿಹಿರಾ,
ದೇವರನು ತೋರುವಿರಾ"?
ಆಲಿಂಗಿಸಿತು ಶಿಷ್ಯನಾರ್ತವನು ಗುರುಕರುಣೆ,
ಗುರುಪದದ ಪೂರ್ಣತೆಯ ತುಂಬೆ ಶಿಷ್ಯಾಗಮನ:
ಕತ್ತಲೆಯ ಕಳೆವ ಉತ್ತರ-ಕಿರಣ ಚಿಮ್ಮಿತಾ ತೇಜದೊಡಲಿಂದ-
"ಕಂಡಿಹೆನು ದೇವರನು
ನಿನ್ನ ನೆಂತತಂತೆ;
ತೋರುವೆನು ದೇವರನು
ನಿನ್ನನೆಂತತಂತೆ."
ಪರಮಹಂಸರ ಮುಂದೆ ಪ್ರಶ್ನೆ ಬಾಗಿತ್ತು,
ಪಡೆದು ಉತ್ತರವ,
ದಿವ್ಯ ವರವ.

೯-೫-೧೯೬೩]

## ಬಾಪೂಜಿ ಕಂಡ ಕನಸು

ಶ್ರೀ ರಾಮನಿಂ ತೊಡಗಿದಾದರ್ಶ ರಾಜ್ಯಮದು
ಇಂದೆಮ್ಮ ಆದರ್ಶಮಾಗಿಹುದು: ಬಾಪೂಜಿ
ಕಂಡ ಕನಸದು, ನಾಳೆ ನನಸಾಗಬೇಕೆನುತೆ:
"ಆ ರಾಮರಾಜ್ಯದಲಿ ವಿಧವೆಯರ ಗೋಳಿಲ್ಲ;
ಪ್ರೇತಕರ್ಮಂ ವೃದ್ಧರಿಂದಿಲ್ಲ ಮಕ್ಕಳ್ಗೆ;
ವ್ಯಾಲಕೃತ ಭಯಮಿಲ್ಲ, ಇಲ್ಲ ರೋಗದ ಭಯಂ,
ತೊರೆದೆಲ್ಲರುಂ ಪರಸ್ಪರ ಹಿಂಸೆಯಂ, ಧರ್ಮ-
ಪರರಾಗಿ ಬಾಳಿದರು ನೂರುಸಾವಿರ ಕಾಲ,
ಹಡೆದು ಸಾವಿರ ಮಕ್ಕಳಂ; ರಾಮನಾಮಾಭಿ-

ರಾಮಮಾಯ್ತಾ ನಾಡು, ರಾಮಭೂತಂ ಲೋಕ.
ದೆಸೆದೆಸೆಗೆ ರಂಬೆಗಳ ಚಾಚಿ ತರುವೃಂದಗಳು
ನಿತ್ಯಫಲಪುಷ್ಪಭರಿತಂಗಳೆನಿಸಿರ್ದಪವು.
ಕಾಲದೊಳು ಪರ್ಜನ್ಯ ವರ್ಷಿಸುತೆ. ಮಾರುತನು
ತಂಪಾಗಿ ಸೋಂಕುತ್ತೆ. ಪ್ರಕೃತಿಪ್ರಜಾರಾಜ್ಯ
ಸರ್ವಮುಂ ಋತಬದ್ಧಮಾಗಿ ಅನ್ಯತದ ಸುಳಿವ
ಕಾಣಿಸದೆ. ವರ್ಣವ್ಯವಸ್ಥೆಯೊಳು ಶ್ರದ್ಧೆಯಂ
ತೋರುತ್ತೆ, ತಮ್ಮ ಕರ್ಮದೆ ತಾವು ತೊಡಗಿರುತೆ,
ಧರ್ಮರತ ಲೋಭವರ್ಜಿತ ಪ್ರಜೆಗಳೆಲ್ಲರುಂ."
ಸರ್ವರುಂ ಸಮಸೌಖ್ಯದೊಳು ಬಾಳ್ವ ರಾಜ್ಯಮೇ
ರಾಮರಾಜ್ಯಂ ಎಂದು ನುಡಿದಿಹರು ಬಾಪೂಜಿ:
ಪ್ರಜೆಗಳದೆ ರಾಜತ್ವಮೀರಾಜ್ಯದೊಳು; ನೆಲಕೆ
ಸಗ್ಗಮಂ ತಹುದೆ ಪರಮಾದರ್ಶ ರಾಜ್ಯಕ್ಕೆ.
ಜಾತಿ ಮತ ಲಿಂಗಭೇದಂಗಳಿರವೀ ಪ್ರಜಾ
ರಾಜ್ಯದೊಳು; ಧನಿಕ ನಿರ್ಗತಿಕನೆಂಬೀ ಕೃತಕ
ವರ್ಗಭೇದಂ ನಶಿಸಿ ವೈಷಮ್ಯವಡಗುವುದು;
ಧನಿಕನವನಿರ್ದೊಡಂ ಧನವಿಲ್ಲದನ ಹಿತಕೆ;
ಸುಲಭಮದು ನ್ಯಾಯಮೆಲ್ಲರ್ಗೆ ನಿಶ್ಚಿತಮಾಗಿ;
ತನ್ನ ದೇವರ ತಾನು ಪೂಜಿಸಲ್ಕನುವುಂಟು;
ತನ್ನ ನುಡಿ ನುಡಿಯಲ್ಕೆ ಅಂಕೆಯಂಜಿಕೆಯಿರದು;
ಯಂತ್ರದ ಗುಲಾಮರಾಗಿಹ ನಾವು ಯಂತ್ರಮಂ
ಆಳ್ದಪೆವು ನಗರಜೀವನಮುಂ ಸರಳಗೊಳಿಸಿ;
ಹಳ್ಳಿಗಳೆ ಭಾರತದ ಕಾಳಿ ಕಣಜಗಳೆನಿಸಿ
ದುಡಿಯುವುದು ದಿಳ್ಳಿ ಹಳ್ಳಿಯ ಮೇಲ್ಮೆಯಂ ಬಗೆದು.
ಉಳುವವನೆ ನೆಲದೊಡೆಯನವನಿಗದು ಸಲ್ಲುವುದು.
ಇದುವೆ ಭೂಸ್ವರ್ಗಮಿದೆ ರಾಮರಾಜ್ಯದ ಸಿದ್ಧಿ.
ಇದಕೆ ಸತ್ಯ ಅಹಿಂಸೆಗಳೆ ಸಾಧನೋಪಾಯಂ,
ಇದೆ ನಾನು ಕಂಡ ಕನಸಿನ ಭವ್ಯ ಭಾರತಂ."

೧೯೫೩]

# ಮಹಾತ್ಮರ ಕರುಣೆ

ಸಂಚರಿಸುತಿರಲು ದಕ್ಷಿಣದ ದೇಶದಲಿ ಒಮ್ಮೆ ಮಹಾತ್ಮನಿಗೆ
ಸಿಕ್ಕಿತೊಂದು ಕುಗ್ರಾಮ, ಅಲ್ಲಿ ಜನರಿಲ್ಲ ಇಲ್ಲ ನೀರು.

ಕಂಡನವನು ನಿರ್ಜನದ ನಾಡಿನಲಿ ಅಂತ್ಯಜಾತಿಯೊಬ್ಬಳನು–
ಬಟ್ಟೆ ಹರುಕು, ಮೈಕೊಳಕು. ದೀನೆ; ಬಡಬಡಕಲವಳ ದೇಹ.

ಕಂಡು ದುರ್ದೈವಿಯವಳ ಪರಿಯನುದ್ವಿಗ್ನಚಿತ್ತನಾಗಿ,
"ಏಕೆ ಮಗಳೆ ನೀನಿಷ್ಟು ಕೊಳಕೆಂ'ದು ಕೇಳೆ ಪ್ರೀತಿಯಿಂದ–

ಅರೆಬತ್ತಲವಳು ಮುಖತಗ್ಗಿಸುತ ನಾಚಿ ನುಡಿದಳಿಂತು ಮುನಿಗೆ:
"ದೀನಜನರ ಪಾಡೆಂತು ತಿಳಿಯುವುದು ಧನಿಕ ಜನಕೆ, ತಂದೆ?

"ಹತ್ತು ವರ್ಷ ಹಗಲಿರುಳು ನಾನು ಈ ಬಟ್ಟೆಯೊಂದನುಟ್ಟಿರುವೆ,
ನೀರುದೊರೆಯದದರಿಂದ ಬಟ್ಟೆಯನು ನಿತ್ಯ ಒಗೆಯಲಾರೆ.

"ನೀನು ದೊರೆತಾಗ ಅರ್ಧಬಟ್ಟೆಯನು ಒಗೆದುಕೊಳುವೆ ನಾನು;
ಒಣಗಿದರ್ಧವನು ಸುತ್ತಿಕೊಂಡು ಉಳಿದರ್ಧವನ್ನು ಒಗೆವೆ.

ನೀರು ದೊರೆಯದದರಿಂದ ತಿರುತಿರುಗಿ ಒಗೆಯಲಾಗದಿಹುದು;
ಒಂದೆ ಬಟ್ಟೆಯವಳೆಂತು ಶುಭ್ರಳಾಗಿರಲಿ, ಹೇಳು, ತಂದೆ?

"ನನ್ನ ಹಾಗೆ ಅರೆಮುಚ್ಚಿ ಮೈಯ ಜನರಿಹರು ಕೋಟಿ ಕೋಟಿ;
ಊಟವೊಪ್ಪೊತ್ತು, ಬಹಳ ಬವಣೆಯಲಿ ಒಡಲ ಹೊರೆಯುತಿಹರು."

ಕೇಳಿ ಅಂತ್ಯಜೆಯ ಕರುಣೆಯುಕ್ಕಿಸುವ ಮಾತ, ಮರುಕದಿಂದ
ಮೇಲುಹೊದಿಕೆಯನು ತೆಗೆದು ಹೆಗಲಿಂದ ಕೊಟ್ಟನಾಕೆಗೆ ಮುನಿ.

ಬೆರಗುಗೊಂಡ ಆ ಹೆಣ್ಣಿಗಿಂತು ನುಡಿದನು ಕೃಪಾಳು ಗಾಂಧಿ:
"ಮಗಳೆ, ನೂಲು ತೆಗೆಯಮ್ಮ ಸರ್ವದಾ. ಒಳಿತು ನಿನಗೆ ಅದರಿಂದ."

ದೀನದಲಿತರಪದಶೆಯ ನೆನೆನೆನೆದು ದುಃಖಗೊಂಡನಾತ;
ಅವರ ಏಳಿಗೆಯ ಚಿಂತೆಯಲೆ ನಿದ್ರೆಯಿಲ್ಲದಿರುಳ ಕಳೆದು,
ಎಲ್ಲ ಬಾಂಧವರಿಗುಡಲು ತಕ್ಕಷ್ಟು ಬಟ್ಟೆಯಿಲ್ಲದಿಹ ತನಕ
ಸ್ವಲ್ಪ ಬಟ್ಟೆಯೇ ಸಾಕು ನನಗೆಂದು ತಳೆದನಂದು ವ್ರತವ.

ಅಂದಿನಿಂದ ಮೈಯೆಲ್ಲ ಬರಿದು ಮೊಳಕಾಲವರೆಗೆ ಪಂಚೆ;
ತೊರೆದು ಭೋಗಗಳ ಗೆದ್ದನಿಂದ್ರಿಯವ–ಜನರ ನಗೆಯ ಲೆಕ್ಕಸದೆ.

ಬಿಸಿಲು ಚಳಿಯೆನದೆ ಅದೇ ಬಟ್ಟೆಯಲಿ ಊರು ಉರು ಸುತ್ತಿ
ಗ್ರಾಮಜನರ ದುರ್ದೈವವನ್ನು ತಿಳಿಸಿದನು ಪೌರಜನಕೆ:

"ಧರ್ಮಹೀನರೆಮ್ಮಿಂದಲವರು ಅಸ್ಪೃಶ್ಯರೆಂದು ದೂಷಿತರು,
ಹೆದರಿ ನಡುಗುತಿರುವವರನೂರಿಂದ ಹೊರಗೆ ಹಾಕಿರುವೆವು;

"ಆಫ್ರಿಕಾದಲ್ಲಿ ನಮ್ಮನೂ ಕೂಡ ಬೋಯರ್ ಆದಿ ಜನರು
ಅಂತ್ಯಜಾತಿಯವರಂತೆ ಗಣಿಸಲಾಶ್ಚರ್ಯವುಂಟೆ ಮತ್ತೆ?

"ದೈವದಾಣತಿಯೆ ನಮ್ಮಧರ್ಮಕ್ಕೆ ಕೊಟ್ಟ ಫಲವಿದಹುದು;
ಅದರ ದೆಸೆಯಿಂದ ನಾವು ಧಿಕ್ಕೃತರು ಕೀಳುನಾಡಿನವರೆಂದು.

"ಮಾನುಷಾತ್ಮರವರಿಂಥ ದುರ್ದಶೆಯಲಿಹುದ ಬಯಸ ಸಲ್ಲ;
ಅಂತ್ಯಜರ ಬಹಿಷ್ಕಾರ ನಿಜದಿ ಭಾರತದ ದುಷ್ಕಳಂಕ.

"ಶೂದ್ರವೈಶ್ಯ ಕ್ಷತ್ರಿಯರು ಬ್ರಾಹ್ಮಣರು ದೇವದೃಷ್ಟಿಯಲ್ಲಿ
ಸರ್ವಸಮರೆಂದು ಎಣಿಕೆಗೊಂಡಿಹರು. ವಿಕೃತಿ ನರನ ಕೃತ್ಯ.

"ಭೇದವೆಲ್ಲ ಮಾನವನು ಮಾಡಿದ್ದು, ಸಮದರ್ಶಿ ಬ್ರಹ್ಮನಲ್ಲ;
ಜಾತಿ ಜೀವಿಕೆಗಳಲ್ಲ ಚಿಹ್ನೆ ಸಜ್ಜನಕೆ, ಶೀಲ ಚಿಹ್ನೆ."

"ಅಂತ್ಯಜರನು ಕಡೆಗಣಿಸಲಿಂತು ಅಧಿಕಾರವಾರಿಗೂ ಇಲ್ಲ;
ಹೊಲಸುಗೆಲಸಕಿವರರ್ಹರೆನ್ನುವುದು ನಮಗೆ ಪಾಪಕೃತ್ಯ."
"ಅವರನುದ್ಧರಿಪ ಕಾರ್ಯವೇ ನಮ್ಮ ಪರಮ ಧರ್ಮವಿಂದು;
ದೇಶದುದ್ಧಾರಸಿದ್ಧಿಗೂ ಶ್ರೇಷ್ಠ ಸಾಧನವಿದೊಂದೆ ಒಂದು.

"ನಮ್ಮ ಮೂರ್ಖತನ ತೊರೆದು ನಿರ್ಧಾರಮಾಡಿ ಹಗಲು ಇರುಳು
ಹೀನರಿವರ ಹಿತಸಾಧನೆಯ ಸಿದ್ಧಿಗೆಂದು ಯತ್ನಿಸೋಣ.

"ಪಾಠಶಾಲೆ ದೇಗುಲಕೆ ಸೇರಿಸದೆ ಇಟ್ಟೆವಿವರ ಹೊರಗೆ;
ಇನ್ನು ಮುಂದೆ ನಿಶ್ಶಂಕೆಯಿಂದ ನಾವಿವರನೊಳಗೆ ಕರೆವ."

ಇಂತು ನುಡಿದು ಮತ್ತೊರೆದು ತೊಡಗಿದನು ಕೃಷಿಕರವನತಿಯ ಗತಿಯ
"ಎಲೈ ಪೌರರೇ, ನಿಮಗೆ ತಿಳಿಯದು ಕೃಷಿಕ ಪಡುವ ಪಾಡು

"ಅವರ ಬಡತನವ ಕಳೆಯೆ ಸಾಧನ ನೂಲುತೆಗೆವದೊಂದೆ;
ಅದರಿಂದ ನೀವು ಆ ನೂಲುಕಾಯಕಕೆ ನೆವು ನೀಡಲೊಳಿತು.

"ಸಿರಿವಂತ ಬಡವರಿವರಿಬ್ಬರೆರಡು ಕೈಕೂಡಿ ಬದುಕಬೇಕು;
ಅದರಿಂದ ಸ್ವಾರ್ಥವನು ತೊರೆದು ನಡೆಯಿರೈ ಧರ್ಮಮಾರ್ಗದಲ್ಲಿ."

೧೯೬೯]

(ಪಂಡಿತೆ ಕ್ಷಮಾ ರಾವ್ ಅವರಿಂದ ರಚಿತವಾದ 'ಸತ್ಯಾಗ್ರಹ ಗೀತಾ' ಎಂಬ ಸಂಸ್ಕೃತ ಕೃತಿಯಿಂದ ಆಯ್ದ ಶ್ಲೋಕಗಳ ಕನ್ನಡ ಅನುವಾದ.)

# ಗಾಂಧೀ ತರ್ಪಣ

ಇಂದು ನಾನಾವ ನೂತನ ಕವಿತೆಯನು ರಚಿಸಿ
ಕವಿತೆಯಲಿ ತರ್ಪಣವನರ್ಪಿಸಲಿ ನಿನಗೆ?
ಓ ಮಹಾತ್ಮಾ, ನೀನೆ ಜೀವಂತ ಕವಿತೆ!
ಬಾಜಿಸಿದೆಯಲ್ಲವೇ ಆಜೀವವೂ ನೀನು
ಜೀವನದ ಕೊಳಲ?
ಮರಣವನು ಧಿಕ್ಕರಿಸಿ, ಮರಣರಂಧ್ರದ್ವಾರ
ಹೊರಸೂಸೆ ನಿನ್ನಮರ ಹಾಸಪೂರ,
ಜೀವನೋಚ್ಛ್ವಾಸವನು ಊದಿದೆಯಲಾ!

* * *

ಯಾವೆಡೆ ವಿರಾಜಿಸುತ್ತಿಹೆಯೊ ನೀನಿಂದು
ಆಯೆಡೆ ಅಮರ್ತ್ಯ ಲೋಕವದಾವುದೋ ಕಾಣೆ:
ಅಲ್ಲಿ ಬರಿ ಕತ್ತಲೆಯೊ?
ಇಲ್ಲಿ ಬೆಳಕಿನ ನೆಲೆಯೊ?
ಲಭಿಸಿಹುದೆ ನಿನಗಲ್ಲಿ ಹೊಸ ಬದುಕಿನೆಚ್ಚರ?
ಇಲ್ಲವೊ, ಸುಷುಪ್ತಿ ಚಿರ,
ಇಹುದೆ ಹೊದೆದಂಧಕಾರ?
ಆಗದೇ ನಿನಗಲ್ಲಿ ಮತ್ತೊಮ್ಮೆ ಎಚ್ಚರ?
ಚಿರ ಅಂಧಕಾರದೊಳ ಚಿರಗಾಢ ನಿದ್ರೆಯಿಂದ
ಒಮ್ಮೆಯೂ ಪಡೆಯೆಯಾ ನೀನೆಚ್ಚರ?
ಕೇಳಿವೇ ಮತ್ತೊಮ್ಮೆ ನಿನ್ನ ಕಂಠಸ್ವರ,
ಅಕ್ಷಯಾಮೃತಪೂರ
ಬಾರದೇ ಹರಿದು?
ಇನ್ನಿಲ್ಲವೇ ಪೃಥ್ವಿಗಾ ವಚನಸಾರ?
ಪುಣ್ಯತನು ನೀನು ಆ ಬ್ರಹ್ಮದಲಿ ಬೆರತೆಯೊ?
ತಾನು ಕೇಳದೆ ನಮ್ಮನೆಲ್ಲ ಕೇಳಿಸುವ,
ಕಂಗಳಿಂದೀಕ್ಷಿಸದೆ ವಿಶ್ವವೆಲ್ಲವ ದರ್ಶನೋತ್ಸುಕವ ಗೈವ
ಆ ಅನಂತತೆಯಲ್ಲಿ–

ಇಂದ್ರಿಯ ದ್ವಾರಗಳ ಕ್ಷಣದೆ ತೆಟ್ಟಂದೆರೆದು ತೊರೆದು
ಆ ಬ್ರಹ್ಮದಲಿ ಬೆರೆತು ಪೂರ್ಣ್ಯನಾಗಿಹೆಯಾ?
ಆಗೋಚರ ಅನಂತಜ್ಯೋತಿ ಅತುಲ ಅನಾದಿ
ಎಂಬ ಆ ಜ್ಯೋತಿರ್ಮಯ ಬ್ರಹ್ಮವೇನೊ ನಾನರಿಯೆ–
ನೀನಾದರೋ ಭಕ್ತ ಕರ್ಮಯೋಗಿ,
ಜೀವನದೊಳಾಜೀವ ಪರ್ಯಂತ
ಈಶ್ವರಾಕುಲಿಯಾಗಿ,
ಐಕ್ಯವದರೊಳಗೆ.
ನಾ ಕಾಣೆ–ನಿನ್ನವಾ ಸತ್ಯ ಶಾಂತಿ ಪ್ರೇಮ
ಸಾಮ್ಯಗಳ ಸಂದೇಶ
ಲೋಕದೊಳು ಗಾಳಿಯೊಡನಿಹುದೇನೋ ಚಿರದಿನ
ಬರಿ ಅರಣ್ಯದ ರೋದನ.
ಇಲ್ಲದೊಡೆ, ಈ ಜಗಕೆ ನವ ವಸಂತವ ತರುವ
ಕೋಕಿಲ ಕುಹೂರವ ರಹಸ್ಯ ಮಧುರ ಸ್ವನ
ಅಹುದೇನೊ–ಕಾಣೆ ನಾ.
ನಿನ್ನ ಸಾಧನ ಮಹಾಮಂತ್ರಬಲದಿಂದ, ಧರೆ
ಆಗದೇನೊ ಅಪೂರ್ವ ಶಾಂತಿಯಾ ಸ್ವಪ್ನಪುರಿ,
ಮನೆಮನೆಯೊಳೋಡಾಡಿ ನಲಿಯದಿರಬಹುದು ದೇವಶಿಶು
ನಾಶವಾಗಿ ಸಮಸ್ತ ನರರೊಳಗಿನ ಪಶು;
ಬೆಳಕು–ಕತ್ತಲೆಯೋಲ್ ಅಹಿಂಸೆ–ಹಿಂಸೆಗಳು,
ಒಲುಮೆ–ಹಗೆ, ಒಳಿತು–ಕೆಡುಕುಗಳು–
ಸಕಲದ್ವಂದ್ವಗಳು ಜೊತೆಜೊತೆಯೊಳೀ ಜಗದೆ
ಇದ್ದೆ ಇರುವುವೊ ಏನೊ ಎಲ್ಲ ಕಾಲದೊಳು.
ಆದೋಡೀ ಜಗದಲ್ಲಿ ಅಂಧಕಾರವು ಬೆಳಕ
ಬಯಸುತಿಹುದೋ ತಾನದೆಲ್ಲಿವರೆಗೆ,
ಲಕ್ಷನಕ್ಷತ್ರಗಳು ತುಸ ಮಬ್ಬ ಕಳೆವುವೋ ತಾವೆಲ್ಲಿವರೆಗೆ,
ದ್ವೇಷ ಹಿಂಸಾವೈರಭಾವ ಹೃದಯಾಂಧಕಾರ,
ಕೊಲುವ ಬಗೆಯಿಂದೊಗೆವ ನೋವಿನ ನರಳಿಕೆ–
ಎಲ್ಲಿವರೆಗಿವುಗಳನು ಶಾಂತಿಯೆಡೆಗೊಯ್ಯುವುದೊ

ನಿನ್ನ ಪ್ರಾಣದ ಕಂಪನೆ
ಆವರೆಗೆ. ನೀನೆ ಭಾರತ ಹೃದಯವೆಂದು
ಮೀಸಲಾಗಿಹುದಯ್ ನಿನಗೆ ಲೋಕದ ವಂದನೆ.
ಅಧ್ಯಾತ್ಮವಂದನೆ,
ಅಲ್ಲಿವರೆಗೂ ನಿನ್ನ ಆ ಪ್ರಾಣಸ್ಪಂದನೆ
ಇಳೆಯ ಹಾಹಾಕಾರವನ್ನು ನೀಗಿ
ಲೋಕಶಾಂತಿಗೆ ಲೋಕದೈಕ್ಯತೆಗೆ ಕೂಗಿ
ಕರೆಯ ಕೊಡುವುದು ತನ್ನ ದನಿಯನೆತ್ತಿ.

೨೬-೧-೧೯೫೯ (ಅಸಾಮಿ ಮೂಲ: ರತ್ನಕಾಂತ ಬರ್‌ಕಾಕತಿ)

## ಹೆಜ್ಜೆ ಪೂಜೆ

ನೆಲವ ಮೆಟ್ಟದೆ ದಿವಕೆ ಮುಟ್ಟದಳಿಎ
ಸಾಲು ಹೆಜ್ಜೆಯ ಗುರುತಿನ;
ದೂಳು ಮುಚ್ಚದು, ಗಾಳಿಯುಳಿಸದು,
ಅಚ್ಚು ಒತ್ತಿಹುದನುದಿನ.

ಹೆಜ್ಜೆಯಿಟ್ಟೆಡೆ ಹುಡಿ ಹೊನ್ನಾಗಿದೆ
ಆತ್ಮಶಕ್ತಿಯ ಬೆಳಗಿಸಿ;
ಸುತ್ತಮುತ್ತಿನ ಕತ್ತಲೊಡಲಿನ
ಕೊಳಕು ಕಾಳಿಕೆ ತೊಲಗಿಸಿ.

ಹೆಜ್ಜೆಗುರಿತಿಗೆ ಹುವನಿಡುವೆವು,
ಕಣ್ಣಿಗೊತ್ತುತ ಮಣಿವೆವು;
ಕಜ್ಜ ತೀರಿದುದೆಂದು ಕೈಗಳ
ಕೊಡಹಿ–ನೆನಹಲಿ ತಣಿವೆವು.

ಜೊತೆಯ ಹೆಜ್ಜೆಯ ಗುರುತು ಕಾಣದು
ಅರ್ಧದಲ್ಲಿಯೆ ನಿಂತಿದೆ;
ವೆತೆಯ ಹುಟ್ಟಿಪ ಕತೆಯನುಳಿಸಿದೆ–
ಲೋಕರೀತಿಯೆ ಇಂತಿದೆ.

ದೂರ ಸಾಗಿಹ ನೂರು ಹೆಜ್ಜೆಗೆ
ಸಾಕು ಇಟ್ಟರು ಒಂದನೆ;
ಅದುವೆ ಹೆಜ್ಜೆಯನಿಟ್ಟು ತೋರಿದ
ನಾಡ ತಂದೆಗೆ ವಂದನೆ,

ತುಳಿದ ಮುಳ್ಳಿನ ಕೊಟ್ಟ ಕಾಣಿಕೆ
ಹೆಜ್ಜೆಗುರುತಿಗೆ ಮಾಣಿಕ;
ತುಳಿಯ ಹೆದರಿದ ಹೆಜ್ಜೆಲಜ್ಜೆಯ
ಹೋಗು ಹುಡಿಯಲಿ ಹಿಮ್ಮೊಕ.

ಮೀರಿ ನೆಲವನು ಸಾರಿ ದಿವವನು
ಹೆಜ್ಜೆಗುರುತಿನ ಸಾಲದು
'ಬಾರ ಬೆಂಬಳಿ' ಎಂಬುದಲ್ಲದೆ
ಬೇರೆ ಪೂಜೆಯ ಕೇಳದು.

ಹೆಜ್ಜೆಯಿಡು ಬಾ ಹೆಜ್ಜೆಯಿಡು ಬಾ
ಹಿರಿಯ ಜೀವದ ಜಾಡಲಿ;
ಹೆಜ್ಜೆಪೂಜೆಯ ಕೊಂಡ ಆತುಮ
ನಮಗೆ ರಕ್ಷೆಯ ನೀಡಲಿ.

೨-೧೦-೧೯೬೦]

# ಹರಿದ ಪಂಜು

ಆಸೇತು ಹಿಮವಮತ್ ಪರ್ವತಾಂತ ಭಾರತಭೂಮಿ
ದಾಸ್ಯಶಾಪವಿಮುಕ್ತವಾಯ್ತು ನಿನ್ನಡಿಯ ಸೋಂಕಿನಿಂದ,
ನಿನ್ನ ವಾಕ್ಸುಧೆಯ ಸೇಚನದಿಂದ
ಸತ್ತ ಮೂವತ್ತೈದು ಕೋಟಿ
ಎತ್ತಿ ನಿಂತಿತು ತಲೆಯ,
ಕತ್ತಿರಿಸಿತು ಗುಲಾಮಗಿರಿಯ ಬಲೆಯ.
ನಿನ್ನೆರಡು ಚಾಚುತೋಳು, ಹಿಂದು ಮುಸ್ಲಿಮರ ಸಮನಾಗಿ ತಬ್ಬಿ,
ಗಂಗೆಯಮುನೆಯರ ಸಂಗಮದಂತೆ
ಸಂಗಡಿಸಿತೊಮದುಗೂಡುತ್ತೆರಡು ಬಾಳು–
ಮತ್ತೆ ಕವಲೊಡೆವ ವರೆಗೆ,
ಮತಾಂಧತೆಯ ಮರುಭೂಮಿಯ ಕಣ್ಕಟ್ಟುಪಯಣದಲಿ.
ನಿನ್ನ ದೃಷ್ಟಿಯಲಿ, 'ಸೃಷ್ಟಿಯಲ್ಲೆಲ್ಲರೂ ಸಮ' ಎನುವಾರ್ಷತತ್ತ್ವ
ನಿನ್ನ ನಡತೆಯ ಕಡೆತನದಲ್ಲಿ
ಅಸ್ಪೃಶ್ಯತೆಯ ಮೈಗೆ ಮಡಿಯ ಮಜ್ಜನಕಾಯ್ತು ನವನೀತಲೇಪ.
ನುಡಿದ ನುಡಿಗೂ ನಡೆದ ನಡೆಗೂ ಚಕಮಕಿಯ ಹೊಡೆದು
ಚಿಮ್ಮಿಸಿದೆ ಆತ್ಮಶಕ್ತಿಯ ಕಿಡಿಯ,
ಹೊತ್ತಿಸಿದೆ ಸತ್ಯದ ಸೊಡರಿನಲ್ಲಿ ಅಹಿಂಸೆಯ ಬತ್ತಿಯನಿಟ್ಟು ದೀಪದ ಕುಡಿಯ,
ತ್ಯಾಗಸ್ನೇಹಗಳನೆರೆದು.
ಆ ದೀಪದ ಕುಡಿಯ ಸತ್ಯಾಗ್ರಹದ ಪಂಜು ಮುತ್ತಿಟ್ಟು
ಹಗೆತನದ ಹೊಗೆಯ ಕಾರದೆಯೆ
ಪ್ರೇಮಪ್ರಭಾವಲಯವನೆ ಸುತ್ತಲೂ ತೊಟ್ಟು
ಹಿಡಿದವರಿಗೆಂತೊ ಪಡೆದವರಿಗೂ ಅಂತೆಯೇ ತಣ್‌ಬೆಳಕ ಕೊಟ್ಟು
ವರದಾಭಯ ಪ್ರದೀಪಿಕೆಯಾಯ್ತು ರಾಷ್ಟ್ರಕ್ಕೆ:
ಇಪ್ಪತ್ತು ವರುಷವೆರಡರ ಹಿಂದೆ
ಇಂತು ಬಿಡುಗಡೆ ತಂದೆ, ಓ ನಾಡ ತಂದೆ!
ಬಿಡುಗಡೆಯ ಬೆನ್ನಿನಲೆ ಬಿದ್ದಿತು ಕೆಳಕ್ಕೆ

ಆ ಹೆಬ್ಬೆಳಕ ಹಿರಿ ಪಂಜು–
ಅದ ಹಿಡಿದ ಕೈ ಹಿಡಿಯಿತು ದೇವರ ಕೈಯ,
ಕೊಟ್ಟು ಪ್ರಾಣದ ಬೆಲೆಯ ದಾಯಾದ ಕೊಲೆಯ ಪ್ರಾಯಶ್ಚಿತ್ತಕ್ಕೆ.
ಪಂಜು ಇನ್ನೂ ಬಿದ್ದಿದೆ ಕೆಳಗೆ
ಅವಜ್ಞತೆಯ ಧೂಳಿನಲಿ.
ಮತ್ತದನು ಎತ್ತಿ ಹಿಡಿದು
ನಮ್ಮ ಮನೆಯನು ಬೆಳಗಿ
ಲೋಕವನ್ನೂ ಬೆಳಗಿ
ನೀನೆಮ್ಮ ಕೈಗಿತ್ತ ಪಂಜೆಯ ಘೋಷಿಸಲು ಹೆಮ್ಮೆಯಿಂದ
ಬಾಯಿಲ್ಲ ಬಾಪು.
ಆಪು ಮೊದಲೇ ಇಲ್ಲ ಕೈಗೆ.
ನಿನ್ನ ಚಿತ್ರವ ಬರಸಿ ನಿನ್ನ ವಿಗ್ರಹವ ಕಂಡರಿಸಿ
ಮೆರೆವಣಿಗೆ ಮಾಡಿ ಚರಿತೆಯ ಹಾಡಿ ಕೊಂಡಾಡಿ
ಬೀದಿಬೀದಿಗೆ ಚೌಕಚೌಕಕ್ಕೆ ನಿನ್ನ ಹೆಸರಿಟ್ಟು
ಅಂಚೆಚೀಟಿ ಲಕೋಟೆ ನಾಣ್ಯಗಳ ಮೇಲೆ
ನಿನ್ನ ತಲೆಹೊಡೆದು
ನಮ್ಮ ದುರ್ವ್ಯಾಪಾರಕ್ಕೆ
ಏನಕೇನಪ್ರಕಾರೇಣ ಅಧಿಕಾರಾರೋಹಣಕ್ಕೆ
ಸರ್ವಾರ್ಥಸಿದ್ಧಿಗೆ
ನಿನ್ನಂಕಿತವ, ಅಂಕಿತವ ವಸ್ತುಗಳ, ಬಳಸುತ್ತಿದೇವೆ ಬಾಪೂ!
ಬಾಯ್ತುಂಬ ನಿನ್ನ ಹೆಸರೇ ಹೆಸರು
ಮೈಕೈಯೆಲ್ಲ ಕೆಸರೋ ಕೆಸರು:
ದುಡಿಮೆಯ ಬೆವರುಕುಡಿದ ನೆಲದ ಕೆಸರಲ್ಲ ಬಾಪೂ
ಹುಸಿಮೋಸಗಳ ಕೆಸರು
ನೆತ್ತರಿನ ಕೆಸರು.
ಹರಿದು ಬಿದ್ದಿದೆ ಪಂಜು
ಹಿಡಿವ ಕೈಯಿಲ್ಲದೆ:
ಆರುವ ಮುನ್ನ
ಅದನೆತ್ತಿ ಹಿಡಿವ ಹಕ್ಕಿಗೆ ತಕ್ಕ ಯೋಗ್ಯತೆಯ

ಮತ್ತೆ ಪಡೆದೇವೆ?
ಅದನು ಹಿಡಿದೇವೆ
ಅದು ಜಗಜ್ಜ್ಯೋತಿಯೆನಿಸುವಂತೆ?
ಸಾಧ್ಯವಿಲ್ಲ, ಬಾಪೂ, ಸಾಧ್ಯವಿಲ್ಲ:
ಆ ಹರಿಬಕ್ಕೆ ನೀನೇ ಮತ್ತೆ ಹುಟ್ಟಿಬರಬೇಕು
ನೀನೇ ಹುಟ್ಟಿ ಬರಬೇಕು ಬಾಪೂ
ಅದನು ಹಿಡಿಯೆ: ಅದು ನಿನ್ನ ಎದೆ ಹೊತ್ತಿಸಿದ ಪಂಜು.
ಆ ಸ್ಥೈರ್ಯ ಆ ಆರ್ಪು ಆ ಪೆರ್ಮೆ ಆ ಕೂರ್ಮೆ
ಆ ಸಾಧನಾ ಸಿದ್ಧಿ
ನಮಗಿಲ್ಲ, ಇಲ್ಲ.
ನಮ್ಮ ಮೈಗೇರುತಿದೆ ಭೋಗಲಾಲಸೆಯ ನಂಜು–
ನಿಜವ ಕಾಣದು ಕಣ್ಣು–ಮಂಜುಮಂಜು:
ಇದ್ದರೂ ನೀ ಕೊಟ್ಟ ಪಂಜು.

೩–೧೦–೧೯೬೭]

## ಗಾಂಧಿ ಜಯಂತಿ

ವರ್ಷವರ್ಷವೂ ಆಚರಿಸುವೆವು,
ಗಾಂಧೀ, ನಿನ್ನ ಜಯಂತಿ;
ಹರ್ಷವಾಗುವುದೆ ನಿನ್ನ ಆತ್ಮಕ್ಕೆ,
ದೊರಕಿದೆಯೇ ನಿಜ ಶಾಂತಿ?

ನಿನ್ನಾದರ್ಶವ ಕಾಸಿ ಕರಗಿಸಿ
ಎರಕಹೊಯ್ದು ನಿನ್ನಾಕೃತಿಗೆ
ನಿನ್ನ ಚರಿತ್ರೆಯ ಪೀಠಕೆ ಜೋಡಿಸಿ
ಪಾತ್ರ ನಮ್ಮ ನಿತ್ಯಸ್ತುತಿಗೆ.

ಶಾಂತನಾಗಿ ನೀ ಕೇಳುತ್ತಿರುವೆ
ಕಲ್ಲುಕಂಚಿನಲಿ ಸೆರೆಯಾಗಿ;

ಭ್ರಾಂತನಾಗಿ ನೀ ನೋಡುತ್ತಿರುವೆ
ನಮ್ಮ ಗೈಮೆಗಳ ಮರೆಯಾಗಿ.

ಸತ್ಯ ಅಹಿಂಸೆಯ ಮೇಲು ಪಂಕ್ತಿಯನು
ಬದುಕಿ ಬರೆದುಕೊಟ್ಟೆ;
ಬರೆದೂ ಬರೆದೂ ರಾಶಿಹಾಕಿದೆವು
'ಕಾಪೀ ಪುಸ್ತಕ'–ಒಲೆಗೊಟ್ಟೆ.
ರಾಮನವಮಿ ಪಾನಕ ಕೋಸುಂಬರಿ,
ಕೃಷ್ಣಜಯಂತಿಗೆ ತೇಂಗೊಳಲು;
ರಾಮಭಕ್ತ ನೀನುಪವಾಸಪ್ರಿಯ,
ನಿನಗಿದೊ ನಿನ್ನದೆ ನೂಲು.

ಕೋಪ ಬೇಡಪ್ಪ: ನಿನ್ನ ಜಯಂತಿಯ
ನೂರು ವರ್ಷಕೇ ನಿಲ್ಲಿಸೆವು;
ಪಾಪಪ್ರಾಯಶ್ಚಿತ್ತಕ್ಕನುದಿನ
ನಿನ್ನ ನಾಮ ಜಪಿಸುತ್ತಿಹೆವು.

ನಿನ್ನ ಕನಸು ಕನಸಾಗಿಯೆ ಇರಲಿ,
ಬೇಡ ನಮ್ಮ ನನಸಿನ ಬೆರಕೆ;
ಮುನ್ನಾದರು ಕನಸದು ನನಸಾಗೆ
ಬೆನ್ನಿಗಿರಲಿ ನಿನ್ನಯ ಹರಕೆ.

೫-೧೦-೧೯೬೮]

## ಸ್ಥಿತಪ್ರಜ್ಞ
(ಸಾಂಗತ್ಯ)

'ಸ್ಥಿತಪ್ರಜ್ಞಸ್ಯಕಾ ಭಾಷಾ' ಎಂಬಂದಿನ
ಪಾರ್ಥಪ್ರಶ್ನೆಗೆ ಕೃಷ್ಣನಿತ್ತ
ವಾಗ್ರೂಪ ವಿವರಣೆಗುಂಟೆ ನಿದರ್ಶನ?
ಉಂಟು: ಗಾಂಧೀ ಜೀವನ್ಮುಕ್ತ.

ಸತ್ಯವನರಸಲು ನಿತ್ಯದ ಬದುಕನು
ಹೊತ್ತಗೆ ಮಾಡಿಕೊಂಡವನು;
ನಿದ್ರೆಯೊಳೆಚ್ಚರ ಎಚ್ಚರದೊಳು ನಿದ್ರೆ
ಕರಣಗಳಿಗೆ ಬೀಗಮುದ್ರೆ.
ಗೀತೆಯ ನೀತಿಯ, ಮಾತಿನ ತೂತಿನ
ಮಡಕೆಗೆ ತುಂಬದ ಜಾಣ,
ಆತುಮಕಲಶದೊಳಮೃತವಾಗಿಸಿಕೊಂಡ
ಗೀತೆಯ ಗುಟ್ಟಿನ ಮಾನ.

ನಡತೆಗೂ ನುಡಿತಕೂ ನೂರು ಗಾವುದ ದೂರ
ಮಾಡುವ ಲೋಗರ ರೋಗ
ಹಿಡಿಯಲಿಲ್ಲವೊ ನಿನ್ನ: ಎರಡನೂ ಬಂಧಿಸಿ
ಸಂಧಿಸಿ ತೋರುವ ಯೋಗ

ನಿನ್ನ ಸಾಧನೆ ಸಿದ್ಧಿ: ಅದರೊಳು ಸದ್ಬುದ್ಧಿ
ಸಾಕ್ಷಿಯ ಸ್ಥಾನವ ವಹಿಸಿ
ಋತವನು ನಿಲಿಸಿತು ನಿನ್ನನು ಗೆಲಿಸಿತು
ಅನೃತದ ಕಾಡನು ದಹಿಸಿ.

‘ಉಂಡರೂ ಉಪವಾಸಿ ಬಳಸಿ ಬ್ರಹ್ಮಚಾರಿ’
ಎನ್ನುವ ಸೂತ್ರ ಸುಸೂತ್ರ;
ಉಪವಾಸ ನಿನ್ನೂಟ ಬಹ್ಮಚರ್ಯವೆ ಭೋಗ,
ಅದಕೂ ಮಿಗಿಲು ನಿನ್ನ ಪಾತ್ರ

ಸತ್ಯವ ನುಡಿಯಯ್ಯ ಪ್ರಿಯವನು ನುಡಿಯಯ್ಯ
ಅಪ್ರಿಯ ಸತ್ಯವು ಬೇಡ;
ಪಥ್ಯವ ಮಾಡಯ್ಯ ರುಚಿಯನು ಬಿಡಬೇಡ
ಕಹಿಯಾದ ಪಥ್ಯವು ಬೇಡ

ಎಂಬ ಸುಲಭವೈದ್ಯ ನಿನಗೂ ಸುವೇದ್ಯ
ಹಿಡಿದೆ ನೀ ಕಠಿನದ ಪಥ್ಯ;
ನಂಬಿದ ಬೆಳಕನು ತುಂಬೆ ನೀ ನುಡಿಯಲಿ
ಜೀವರತ್ನ ನಿನ್ನ ಸತ್ಯ.
ಇಹದಿರವೊಳ್ ಪರದರಿವನು ಸರಿಬೆರಸಿ
ಬ್ರಹ್ಮದೊಳ್ ನೆಲೆನಿಂತ ಪ್ರಜ್ಞ;
ಸಹನೆಯ ಮೂರ್ತಿ, ಅಹಿಂಸೆಯ ಗೋವನು
ಕರೆದು ಬೇಳ್ದೆ ಪ್ರಾಣಯಜ್ಞ.
ನಾಡೆಲ್ಲ ತಿರುಗುತ ನಿಶ್ಚಲ ವೊಳನಿಲವು
ನಿಂತೆಡೆ ವಿಶ್ವಸಂಚಾರಿ;
ಓಡಾಡುವ ಸ್ಥಾಣು; ನಿಂತ ನಭದ ಭಾನು;
ಸಚ್ಚಿದಾನಂದವಿಹಾರಿ.

ಸತ್ಯ ಅಹಿಂಸೆಯ ಸಾಧನಶುದ್ಧಿಯ
ಮಾರ್ಗವ ತೋರಿದೆ ಜಗಕೆ;
ನಿತ್ಯ ಜನಿಸುವರೆ ನಿನ್ನೊಲ್ ಮಹಾತ್ಮರು?
ಒಮ್ಮೊಮ್ಮೆ ಯುಗದಿಂದ ಯುಗಕೆ.

ಯಾರೋ ಒಬ್ಬಾ ಮೂಢ ಗುಂಡಿಟ್ಟು ಕೊಂದದ್ದು
ನಿನ್ನಯ ಜಡದೇಹವನ್ನು;
ವಿಶ್ವಚಿತ್ತದಲಿ ನೀನಮರನು, ನಿತ್ಯದ
ಬೆಳಕಾಗಿ ಬೆಳಗುವಂಥವನು.

ಬಿಡುಗಡೆಯನು ತಂದೆ ನಾಡಿಗೆ ನೀ ತಂದೆ,
ಮರೆತೆವು ನಿನ್ನನು ಅಂದೆ;
ನುಡಿಗುಡಿಯಲಿ ನಿಲಿಸಲು ನಿನ್ನ ಮರೆಯೆವು:
ಪಿತರಂ ಸದಾ ವಂದೇ ಮಂದೇ.

೮-೧೦-೧೯೬೮]

## ಸತ್ಯವ್ರತ
(ಪಿರಿಯಕ್ಕರ)

ನಿನ್ನಾ ಜೀವನದುದ್ದಕು ಸತ್ಯವ ಶೋಧಿಸಹಿಂಸೆಯ ಮರ್ಮವನು
ಚೆನ್ನಾಗರಿಯಲುನ್ನತ ತಪವನು ನಡಸುತ ಜೀವನಧರ್ಮವನು
ನಡೆಯಾ ನುಡಿಯಾ ಅನ್ಯೋನ್ಯಾಶ್ರಯವನು ಬಿಡದೆ ನಿಷ್ಕಾಮದ ಕರ್ಮವನು
ಮಡದಿ ಮಕ್ಕಳ ಹಂಗನು ತೊರೆಯುತ ನೀ ಕಂಡೆ ನಿರ್ಗುಣ ಬ್ರಹ್ಮವನು.
ಸತ್ಯ ಸಮಭಾವ, ಭೇದಭಾವನೆ, ಮಿಥ್ಯ, ಸತ್ಯಜೀವನ 'ಶಿವಸುಂದರ'
ಹತ್ಯೆ ದುಃಖಕೆ ಹೇತು, ಅಹಿಂಸೆಯೆ ಸರ್ವಭೂತಹಿತಕ್ಕೆ ಸರ್ವಾಧಾರ
ಎರಡು ಮುಖಗಳು ಸತ್ಯ ಅಹಿಂಸೆಗಳಿವನುಳ್ಳ ಜೀವನ ಹೊನ್ನ ನಾಣ್ಯ
ಪರಮ ಮೌಲ್ಯದ ನಾಣ್ಯದ ಗಳಿಸಿದೆ ಉಳಿಸಿದೆ, ಎನಿಸಿದೆ ವಿಶ್ವಮಾನ್ಯ.

ಸತ್ಯಾರ್ಥಕ್ಕೆ ನೀ ಬದುಕಿನ ಭಾಷ್ಯದ ಬರೆದ ಸ್ವಾನುಷ್ಠಾನದ ಹೊತ್ತಗೆ
ಕೃತ್ಯಾಕೃತ್ಯದ ಸೂಕ್ಷ್ಮಧ್ವನಿಗಳ ಕೇಳಿಪ ಜೀವನಧರ್ಮಗೀತೆ
ಸತ್ಯವ್ರತನಿಷ್ಠ ನಿನ್ನಿಂದ ಬಂಧನಮುಕ್ತಳಾದಳು ಭರತಮಾತೆ
ಸತ್ಯನಾರಾಯಣನ ಭಕ್ತ, ಬಾ ಬಾಪು, ಸತ್ಯದ ಪಾಠವ ಕಲಿಸು ಮತ್ತೆ.

ತಂದೆ, ಸಾಧನಶುದ್ಧಿಯಿಂದೆಮಗೆ ನೀ ಗಳಿಸಿದ ಗರಿಮೆಯ ಸ್ವಾರಾಜ್ಯವು
ಇಂದು ಸ್ವಾರ್ಥದ ಅಧಿಕಾರಮತ್ತರಿಗಾಗಿದೆ ಔತಣ ಸುಭೋಜ್ಯವು
ಎಲ್ಲಿ ಆ ತ್ಯಾಗ ಮತ್ತೆಲ್ಲಿಸೌಹಾರ್ದ ಗುಂಪುಗುಂಪುಗಳಾಗಿ ಒಳ ವ್ಯಾಜ್ಯವು
ಸುಳ್ಳುಹಿಂಸೆಗಳಿಗೆ ಪೀಠ ಹಾಕಿದೆ: ಅವುಗಳೆ ಜನಕಿಂದು ಸಂಪೂಜ್ಯವು.

ಸತ್ಯವ್ರತಧಾರಿ ಬೀದಿಭಿಕಾರಿಯಂತಜ್ಞಾತನಾಗಿಹ ತಲೆಮರಸಿ
ಮಿಥ್ಯಾಮೋಹಿನಿ ತಾಪೆಯ ಕಟ್ಟುತ ಜನದ ಕಣ್‌ಬೊಂಬೆ ಕಲೆಯರಸಿ-
ಗಾಂಧಿ, ನಿನ್ನಯ ಪಟಪೂಜೆ ನಡೆದಿದೆ ಸತ್ಯ ಅಹಿಂಸೆಯ ಮಂತ್ರಪಾಠ
ಸಂಧಿಕಾಲದ ಗೊಂದಲರಾಜ್ಯಕೆ ಎಂದಂತ್ಯ? ನಡೆಯಲಿ ದೈವದಾಟ!
೨೩-೧೧-೧೯೬೯]

## ಇಳೆಯ ಹಿರಿ ಬೆಳಕು

೧

ಮೇದಿನಿಯೊಳು ಭಾರತವನು ಮೇಲ್ಮೆಯಲ್ಲಿ ನಿಲಿಸಲೆಂದು
ಮಿಗೆ ಸ್ವತಂತ್ರವಾಗಿ ನಾಡು ಬೆಳಗಿ ಬದುಕಿ ಬಾಳಲೆಂದು
ಮೋಸಗಾರ ಬಿಳಿಯರನ್ನು ಶುದ್ಧವೀರ ಹೃದಯದಿಂದ
ಗೆದ್ದು ಶೀಲಶೈಲ ಶಿಖರವೆನಿಸಿಯದರ ನೆತ್ತಿಯಲಿ
ಬೆಳುಗುತಿರುವ ಕುಲದೀಪವೆ, ತುಪುಮನದ ತನಿಬೆಳಕೇ,
ಮೋತಿಲಾಲನೊಲುಮೆ ಪುತ್ರ ಜವಹರಲಾಲನೆ ನಿನ್ನಯ
ಗುಣವ ಹಾಡಿಹೊಗಳಲೆನಗೆ ಒಂದೆ ನಾಲಗೆ!

೨

ನಾಯಕರಿಗೆ ಮಾರ್ಗದರ್ಶಿ, ಶಾಂತಿದೂತನಯ್ ನೀನು,
ಮಕ್ಕಳಿಗೆ ಚಾಚ ನೆಹರು, ಕಲಿತವರಿಗೆ ಹಿರಿಯ ಗುರು,
ಕಲೆಯುವರಿಗೆ ಹಿರಿಯ ರಸಿಕ, ದೇವರ ಅಧಿದೈವ.
ಕೆಳೆಯರಿಗೆ ಕೆಳೆಯ, ನೀಚ ವೈರಿಗಳಿಗೆ ಹೋರುಗತ್ತಿ,
ಗೆಲವ ಹೆಸರ ಬಯಕೆಯುಳ್ಳ ವೀರರ ರಕ್ಷೆಯ ಕವಚ,

ಕಂಗೆಟ್ಟಿಹ ಬಡವರ ಬವಣೆಯನು ಉಂಬ ಪಾಲುಗಾರ–
ಎಲ್ಲರೊಲುಮೆ ನೆಲಸಿನಿಂತ ದೇವಾಲಯ ನೆಹರೂ.

೩

ಒಕ್ಕಿಮೆಯುಳ್ಳ ಆಳ್ಕೆಯಲ್ಲಶೋಕನೆಂದು ಹೆಸರಾಗಿಹೆ,
ವಿಶಾಲ ಧರ್ಮದೃಷ್ಟಿಯಲ್ಲಿ ಅಕ್ಬರೆಂದು ಹೊಗಳುವರು,
ಜನಹಿತವನು ಸಾಧಿಪ ನಾಡೂಳಿಗದಾಳೆಂದೆನಿಸಿಹೆ–
ಹಿಮಾಲಯಕ್ಕೊಡೆಯ ನಮ್ಮ ನೆಹರು ಹೆಸರು ಚಿರಬಾಳ್ಗೆ!

೪

ಸ್ಥಿರಹಿಮಗಿರಿಯಿಂದ ತೊಡಗಿ ಹೆಚ್ಚುತಿರುವ ಹೆಸರ ಪಡೆದ
ತಮಿಳ್‌ತೆಂಕಣ ತಾಯ್‌ಕುಮಾರಿಯಡಿಯ ವರೆಗೆ ಆಳ್ಕೆಗೈದ,
ಹಿರಿಯ ನಾಡಿನಿತಿಹಾಸದೊಳೊರ್ವನೇ ನಾನೆ ದೊರೆ
ಎಂಬ ಹಿರಿಮೆ ಗರಿಮೆಯೊಡನೆ, ಓ ಜವಹರ ನಾಯಕನೇ!

೫

ಕೃಷ್ಣನೊರೆದ ಗೀತೆಯಾಗೆ ಸೊಗಸಿನ ಸಿಂಹಾಸನ.
ಬುದ್ಧದೇವನೊರೆದ ಹಿರಿಯ ನೀತಿ ತೆರೆದ ಬೆಳ್ಗೊಡೆ,
ನಾಯಕ ಗಾಂಧಿಯ ಧರ್ಮದ ಪಥವಾಗಲು ರಾಜದಂಡ,
ನಿನ್ನರಸಾಳ್ಕೆಯ ನೋಡಲು ಸಹಿಸದಾದ ದೇವನೂ.

೬

ಕೂಟಗಳಿಗೆ ಸೇರದ ಹೊಸ ನೀತಿಯನ್ನು ನಟ್ಟು ಬೆಳಸಿ
ಒಳ್ಳೆಯ ನಡುನಿಲುವಿನಲ್ಲಿ ಹೊರಳದೆ, ಇಳೆಯವರೆಲ್ಲಾ
ಹುರುಡಿಸಿ ಹೊಗಳುತ್ತಿರಲು, ಅಕಟ ನಮ್ಮ ಪುಣ್ಯನೇ,
ಹಾಳು ವಿಧಿಯ ಬಾಯ್ಗೆ ಬಿದ್ದೆ, ನಾವನಾಥರೇನ ಗೈವೆವು?

೭

ಅಪೂರ್ವ ರಾಜ್ಯನೀತಿಯರಿವಿನಲ್ಲಿ ಪ್ಲೇಟೊ ಎನ್ನಲೆ?
ಗುಲಾಮಗಿರಿಯ ನೀಗುವಲ್ಲಿ ಲಿಂಕನ್ಸ್ ಎನ್ನಲೆ?

ಪ್ರಸಿದ್ಧ ಕ್ರಾಂತಿಕಾರರಲ್ಲಿ ಗ್ಯಾರಿಬಾಲ್ಡಿ ಎನ್ನಲೆ?
ಹೇಳಲರಿಯದಂಥ ತ್ಯಾಗದಲ್ಲಿ ಬುದ್ಧನೆನ್ನಲೆ?
ನಮ್ಮ ಭರತ ವರ್ಷದಮಲ ಮಹಿಮೆಯನ್ನು ಲೋಕಕೆಲ್ಲ
ತಿಳಿಸುವೆಡೆಯೊಳಾ ವಿವೇಕಾನಂದನೆನ್ನಲೆ?
ಹಿರಿಯ ತಾಯಿನಾಡಿಗಾಗಿ ಹಿಂದೆ ಮುಂದೆ ನೋಡದುಸಿರ
ತೊರೆವ ಹಿರಿಯ ಗುಣದಲ್ಲಿ ನಿನ್ನ ಗಾಂಧಿಯೆನ್ನಲೆ?

೮

ನಿನ್ನ ಹಣ್ಣಿನಂಥ ಒಡಲ ಹಣವ ಮನವ ಬಾಳಿನುಸಿರ
ನಾಡಿಗೆರೆದ ಪಂಡಿತನೆ, ನಮ್ಮ ನೆಲಕೆ ಒದಗಿ ಬಂದ
ಕೀಳುದಾಸ್ಯವನ್ನು ಮುರಿಯೆ ಜಡರಾಗಿಹ ನಾಡವರಿಗೆ
ಉಸಿರ ಹೊಯ್ದು, ಗಾಯಗೊಂಡ ಮನಕೆ ತಂಪನಿಂಪನೆರೆದೆ;
ಇಂದು ನೀನು ಸ್ವರ್ಗಕೇರಿ, ಬಿರುಗಾಳಿಯ ಹಡಗಿನಂತೆ
ಕಣ್ಣೀರಿನ ಕಡಲಿನಲ್ಲಿ ಮುಳುಗಿರುವೆವು ನಾವು–
ವಿಧಿಯಿನಾದ ಗತಿಯಿದೆಮಗೆ, ಬಗೆ ಬೇಯುತ್ತಿಹುದು.

೯

ನಾಡಿನಲ್ಲಿ ಸಮಧರ್ಮದ ಜನರಾಳ್ಕೆಯ ಸ್ಥಾಪಿಸಿ,
ತಾಯ್ನಾಡಿನ ಮಕ್ಕಳೆಲ್ಲ ಸಮತೆ ಸ್ವಾತಂತ್ರ್ಯ ಶಾಂತಿ
ಸಹೋದರತ್ವಗಳನು ಹೊಂದಿ ತಲೆಯನೆತ್ತಿ ನಡೆವ ರೀತಿ
ಹಿರಿಮೆಯನ್ನು ನಮಗೆ ತಂದು, ಹಿಮಗಿರಿಯಿಹ ವರೆಗೆ ಹೆಸರ
ನಿಲಿಸಿಕೊಂಡ ಎಣೆಯಿಲ್ಲದ ಜವಹರಲಾಲ್ ನೆಹರುವೇ,
ಯಮಧರ್ಮನ ಆಳ್ಕೆಯಲೂ ಸಮಧರ್ಮವ ಕಾಣಲೆಂದು
ನಮ್ಮನುಳಿದು ಅಗಲಿದೆಯಾ, ನಾವು ಏನ ಗೈವೆವಿನ್ನು?

೧೦

ವೇಷಕಟ್ಟಿ ಸವಿನುಡಿಯಲೆ ಮೋಸಗೈದು ಇಂದೆಮ್ಮಯ
ಹಗೆಯೆನಿಸುತ ಮಾರ್ಪಟ್ಟಿಹ ಕೀಳು ಚೀಣರೆಮ್ಮ ಬಳಿಗೆ
ಬಿಕ್ಕೆಗಾಗಿ ಬಯಸಿ ಬರಲು ಬೇಡಿತೆಲ್ಲವನ್ನ ವರ್ಗೆ

ಹೇಳದೆಯೆ ಕೊಡುವೆವಾವು, ಜೀವಿಸಿಕೊಂಡಿರಲವರು;
ನೆಲವ ಕಸಿದುಕೊಳ್ಳಲೆಂದು ಹೆದರದವರು ಬರುವೊಡೆ
ಅಣುವಿನನಿತು ಎಡೆಗೊಡೆವು, ಇಲ್ಲಿವೆ ಬಲವಾದ ತೋಳು;
ತುಚ್ಛರೆಂದು ಎಣಿಸುವೆವು, ಥೂ ಎಂದುಗಿವೆವು ಮೇಲೆ–
ಒಡ ನೆರೆವೆಮಗೊಂದೆ: ಕೆಚ್ಚು; ಉಂಟು ಜೊತೆಗೆ ದೈವವೂ.

೧೧

ಸಾವಿರ ವರುಷಕೆ ಒಮ್ಮೆಯೆ ಈ ನೆಲದಲಿ ಅವತರಿಸುವ
ಒಳ್ಳಿದ ನಾಯಕನವನು–ಹೆಚ್ಚುತಿರುವ ಕಿಚ್ಚಿನವೊಲು
ಬಿಳಿಯರೆಂಬ ಅರಳೆಯನ್ನು ತುಡುಕಿ ಸುಟ್ಟು ಭಸ್ಮಗೈದ
ಧೀರನವನು–ಭರತವರ್ಷದುದಯ ಸೂರ್ಯನಂತಿರುವನು–
ದಾಸ್ಯದ ಬಡತನವ ಕಳೆದ ಲೋಕೋತ್ತರ ಪುರುಷನವನು–
ಅಮರನವನು ಪಂಡಿತ ಜವಹರಲಾಲ್ ನೆಹರೂ.

೧೨

ಇಳೆಯ ಹಿರಿಯ ದೀಪವೇ, ನಾಡ ಮೂಡುನೇಸರೇ!
ಬಲಿಷ್ಠರಾಜ್ಯಗಳನು ಒಂದುಗೂಡಿಪಲ್ಲಿ ಸೇತುವಾಗಿ
ನಿಂತು ದುಡಿದ ಒಳ್‌ಗುಣಗಳ ನೆಲೆ ನೆಹರೂ ಪಮಡಿತನೇ,
ನಿನ್ನ ಕಳೆದುಕೊಂಡ ನಾಡ ಮಕ್ಕಳು ಕೊರಗುತ್ತಿರಲು
ಗೋಳಾಡುತ್ತಿಹರ ಕೊರಳ ದನಿಯ ಕೇಳೆ ಸಾಧ್ಯವೇ?
ಗರ್ಭಗುಡಿಯ ಮೂಲವರಾ ಗಾಂಧಿಯಲ್ಲಿ ಐಕ್ಯವಾದ
ಉತ್ಸವಮೂರ್ತಿಯೆ, ಅನಂತ ನಿನ್ನಯ ಕೀರ್ತಿಯ ಹಿರಿಮೆ!

೧೯೬೪]

(ಶ್ರೀ ಡಿ. ಕೃಷ್ಣಮೂರ್ತಿಯವರ ತಮಿಳು ಕವನದ ಅನುವಾದ)

# ಇದು ನನ್ನ ಬಯಕೆ

ಭಾರತದ ಜನರಿಂದ ನಾ ಪಡೆದ ಒಲ್ಮೆನಲ್ಮೆಯಪಾರ; ನಾನೇನೆ ಮಾಡಲಿ,
ಅದರ ಲವಲೇಶವನೂ ಮರಳಿ ಸಲ್ಲಿಸಲಾರೆ; ಇದು ನಿಜ, ಒಲ್ಮೆಯಂತಹ
ಬೆಲೆಯ ಸರಕನು ಹಿಂದಿರುಗಿ ಸಲಿಸುವರೆ, ಸಾಧ್ಯವಾಗದ ಮಾತು.
ಮೆಚ್ಚುಗೆಗೆ ಪಾತ್ರರು ಹಲವರು, ಮನ್ನಣೆಗೆ ಕೆಲವರು;
ಆದರೆ, ಭಾರತದ ಎಲ್ಲ ಬಗೆ ಜನರಿಂದ ನನ್ನೆಡೆಗೆ ಬಂದ ಒಲ್ಮೆ
ಅಳತೆಮೀರಿ ಅಪಾರ, ಕೊಚ್ಚಿಹೋಗಿರುವೆನದರಲ್ಲಿ.
ನಾನು ಬದುಕಿರುವ ಇನ್ನುಳಿದ ವರ್ಷಗಳಲ್ಲಿ,
ನಾ ನನ್ನ ಜನರಿಗೆ, ಅವರಿಟ್ಟ ಒಲ್ಮೆಗೆ, ತಗದವನು ಎನಿಸೆನು:
ನನ್ನಾಶೆಯೆಂದಿದನು ತಿಳಿಸಬಲ್ಲೆ, ಅಷ್ಟೆ.

ಎಣಿಕೆಮೀರಿದ ನನ್ನ ಗೆಳೆಯರಿಗೆ ಜೊತೆಗಾರರಿಗೆ ನಾನು
ಹೊತ್ತ ಉಪಕೃತಿಯ ಋಣ ಇನ್ನೂ ಹಿರಿದು.
ಕೈಕೊಂಡ ಹಿರಿಯ ಕೆಲಸಗಳಲ್ಲಿ ಜೊತೆಜೊತೆಯ ಪಾಲುಗಾರರು ನಾವು;
ಅವುಗಳನು ಬೆಂಬತ್ತಿ ತಪ್ಪದೆಯೆ ಒಡಗೂಡಿ ಬರುವ
ಗೆಲುವುನೋವುಗಳನ್ನು ಹಂಚಿಕೊಡಿಹೆವು.

*

ನಾ ಮಡಿದ ಮೇಲೆ, ನನಗಾಗಿ ಯಾವೊಂದು ತೆರನ
ಮತನಿಷ್ಠ ಅಪರಕರ್ಮಗಳ ಮಾಡುವುದೆನಗೆ ಸೇರದು;
ಹೇಳಬಯಸುವೆನಿದನು ಮನಸಾರೆ, ಸಾರಿಸಾರಿ.
ನಾ ಮಡಿದ ವೇಳೆ, ನನ್ನ ದೇಹವ ದಹನ ಮಾಡುವುದು;
ಇದು ನನ್ನ ಬಯಕೆ.
ನಾ ಮಡಿಯೆ ಪರದೇಶದಲ್ಲಿ, ನನ್ನ ದೇಹವನಲ್ಲಿಯೇ ದಹನಮಾಡಿ
ನನ್ನ ಚಿತೆಭಸ್ಮವ ಪ್ರಯಾಗಕ್ಕೆ ಕಳುಹುವುದು,
ಈ ಭಸ್ಮದೊಂದು ಹಿಡಿಯನ್ನು ಗಂಗೆಯಲಿ ಕದಡುವುದು;
ಇನ್ನುಳ್ಳಿವ ಬಹುಪಾಲನೀ ಮುಂದೆ ನಿರ್ದೇಶಿಸಿದ ರೀತಿ

ವಿನಿಯೋಗವಾಡುವುದು.
ಭಸ್ಮದಲಿ ಏನನೂ ಉಳಿಸಲಾಗದು. ರಕ್ಷಿಸಿಡಲಾಗದು.

ನನ್ನ ಚಿತೆಭಸ್ಮದಲಿ ಒಂದು ಹಿಡಿಯನ್ನು
ಪ್ರಯಾಗದಲಿ ಗಂಗೆಯಲಿ ಕದಡಬೇಕೆಂದೆಂಬ ನನ್ನ ಬಯಕೆಯಲಿ.
ನನ್ನ ಮಟ್ಟಿಗೆ ನುಡಿಯೆ, ಮತದ ದೃಷ್ಟಿಯೆ ಇಲ್ಲ.
ಈ ಬಗೆಗೆ. ಮತದ ಭಾವನೆಯೇ ಇಲ್ಲ ನನಗೆ.
ಚಿಕ್ಕಂದಿನಿಂದ ನನಗೂ ಗಂಗೆ ಯಮುನೆಗೂ
ಬಿಡದಂಟುನಂಟು; ನಾನು ಬೆಳೆಬೆಳೆದಂತೆ ಬೆಳೆದಿರುವುದೀ ನಂಟು.
ಋತುಋತುಗೆ ಮಾರ್ಪಟ್ಟು ಅವು ಮೆರೆವ ಭಾವಗಳ ನಾ ಗಮನಿಸಿರುವೆ.
ಯುಗಯುಗಾಂತರದಿಂದ ಅವುಗಳೊಂದಿಗೆ ಹೊಂದಿ,
ಹರಿವ ನೀರಿನ ಒಂದು ಭಾಗವೆಂಬಂತಾಗಿ.
ಅವ ಕುರಿತ ಇತಿಹಾಸ ಸಂಪ್ರದಾಯ ಪುರಾಣ ಹಾಡುಕತೆ
ಇವನ್ನೆಲ್ಲ ಚಿಂತಿಸಿರುವೆ.

ಭಾರತದ ನದಿಯೆನಲು ಗಂಗೆಯೆ;
ಭಾರತದ ಜನಕೆಲ್ಲ ಪ್ರಿಯಳು ಗಂಗೆ;
ಭಾರತದ ಹಳೆಕುಲದ ನೆನಪುಗಳು, ಆಶೆ ಆಕಾಂಕ್ಷೆ ಭಯಭೀತಿಗಳು,
ಅದರ ಗೆಲುವಿನ ಗೀತ ಸೋಲುಗೆಲುವುಗಳು-
ಎಲ್ಲ ಗಂಗೆಯ ಸುತ್ತ ಹೆಣೆದುಕೊಂಡಿಹವು.
ನಿತ್ಯವೂ ಮಾರ್ಪಡುತ ನಿತ್ಯವೂ ಹರಿಯುತಿಹಳವಳದೇ ಗಂಗೆ-
ಭರತವರ್ಷದ ಪುರಾತನ ನಯದ ಸಂಕೇತ, ನಾಗರಿಕತೆಯ ಕುರುಹು.
ಹಿಮಗಿರಿಯೆನಲು ನನಗೆ ತುಂಬುಪ್ರೇಮ;
ಗಂಗೆಯೆನಲೊಡನೆ, ಅದರ ಹಿಮಕವಿದ ಶಿಖರಗಳು ಆಳದ ಕಂದರಗಳು
ಸುಳಿಯುವುವು ನೆನಪಿನಲಿ; ಅಲ್ಲದೆಯೆ. ಎಲ್ಲಿತ್ತೊ
ನನ್ನ ಬದುಕಿನ ಋಣ ನನ್ನ ದುಡಿಮೆಯ ಸಲ
ಆ ಸರ್ವಸಂಪನ್ನ ಸಲುವಿಶಾಲ ಬಯಲನೂ ನೆನೆವೆ.
ಮುಂಜಾನೆ ನಸುಕಿನಲಿ ನಸುನಗುತ ಕುಣಿಯುವಳು;
ಸಂಜೆಗತ್ತಲು ಕವಿಯೆ ಗಂಭೀರೆ ಖಿನ್ನೆ ಗುಹ್ಯೆ;

ಮಾಗಿಯಲಿ ತೆಳ್ಳನೆಯು ಸೊಗಯಿಸುವ ಮಂದಗಮನೆ;
ಕಾರ್ಗಾಲದಲ್ಲಿಯೋ, ಗರ್ಜಿಪ ಮಹಾಶಕ್ತಿ;
ಕಡಲಗಲದೆದೆಯುವಳು, ಕಡಲಿನಷ್ಟೇ ಶಕ್ತಿ ನಾಶಗ್ರೈವಲ್ಲಿ;
ಇಂಥವಳು ಈ ಗಂಗೆ, ನನ್ನ ದೃಷ್ಟಿಯಲಿ,
ವರ್ತಮಾನದಿ ಹರಿದು ಭವಿತವ್ಯಸಾಗರವ ಕೂಡಿಕೊಳುವ
ಭಾರತದ ಗತಕಾಲದೊಂದು ಸಂಕೇತ, ಒಂದು ಸಂಸ್ಮರಣೆ.
ಹಳೆ ಸಂಪ್ರದಾಯ ಪದ್ಧತಿಗಳಲಿ ಬಹುಭಾಗ ತೊರೆದಿರುವೆ ನಾನು;
ತನ್ನ ಬಂಧಿಸಿ ಬಿಗಿದುಕಟ್ಟಿರುವ,
ತನ್ನ ಜನದಲ್ಲೊಡಕನುಂಟುಮಾಡಿರುವ,
ಅಪಾರ ಸಂಖ್ಯೆ ಜನರ ದಮನಮಾಡಿರುವ,
ದೇಹಚೈತನ್ಯಗಳ ಸ್ವಚ್ಛಂದ ಬಳವಿಯನು ತಡೆದಿರುವ
ಎಲ್ಲ ಸಂಕೋಲೆಗಳ ಭಾರತವು ಕಿತ್ತೊಗೆಯಬೇಕೆಂದು ಹಾತೊರೆಯುತಿರುವೆ;
ಆದರೂ, ಈಯೆಲ್ಲವನು ನಾನು ಬಯಸಿದರು ಕೂಡ,
ಗತಕಾಲದೊಡನೆನ್ನ ಸಂಬಂಧವನು ಪೂರ್ತಿ
ಕಡಿದು ದೂರಕೆ ಸಿಡಿದು ನಿಲ್ಲುವ ಅಪೇಕ್ಷೆ ನನಗಿಲ್ಲ.
ನಮ್ಮದೆನಿಸಿದ್ದಿಂದಿಗೂ ನಮ್ಮದೆನಿಸಿರುವ
ಪೂರ್ವಿಕರು ಬಿಟ್ಟ ಆ ಹಿರಿಯ ಆಸ್ತಿಯಲಿ ನನಗೆ ಬಲು ಹೆಮ್ಮೆ-
ಭಾರತದ ಪ್ರಾಚೀನದಿತಿಹಾಸದುದಯ ಕಾಲದವರೆಗೆ
ಹಬ್ಬಿರುವವಚ್ಛಿನ್ನ ಸರಣಿಸರಪಣಿಯಲ್ಲಿ
ನಮ್ಮೆಲ್ಲರಂತೆ ನಾನೊಂದು ಕೊಂಡಿ.
ನಾ ಮುರಿಯಲೊಲ್ಲೆನಾ ಸರಪಣಿಯ; ಏಕೆನಲು,
ಅದು ನನ್ನ ನಿಧಿಯಂತೆ, ಅದರಿಂದಲೇ ನನ್ನ ಸ್ಫೂರ್ತಿಸರ್ವಸ್ವ
ನನ್ನ ಈ ಹಂಬಲಿಗೆ ಸಾಕ್ಷಿಯಾಗಿ,
ಭಾರತದ ಸಂಸ್ಕೃತಿಯ ಆಸ್ತಿಗೆನ್ನಯ ಕಡೆಯ ಕಾಣಿಕೆಯಾಗಿ,
ನನ್ನ ಚಿತೆಭಸ್ಮದಲಿ ಒಂದು ಹಿಡಿಯನ್ನೊಯ್ದು
ನನ್ನ ತವರೂರ ಬಳಿ ಗಂಗೆಯಲಿ ಕದಡಬೇಕೆಂದು
ಈ ನನ್ನ ಬಿನ್ನಹ;
ಭಾರತದ ತೀರವನು ತೊಳೆಯುವ ಮಹಾಸಾಗರಕೆ ಹಿಡಿಯ ಭಸ್ಮವನು

ಗಂಗೆ ಕೊಂಡೊಯ್ಯಲಿ.
ಇಂತಿದ್ದರೂ ಕೂಡ, ನನ್ನ ಚಿತೆಭಸ್ಮದ ಬಹುಭಾಗವನ್ನು
ಬೇರೆ ವಿಧದಲ್ಲಿ ವಿನಿಯೋಗಿಸುವುದು.
ಅದ ವಿಮಾನದಲೊಯ್ದು ಅಂತರಿಕ್ಷದ ಮೇಲೆ,
ದುಡಿಯುವರು ಯಾವಲ್ಲಿ ನಾಡಿನೊಕ್ಕಲುಮಕ್ಕಳು
ಅಲ್ಲಿ ಹೊಲಗದ್ದೆಗಳ ಮೇಲೆ ಎರಚುವುದು;
ಅಲ್ಲಿ ಅದು ಭಾರತದ ಮಣ್ಣೊಡನೆ ಮಣ್ಣಾಗಿ
ಹುಡಿಯೊಡನೆ ಹುಡಿಯಾಗಿ ಬೆರೆತು ಕಲೆತು,
ಭಾರತದ ಬೇರ್ಪಡಿಸಲಾಗದೊಂದಂಶವಾಗುಳಿಯಬೇಕು:
ಇದು ನನ್ನ ಬಯಕೆ.

೨೧ನೆಯ ಜೂನ್, ೧೯೬೪]

(ಜವಹರಲಾಲ್ ನೆಹರೂ ಅವರ ಅಂತಿಮ ಇಷ್ಟಪತ್ರದ ಅನುವಾದ)

## ಅಸುಜಲವನೆರೆಯಲರಳಿತು ಮೊಗ್ಗು ಹನಿಯಿಡುತ

(ತಾಷ್ಕೆಂಟ್ ಒಪ್ಪಂದಮಾಡಿಕೊಂಡು ಅಸುನೀಗಿದ ಲಾಲ್‌ಬಹದೂರ್ ಶಾಸ್ತ್ರಿ ಅವರನ್ನು ನೆನೆದು)

ಸಮರಭೂಮಿಯಲಮರಶಾಂತಿ ವರ್ಧಿಸಲೆಂದು,
ಕೆನ್ನೀರು ಮೂಳೆಗೊಬ್ಬರವುಂಡ ನೆಲದಲ್ಲಿ
ಹುಲುಸು ಹಗೆತನದ ಹೆಮ್ಮರ ವಿಷವೆ ಫಲದಲ್ಲಿ
ತಾನೆಂದು, ಕೆಳೆಯ ಕರೆಗೋಗೊಟ್ಟು ಮನಸಂದು,
ಹಗೆಯ ನೀಡಿದ ಕೈಯ ಸೆಳೆದು ನೇಹಕೆ ತಂದು
ಬಿಗಿವ ನೆಚ್ಚೆಗೆಯ ನಂದಾದೀಪವನು ಹಚ್ಚಿ,
ಕದನಕಲಿ ಬಹದೂರ ಚಿರಶಾಂತಿಯನೆ ಮೆಚ್ಚಿ,
ಬಹುದೂರಕೈದಿದನು ಶಾಂತಿಸಸಿ ನಡಲೆಂದು.
ಎರಡು ನಾಡಿನ ಮೇಲ್ಮೆಗೆರಡುಬಗೆಯದ ರೀತಿ
ಎರಡು ಮನಗಳು ಕೂಡಿ ಎರಡು ಕೈಗಳು ಆಡಿ
ನಟ್ಟ ಗಿಡದಲಿ ಮೊಗವನಿಟ್ಟ ಮೊಗ್ಗನು ನೋಡಿ
ನಲಿದು, ನೀರೆರೆಯೆ ಕಟ್ಟುತ್ತ ನಿಷ್ಠೆಯ ಪಾತಿ–

ಯನು, ಮರಳೆ ನಾನಿದಕೆ ನೀರೆರೆವರಾರೆನುತ
ಅಸುಜಲವನೆರೆಯಲರಳಿತು ಮೊಗ್ಗು ಪನಿಯಿಡುತ.

೧೯೬೬]

## ಹೊಸ ಕಲಿಕೆ

ಆಂಗ್ಲರಮ್ಮಯ ಪುಣ್ಯಭೂಮಿಯನು ಮೆಟ್ಟಿದರು,
ರಾಜ್ಯವನು ಕಟ್ಟಿದರು; ಬೇರುಬಿಟ್ಟರು; ಕಡೆಗೆ
ಅವರ ನೆಲಸೆಯ ವೃಕ್ಷ ಬೇರೊಡನೆ ಕಡಿವಡೆದು
ಬಿದ್ದೊಡೇಂ? ಪೇರಾಲದಂತಿದ್ದ ಆ ಮರದ
ಬಿಳಲುಗಳು ನಾಡೊಳೆಲ್ಲೆಡೆಯೂರಿ ಹುಲುಸಾಗಿ
ಬೆಳೆಯುತಿವೆ ಅವರಾಳ್ಕೆಗುರುಹಾಗಿ: ಕೇಳದೇ
ಕಾರ್ಖಾನೆಗಳ ಯಂತ್ರಚಕ್ರಗಳ ಚೀರಾಟ,
ದುಡಿದರೂ ಹೊಟ್ಟೆ ತುಂಬದ ಜನರ ಗೋಳಾಟ,
ಬಂಡವಳಿಗರ ಹಣದ ಥೈಲಿಯ ಝಣತ್ಕಾರ?
ಕಾಣದೇ ಗಿರಣಿಗೊಳವೆಗಳಿಂದ ಹೊರಹಾಯ್ದು
ಬಾನ್ನೀಲಿಯೆಲ್ಲವನು ಕಪ್ಪಿಂದು ಹಚ್ಚಡಿಸಿ
ಹಬ್ಬಿರುವ ಹೊಗೆಮೋಡ? ಸಾಲ್ಗುಮೆರಡೇ ಜನದ
ಜೀವನದ ಝುರಿಯ ಕದಡಲ್ಕೆ. ಈ ಹೊಸ ಕಲಿಕೆ
ಹೊರಗಣ್ಣ ತೆರೆದು ಮಸುಳಿಸಿತೆಮ್ಮವೊಳಗಣ್ಣ.

೧೯೫೩]

## ಕನ್ನಡ ನಾಡಿನ ಹಳೆಯ ಹಾಡು

ಕನ್ನಡ ನಾಡಿನ ಹಳೆಯ ಹಾಡನೇ
  ಹಾಡಲು ಮಾಡಿಹೆ ಮನಸು;
ಚೆನ್ನಲೆ ನಿಜಕೂ ನಿಜವ ನಾಚಿಸುವ
  ಹಳೆನಿದ್ದೆಯ ಮರುಗನಸು.

* * *

ಕನ್ನಡ ನಾಡಿನ ಮರಗಳಲೆಲ್ಲ
ಹೊಂಗೆಯ ನೆರಳದು ತಂಪು;
ಕನ್ನಡ ನಾಡೆಲ್ಲರಿಗಾಸರೆ ತಾ–
ನೆನ್ನುವ ನೆನಹಿನಲಂಪು.

ಕನ್ನಡ ನಾಡಿನ ಹೂಗಳಲೆಲ್ಲ
ಕಂಪಿನ ಮಲ್ಲಿಗೆ ಕಿರಿದು;
ಉನ್ನತಿವಡೆದೂ ವಿನಯವ ಮೆರೆಯುವ
ನಾಡಿನ ಪೆಂಪಿನ ಬಿರುದು.

ನಾಡ ತುಂಬಿರುವ ತೆಂಗುಕಂಗುಗಳು
ಕರೆವುವೆಲ್ಲರನು ಕೈಬೀಸಿ,
ಕನ್ನಡ ಜನರಾತಿಥ್ಯಕೆ ನೀಡುತ
ಅಕ್ಷತೆಬಟ್ಟಲ ಫಲರಾಶಿ.

ಇಲ್ಲಿನ ಕಗ್ಗಲ್ಲೂ ಕಲೆಯಾಗಿ
ದೇವಾವಾಸಕೆ ನೆಲೆಯಾಗಿ
ನಮ್ಮ ಜನದ ನಿಜಭಕ್ತಿ ಚೆಲುವಿನಲಿ
ಹಬ್ಬಿ ಹೂತುದಕೆ ಸಹಭಾಗಿ.

ಕನ್ನಡ ನಾಡಿನ ಹೆಂಗಳ ಕಂಗಳ
ನೋಟ ಜಗಂಗಳ ಗೆಲ್ಲುವುವು
ಎಂಬೊಲು ನಾಡಿನ ಕೊಳ ಕೆರೆ ಕಮಲದ
ಕಂಗಳನರಳಿಸಿ ಸೊಲ್ಲುವುವು.

ಕಪ್ಪು ಕನ್ನಡದ ಹೆಣ್ಣಿನ ಶೀಲದ
ಶುಭ್ರತೆ ಒಳಗಿಂದುಮ್ಮಿತೆನೆ
ಒಪ್ಪುವುದಲ್ಲವೆ ಕರ್‌ನೆಲ ನಗುತಿಹೆ
ಬಿಳಿಹತ್ತಿಯ ಬೆಳ್‌ನಗೆಸೋನೆ?

ಕೃಷ್ಣೆ ಮಲಪ್ರಭೆ ಕಪನಿ ಕಾವೇರಿ
ತುಂಗಭದ್ರೆಯರ ಸಂಗಮವು
ಸಕಲ ಧರ್ಮಗಳ ಕೂಡಲು ಕನ್ನಡ-
ವೆಮಬ ನನ್ನಿಗೆ ಬಾಳ್‌ಗುರುಹು.

ಹಾಳುಬೀಡುಗಳು ಚೀಳುಕುಟುಕಿದರು
ಹಾಳೆಯ ತೆರೆವವು ಹೊಂಗತೆಯ;
ಬಾಳಿ ಬದುಕಿ ಕೆಳಬಿದ್ದರ ನೆನಪು
ಮರೆಸುವಂತೆ ಇಂದಿನ ವೆತೆಯ.

* * *

ರಾಜ್ಯಗಳೆದ್ದುವು ಗೆದ್ದುವು ಬಿದ್ದುವು;
ನಾಡಿಗದೇ ಚೆಲುವಿನ ಮುದ್ರೆ
ಅಚ್ಚೊತ್ತಿ ನೆಲಸಿ, ಎಚ್ಚರವಾಗಿದೆ:
ಜನಕೆ ಮಾತ್ರ ನಿದ್ರೆ!

ಹತ್ತುಹರಿದ ನಾಡೊಂದಾಯಿತು, ನಿಜ:
ಜನವೊ? ಹತ್ತು ದಾರಿ!
ಬತ್ತಿದ ತೊರೆ ಮುಂದಕೆ ಹರಿಯವುದೆ?
ಕಾಣದೆಲ್ಲೊ ತಲಕಾವೇರಿ.

ಬಿಟ್ಟು ಹುರುಳ ಹಿಡಿಹೋಗುವರು ನೆರಳ,
ಗಾಳಿಗುದ್ದಿ ಮೈನೋಯುವರು;
ತಾಯ ಸಾಯಬಿಟ್ಟಾಕಡೆ, ತಮ್ಮೊಳ-
ಕಲಹದ ಕಿಚ್ಚಲಿ ಬೇಯುವರು.

* * *

ಒಮ್ಮೆಯಾದರೂ ನಿದ್ದೆಯೊಳಾಗಲಿ
ಮತ್ತೆ ಅದೇ ಕನಸು;
ಹೊಮ್ಮಿಸಿ ಹೊಸತನು, ಹೂವರಳಿ ಮರಳಿ
ಕನಸಾಗಲಿ ನನಸು.

೧೯೫೮–೫೯]

## ಬನ್ನಿ, ನಾಡವರೆ, ಕಟ್ಟೋಣ ತಾಯಿಗೆ ಗುಡಿಯ

೧

ಬನ್ನಿ, ನಾಡವರೆ, ಕಟ್ಟೋಣ ತಾಯಿಗೆ ಗುಡಿಯ.
ನಮಿಸಲವಳಡಿಯ
ಮೆರಸೆ ತಾಯ್‌ಮುಡಿಯ.
"ಅಕ್ಕರೆಯ ಮಕ್ಕಳು ನೆಲೆಯ ಕಾಣಿಪರು,
ದಾಟಿದೆನು ದುಗುಡ ಗಡಿಯ
ಪಡೆದೆ ಬಿಡುಗಡೆಯ
ನನ್ನ ಮಕ್ಕಳ ಹಿರಿಯ ಹೋರಾಟದಿಂದ.
ಇನ್ನೆನಗೆ ಮೂಗಡಲ ನಡುವೆ ಆಡುಂಬೊಲ,
ನಿಲಲು ನಿಶ್ಚಲ, ಅಗೋ ಹಿಗ್ಗಿನ ಹಿಮಾಚಲ,
ವಿಶ್ವಕಲ್ಯಾಣ ಸಾಧಿಸೆ ತಪಸ್ವಿನಿಯಾಗಿ.
ಬನ್ನಿ ಮಕ್ಕಳೆ ಮೊದಲು ಮುದ್ದಿಡುವೆನೊಮ್ಮೆ,
ಬಳಿಕೆ ಸಾಗಲಿ ನಿಮ್ಮ ಇನ್ನುಳಿದ ಗೈಮೆ"–
ಎಂದು ನಂಬಿಕೆಯ ತೋಳ್‌ಚಾಚಿ ನಮ್ಮನು ಬಾಚಿ
ಬರಸೆಳೆದು ತಬ್ಬಿ ತಕ್ಕೈಸಿದಕ್ಕರೆಯ ತಾಯ್ಗೆ–
'ಮಕ್ಕಳಿಗೆ ಮನೆಯಿಲ್ಲ ನನಗೇಕೆ ಮನೆಯೆಂದು,
'ಮಲೆಗೋಡೆ ಬಯಲ ನೆಲ ಬಾನಚಾವಣಿಮನೆಯೆ
ನನಗೆ ಸಾಕೆಂದು
ಒಲುಮೆ ತೆರೆಯುತಿಹ ಮಮತೆಯ ಮಾತೆಗೆ–
ಬನ್ನಿ, ಸೋದರ ಸೋದರಿಯರೆ, ಕಟ್ಟೋಣ ಗುಡಿಯ

ನಮ್ಮೊಳಿತಕಾಗಿ, ಪೂಜಿಸೆ ನಿತ್ಯ ತಾಯ ತಾವರೆಯಡಿಯ,
ತಲೆಗಾನಲದರ ಹೊನ್ನಿನ ಹುಡಿಯ,
ಉಟ್ಟು ನಿರ್ಮಲಮನದ ಮಡಿಯ.
ಅಣ್ಣತಮ್ಮದಿರಕ್ಕ ತಂಗಿಯರೆ ಬನ್ನಿ,
ತನ್ನಿ ಕಾಯಕದ ಕಾಣಿಕೆಯ,
ಪೂಣಿಕೆಯ ಗೈದು–
ಸುತ್ತ ಪಾಳ್‌ಗೆಡೆದಿರುವ ಮೊದಲ ಹಿರಿಗುಡಿಯ,
ಹೆರರ ಸುಲಿಗೆಯ ಕಣ್ಣ ಸೆಳೆದ ಸಿರಿಗುಡಿಯ
ಉದ್ಧಾರಕಾಗಿ
ಸಿದ್ಧರಾಗಿ.
ಹತ್ತುಕಡೆ ಹರಡಿರುವ ಹಾಳಿನುಳಿಕೆಗಳ
ಎತ್ತೆಸೆಯಿರತ್ತ, ಒಳಕೊಳಲಿ ಕಡಲ ಜಲ;
ಕಿತ್ತುಹಾಕಿರಿ ಸುತ್ತ ನಡೆತಡೆಯ ಚುಚ್ಚುಮುಳ್ಳ,
ತತ್ತರಿದು ಬೆಂಕಿಯಿಡಿ ನೆಲ–ನುಂಗು–ಕುರುಚುಗಳ;
ಒಡಲಿಟ್ಟಿರಿ ಬಿರುಕು–ಬಿಲ–ಮನೆಯ ಹಾವು ಹಲ್ಲಿಯ ಕುಲ;
ಸೂಡು–ಸೋಬಾನೆ–ಹಾಡಿನ ಗೂಗೆ ಹಾರಿ ತೊಲಗ ಬಿಡಿ,
ಸಾಕಿನ್ನಮಂಗಳ.
ಇಂತು–
ನೆಲ ಶುದ್ಧಿಯಾಗಿ ನಿರ್ಮಲವಾಗಿ ಗಾಳಿ
ಹೊಸತು ಕಂಗೊಳಿಸಲಿ
ನಮ್ಮ ಗುಡಿಯಂಗಳ.

೩

ಉಳಿಸಿಕೊಳ್ಳಿರಿ ಹಳೆಯ ಕಲೆಯ ಶಿಲೆಯ,
ನಮ್ಮ ಹೆಮ್ಮೆಯ ತಲೆಯ,
ಸತತ ಸ್ಫೂರ್ತಿಯ ಸೆಲೆಯ.
ಬೆರೆಯಲವು ಅಲ್ಲಿನಿಲ್ಲಿನ ದಿಕ್ಕುದಿಕ್ಕಿಂದ ಬಂದ,
ಹೊರಗಿಂದ ತಂದ, ಚೆಂದ ಚೆಂದದ ಶಿಲಾಶಿಲ್ಪದೊಡನೆ;
ಜೊತೆಗಿರಲಿ ಉಕ್ಕುಕಬ್ಬಿಣರಚನೆ.
ಚಿತ್ರಮೂಡಿದೆ ನಕಾಸೆಯ ಕಲ್ಪನೆ, ಗುಡಿಯ ಕೆಲಸದ ಯೋಜನೆ;

ಇಟ್ಟರಾಗಲೆ ಹಿರಿಯರದೊ ಮೊದಲ ತಳಪಾಯ,
ಕಟ್ಟುವುದು ತಾಯ್ಗುಡಿಯ ಕಿರಿಯರೆಮ್ಮಯ ಧ್ಯೇಯ.
ಕಟ್ಟಡಕೆ ಬೇಕು ಬೆಟ್ಟದ ರಾಶಿ ಸೀಮೆಂಟು.
ಸೀಮೆಸೀಮೆಗಳಿಂದ ಕಳೆಯ ನಂಟು.

ತಾಯೊಲುಮೆ ಜಲದಲ್ಲಿ ನಾಡೊಲುಮೆ ಬಲದಲ್ಲಿ
ಗಾರೆಗಚ್ಚನು ಕಲಸಿ ಕೊಟ್ಟೋಣ ಗುಡಿಯ;
ಕಾಯಕದ ಕೃಷಿಯಿಂದ ಹೊನ್ನ ಬೆಳೆಯನು ಬೆಳೆದು
ರನ್ನ ಹೂ ಮೆರಸೋಣ ತಾಯ ಮುಡಿಯ.
ಇರಲಿ ತಾಯ್‌ಗುಡಿಗೆ ಸತ್ಯದ ಮಹಾದ್ವಾರ.
ದಿವವ ಮುತ್ತಿಡುವ ಧರ್ಮದ ಗೋಪುರ,
ಮರೆಯದೆಯೆ ಪೌರುಷವ ಮೆರೆವಹಿಂಸೆಯ ಬಲದ
ಕಾಪಿರಲಿ ಸುತ್ತಲೂ ಸೈನ್ಯಪ್ರಾಕಾರ.
ಗೋಪುರದ ಮೇಲಿರಲಿ ಪಂಚಶೀಲದ ಕಲಶ
ನೀಡುತ್ತ ವಿಶ್ವಕಭಯ ಪ್ರಸಾರ.
ಒಳಗೆ ಮೆರೆಯಲಿ ನಮ್ಮ ತಾಯ ಮುದ್ದಿನ ಮೂರ್ತಿ
ಮೆರೆದು ತಾಯ್ತನದ ಒಂದೇ ಅಲಂಕಾರ.

೪

ನೂರಾರು ಕೃತಿಗಳಿಂ ನೆಲನ ನಂದನಗೈದು
ವರ್ಷವರ್ಷವು ಹೊಸತು ಸುಗ್ಗಿಹಾಡನು ಹಾಡಿ
ತಾಯ ಸಮ್ಮುಖದಲ್ಲಿ ಭೇದಗಳನೀಡಾಡಿ
ಹಣ್ಣು ನೂರಾದರೂ ಒಂದೆ ಹಿರಿಗೊನೆಯಾಗಿ
ಕಾಳುಸಾವಿರ ತಳೆದ ಒಂದೆ ಹೊಂದೆನೆಯಾಗಿ
ಕೊಡೊಕ್ಕಲಿನ ನಾಡು ಒಂದೆ ಮಹ ಮನೆಯಾಗಿ
ಎಲ್ಲರೇಳಿಗೆಗಾಗಿ ಎಲ್ಲ ಮೈಮನ ದುಡಿವ
ದುಡಿಮೆ–ಪೂಜದಯ ಮಾಡ ಬನ್ನಿ ತಾಯ್ಗೆ;
ತಣಿದ ತಾಯ್ ಮಕ್ಕಳನು ಹರಸಿ ಕಾಯ್ಗೆ.

ಈ ದುಡಿಮೆ–ಪೂಜೆಯಲಿ ಬೆವರೆ ಅಭಿಷೇಕ ಜಲ,
ಆರ್ತರನು ಸಂತೈಪ ಮರುಕನುಡಿ ಮಂತ್ರ,
ದುರ್ಬಲರ ಆರೈಕೆ ಉಪಚಾರ ಷೋಡಶ,
ಅಜ್ಞಾನತಮ ಕಳೆವ ವಿದ್ಯಾದಾನ ದೀಪ,
ಬೆಳೆದ ಸಿರಿಬೆಳಕು ತಾಯಿಗೆ ಮಹಾನೈವೇದ್ಯ;
ಭಕ್ತರಿಗೆ ಬರಿಗೈಯ ತೋರ್ವ ಪೂಜಾರಿ
ಇರಲವನ ದೂಡಿರಿ, ತೋರಿ ನಿರ್ಗಮದಾರಿ;
ತೀರ್ಥಪ್ರಸಾದ ಸರ್ವರಿಗು ಸಮಪಾಲು,
ತಾಯಿ ಸಹಿಸಳು, ಮಕ್ಕಳಲಿ ಕೀಳುಮೇಲು:
ಇದೆ ನಮ್ಮ ಹೊಸ ಗುಡಿಯ ಪೂಜೆಯೋಜೆ:
ಬರಲೆಲ್ಲ ಕಡೆಯಿಂದ ಜನದ ಯಾತ್ರೆ.
ಐದು ವರ್ಷಕ್ಕೊಮ್ಮೆ ದೊಡ್ಡ ಜಾತ್ರೆ.

ಅಂದು ಬನ್ನಿರಿ ತಪ್ಪದೆಯೆ ತಾಯ ಗುಡಿಗೆ,
ನಮಿಸಿ ತಾಯಡಿಗೆ,
ಘೋಷಿಸಿರಿ, ಜಗ ಮೊಳಗೆ:
"ವಂದೇ ಮಾತರಂ
ವಂದೇ ಮಾತರಂ!"
ಎನ್ನು ತಡಿಗಡಿಗೆ.
ಗುಡಿಯ ಗುಡಿಸುವ ಕೆಲಸ ಇರಲಿ ಕವಿಗೆ.

ಜುಲೈ ೧೯೫೯]

## ಯಾತ್ರೆ

ಕಾವಿಸೆರಗನು ಬೀಸಿ, ತನ್ನ
ಹೊನ್ನ ಕೊಡವನು ಹೊತ್ತು ಸರಸರ
ಸಾಗಿ ಹೋದಳು ಸಂಜೆಕನ್ನೆ;
ಪಯಣಿಗರೆ ತ್ವರೆ ಮಾಡಿರಿ.

ಮುಚ್ಚಿತದೊ ಆಶಾಕವಾಟ,
ಮುಸುಕಿಳಿಯಿತಾಕಾಶ ದೀಪಕೆ,
ಅಲಸಿದರೆ ಅದರಿಂದಪಾಯವು;
ಅಂಧಕಾರವು ಕವಿಯಿತು.

ಬುಸುಗುಟ್ಟುತಿರುವುದು ಈ ಪ್ರವಾಹವು
ಕಾಳಸರ್ಪನ ತೆರದೆ ಕೆರಳಿ;
ದಾಟಲೆಣಿಸಿರೆ ಬುದ್ಧಿ ತಿಳಿಯುತ
ಪಯಣಿಗರೆ ತ್ವರೆಮಾಡಿರಿ.

ಕಾಲವಕ್ತ್ರವ ತೆರೆದು ಕತ್ತಲೆ
ಕವಿಯುತಿದೆ ನುಂಗುವ ತೆರ;
ಬೇಗಮಾಡಿರಿ, ಯಾತ್ರಿಕರೆ, ಈ
ಹೊನಲ ಹಾಯಲು ಬಯಸಿರೆ.

ಮೊರೆಯ ತಬ್ಬಿನೊಳಾಡುತಿರುವುದು–
    ಆಡುಬೊಂಬೆಯ ತೆರದಿ ನಾವೆ;
ಕೇಕೆಹಾಕುತ ತೆರೆಗಳದೊ ಸುಳಿ–
    ಸುತ್ತಿ ಮೇಲಕ್ಕೆಗರಿವೆ.

ನಂಬದಿರೆ ಕಾರಣವದೇನು–
    ಅಂಬಿಗನ ನಚ್ಚಿನ ಕರೆಯನು?
ನಂಬಿ ಕೆಟ್ಟರೆ ಮುನ್ನ ಯಾತ್ರಿಕ–
    ರೀ ಮಹೀಮಂಡಲದೊಳು?

೬–೧–೧೯೫೯] [ತೆಲುಗು ಮೂಲ : ರಾಯಪ್ರೋಲು ಸುಬ್ಬರಾವು.

## ಹೊಳೆವ ಹಕ್ಕಿ

ಯಾವ ದೂರದ ವನವೊ ಯಾವ ದೂರದ ಕಡಲೊ
ಎಲ್ಲಿಂದಲೋ ಬಹುದು ಹಕ್ಕಿ ಮಿನುಗಿ;
ಬಳಿಯಿರುವ ಬಲೆಯ ನೀ ಬೀಸಿ ಹಿಡಿಯದಿರೆ
ಮರೆಯಾಗುವುದು ಬಾನ ಬಯಲಿನಲ್ಲಡಗಿ.

## ಮಳೆಬಿಲ್ಲು

ನನ್ನ ಕಣ್ಣಿಗೆ ಹಬ್ಬ ಬಾಳ ಚೆಲುಮೆಯ ಚೆಲುವು;
ಜೀವನ ಪಾನಭವನ; ಒಲವ ಮದಿರೆಯ ಕುಡಿವೆನಲ್ಲಿ ಮನಸಾರ;
ಜ್ಞಾನ ಮಾರ್ಗದಲಿ, ಧ್ಯಾನಪಥದಲ್ಲಿ, ಯಾತ್ರಿಕನು ನಾನು;
ಶಮೆಶಾಂತಿಗಳ ಸದಾ ಕಾಪಾಡುವವನು.
ನನ್ನ ಸಂಸ್ಕೃತಿಯ ನಯವಿನಯಗಳ ಕುರುಹು, ಎಲ್ಲೋರ;
ನನ್ನ ಪಾವನ ಜೀವನದ ಚೇತನದ ರಕ್ಷೆ, ಅಜಂತ.
ನನ್ನ ಜೀವನದರ್ಶನದ ಫಲಿತ ಸೂಕ್ಷ್ಮ ನಯ ನೀತಿಗಳೆ
ಹಾರಾಡುತಿಹ ಪಾರಿವಾಳಗಳು ನನ್ನ ಬಗೆಬಾನಿನಲಿ.

ಇಲ್ಲಿಯೇ ಗೌತಮನು ಸಾರಿದುದು ಮಾನವಪ್ರೇಮ ಸಂದೇಶವನು;
ಇಲ್ಲಿಯೇ ಕೃಷ್ಣನಾ ಮಧುರ ಮುರಳೀನಾದ ಹೊಮ್ಮಿದ್ದು;
ಇಲ್ಲಿಯೇ ಐಕ್ಯಪ್ರವಚನವನು ನೀಡಿದುದು ನಾನಕ್;
ಇಲ್ಲಿಯೇ ಅಜಮೀರಿ ಖಾಜನಿಂದಾಯ್ತು ನಾಡು ಪವಿತ್ರ;
ನಮ್ಮ ಸಂಸ್ಕೃತಿ ನಮ್ಮ ಐಕ್ಯಸಮತಾ ಭಾವಗಳಿಗೆ ಜೀವಂತ ಸಾಕ್ಷಿ;
ಲಾಲಾಜಿಯವರ ಸಾಧುತ್ವ ಸಜ್ಜನಿಕೆ ಮತ್ತೊಂದು ಸಾಕ್ಷಿಯದಕೆ;
ಅದರ ಹೊಂಬೆಳಗೆ ಷೇಕ್ ನೂರುದೀನರ ಕಣ್ಣ ಹೊಳಪು;
ಇಂದಿಗೂ ನಮ್ಮ ಕವಿಗಳ ಗೀತಕಾಧಾರವೈಕ್ಯಭಾವ.
ನಾವವರ ಸಂತಾನ; ಎಡರುತೊಡರುಗಳೇನೆ ಇರಲಿ,
ನಮ್ಮ ಭವ್ಯಪರಂಪರೆಯ ನಾವು ಕಾಯ್ದುಕೊಳ್ಳುವೆವು: ಇದು ನನ್ನ ವಿಶ್ವಾಸ,

ಬನ್ನಿ ಗೆಳೆಯರೆ, ಬಾಳ ಸುಖದ ಸಂಗೀತಕ್ಕೆ ದನಿಯ ಕೂಡಿಸುವ,
ಪ್ರೇಮ ಜಲಧಿಯನದರ ಗಾಢನಿದ್ರೆಯ ಬಿಡಿಸುತೆಚ್ಚರಿಸುವ.
ವಂಗಕನ್ಯೆಯ ಕುಂತಳದ ಕುಟಿಲಜಾಲವನು ಬಿಡಿಸುತಿರೆ ನಿನ್ನ ಬೆರಳು,
ಕಾಶ್ಮೀರ ಕನ್ನೆಕೆನ್ನೆಯ ಮುಚ್ಚೆಗಳ ಮೇಲಲಂಕರಿಸುವೆನು ಮುತ್ತುಗಳ ನಾನು.
ಸಂಗಾತಿ ಯೌವನವ ನೀನಿಂದು ಎಚ್ಚರಿಸು,
ಪ್ರೇಮಮಧು ಪಾತ್ರೆಯನು ಅದಕೆಂದೆ ತುಂಬಿಡುವೆ ನಾನು.

ಪ್ರೇಮಗೀತಗಳ ಕವಿಗಾಯಕರೆ ನೀವೆಲ್ಲ ನೆರೆದು.
ತುಂಬು ಯೌವನದ ಗೆಲವಿನ ಶಾಂತಿವಧುವ ಸಿಂಗರಿಸಿ.
ಕಾಶ್ಮೀರದಿಂದ ಕೇರಳದ ವರೆಗಿಹ ನಾಡ ಬಾಂದವರೆ,
ಬಂದು ಒಂದಾಗಿ ನೆರೆಯಿರಿ, ಹೃದಯದಾಳವನು ಮಿಡಿವ ಪ್ರೀತಿಯ ಗೀತಗಳ ಹಾಡಿ:
ನಮ್ಮೆಲ್ಲ ಗೀತಗಳ ಶ್ರುತಿಯೊಂದೆ ಲಯವೊಂದೆ,
ನುಡಿಬೇರೆ ದನಿಬೇರೆಯಾದರೇನು, ರಾಗದೊಳಚೇತನದ ಭಾವವೊಂದೆ.
ನನ್ನ ಎದೆಮಿಡಿತಗಳ ಅರ್ಥವನು ಅರುಹೆ ನಾಲಗೆ ತೊಳಲುತಿದೆ ಬಳಲುತಿದೆ:
ಅಹುದು, ಮೌನವೆ ತಕ್ಕ ಭಾಷೆ ಪ್ರೇಮದ ಸಾರ್ಥಸೂಚನೆಗೆ.
ಐಕ್ಯ, ಏಕೋಭಾವ–ಇದೆ ನಮ್ಮ ಜೀವನದ ಪೂರ್ವಿಕರ ಉಳಿಕೆಗಳಿಕೆ;
ಹಲವುನುಡಿತನವೆಂದಿಗೂ ಹರಿಯಲಾರದೀ ಒಂದುತನದ ಬಂಧುತನವ:
ನಾವೆಲ್ಲರೊಂದೇ: ನಮ್ಮೆಲ್ಲರೆದೆಯಾಶೆಯಾಕಾಂಕ್ಷೆಗಳ ಸಲಹು ತಿರುವುದೊಂದುತನ;
ನಮ್ರತೆಯ ಪ್ರೇಮದಲಿ ನಾವಿಟ್ಟ ವಿಶ್ವಾಸ ನಮ್ಮ ಕಣ್ಣಿನ ಬೆಳಕು;
ಧನ್ಯವಾಗಲಿ ಚಿರಂತನವಿಂಥ ಭಾವನೆಗಳ ತಳೆದು ಮಾನವಕುಲ;
ನಮ್ಮ ಪೂಜೆಗಳಲ್ಲಿ ಉರಿದು ಬೆಳಗಲಿ ನಿತ್ಯವೀ ಸ್ನೇಹದೀಪ;
ಈಗಲೂ ಆಗೊಮ್ಮೆ ಈಗೊಮ್ಮೆ ಮೇಘಗರ್ಜನೆಯ ಕೋಲಾಹಲವು ನಭದಲುದ್ಘೋಷಿಸಬಹುದು;
ಅದರದೊ ನೋಡಲ್ಲಿ ಐಕ್ಯತೆಯ ಮಳೆಬಿಲ್ಲು,
ಅದರದೇ ಸೊಬಗುಸೊಂಪೆಲ್ಲೆಲ್ಲು.

೨೨–೧–೧೯೬೮] [ಕಾಶ್ಮೀರಿ ಮೂಲ : ರಷೀದ್ ನಾಸ್‌ಕಿ.

# ಐಕ್ಯದೃಷ್ಟಿ

ಕಣ್ಣ ಮುಚ್ಚು ಎದೆಯ ಬಿಚ್ಚು
ಹರಿಯಲೊಲವ ಹೊಳೆ ಹುಚ್ಚು,
ಅದೆ ಐಕ್ಯದ ಅಚ್ಚು;
ಕಣ್ಣು ಕಾಂಬ ಚೆಲುವು ಹಲವು,
ಎದೆಯ ಚೆಲುವದೊಂದೆ-ಒಲವು,
ನೆಲೆ ನಿಲ್ಲುವ ಗೆಲುವು.

ಕಣ್ಗೆ ಲೋಕ ಚೂರು ಚೂರು;
ಬಣ್ಣವೋ, ನೂರು ನೂರು:
ಎದೆಯೊಳೇಕ-ಬಿಳುಪು;
ನೋಟಕೆ ಜಗ ನೂರು ವಿಧ,
ನಿತ್ಯ ಜರಾಸಂಧ ವಧ-
ಎದೆಗೊಂದೇ ಹೊಳಪು.

ಕಣ್ಣ ಹುಡುಕು ತಡಕು ಹುಳುಕು;
ಅದರ ಊಟ ಮಾಟ ಥಳಕು-
ಒಳಗಾಣದ ಕುರುಡು;
ಒಳ ಚೇತಸೆ ಎದೆಗೆ ಮಾನ್ಯ,
ಚೇತ ಚೇತ ಕೂಡನನ್ಯ-
ಆಗದು ತಾನೆರಡು.

ಅಲೆ ನೀರಲಿ ಕಂಪೆಲರಲಿ
ನಗೆ ತುಟಿಯಲಿ ನೆಲಸಿದ ತೆರ
ಎದೆಯೊಲವಿನ ಮಾಟ;
ಗಾಳಿ ಗಾಳಿ ಬಾನು ಬಾನು
ದೀಪ ದೀಪ ಕೂಡುವ ತೆರ
ಎದೆ ಎದೆಗಳ ಕೂಟ.

ಕಣ್ಣ ಮುಚ್ಚು, ಎದೆಯ ಬಿಚ್ಚು
ಒಳಗೊಲವಿನ ದೀಪ ಹಚ್ಚು
ಬೆಲಕೆಲ್ಲೆಡೆ ಹರಿಯಲಿ;
ಕಣ್ಣು ಕಾಂಬ ಕುಲ–ಕೋಟಿ
ಅಳಿದು, ಎದೆಯ ಐಕ್ಯದೃಷ್ಟಿ
ವಿಶ್ವದಲ್ಲಿ ಮೆರೆಯಲಿ.

೧೯೬೪]

## ಗೋಳು

ಚಿನ್ನದಾಸನ ವಜ್ರ–
ದಂಡಗಳ ಕೂಡಿ
ಮಣ್ಣಾದ ಯೌವನದ
ಅರಮನೆಯ ನೋಡಿ;
ಉರುಳಿಹವು ಶಿಖರಗಳು
ಹಾಳಾಗಿ ಒಡೆದು,
ನುರಿತೆಲ್ಲ ಪುಡಿಪುಡಿಯು
ಅಳಲೊಂದನುಳಿದು.

ನನ್ನ ಹಿಂದಿನ ದಿನದ
ಆಸೆ ಕನಸುಗಳು
ಇನ್ನೆಲ್ಲಿ, ಯಾವೆಡೆಗೆ
ಓಡಿ ಹೋಗಿಹವು?
ಕಟ್ಟಿಸಿದೆ ಶಿಖರಗಳ,
ಎಲ್ಲವೂ ಹಾಳು;
ಇಟ್ಟ ಹೊಂಗಲಶಗಳು,
ಅವು ಎಲ್ಲಿ ಹೇಳು?

ಹೊಂಬಿಸಿಲ ಹಗಲು ಮೇಣ್
    ತಾರೆಯಿರುಳಿಂದ
ತುಂಬಿ ಈ ಇಳೆಯೊಮ್ಮೆ
    ಮೆರೆಯಿತಂದು:
ಹರುಷದಲಿ ಹಿಗ್ಗುತ್ತ
    ಬೆಟ್ಟ ನದಿಯೊತ್ತಿನಲಿ
ಪೊರೆವವನ ಹೊಗಳಿದೆನು
    ಉಗುವ ಹರುಷದಲಿ.

ಯೌವನದ ಕನಸುಗಳು
    ಒಂದಾಗುತೊಂದು
ರವಿಯೆದುರ ಮುಗಿಲುಗಳ
    ತೆರದಿ ತಾವ್ ಬಂದು
ಮೆರೆಯುತಿರೆ ಉಷೆಯಲ್ಲಿ
    ಅವು ಎನಿತು ಕೆಂಪು!
ಹರಿಯಲಾ ಬೆಳಕಂದು
    ಎಲ್ಲಿ ಆ ಸೊಂಪು?

ಚಳಿಗಾಲದಿರುಳಿನಲಿ
    ಮಿನುಗುಹುಳುವೆಲ್ಲ
ಸುಳಿಸುಳಿದು ಅಳಿವಂತೆ
    ಇಳೆಯ ಬಾಳೆಲ್ಲ;
ಬಳುಬಳುಕಿ ಹೊಳೆದಳಿವ
    ಬಳ್ಳಿವೆಳಗಂತೆ
ಬೆಳೆದಳಿವ ಯೌವನದ
    ಕನಸುಗಳ ಕಂತೆ!

ದೇಶಗಳು, ಕೋಶಗಳು,
    ಸಿರಿಯ ಬರಿ ಹೆಮ್ಮೆ-

ನಾಶವಾಗಲೆ ಬೇಕು
ಇಳೆಯಲೊಮ್ಮೆ;
ಬಲವಂತ, ಧನವಂತ
ತರುಣಿಯರ ನೋಟ,
ಬೆಳುದಿಂಗಳೊಳು ಅವರ
ಕೂಡಿ ಸೊಗವೇಟ–

ಎಲ್ಲ ಮರೆಯಾಗಿಹುವು,
ಏನು ಉಳಿದಿಹುವು?
ಜೀವನದ ಹೊಸ ಅರಲು
ಉದುರಿ ಮಣ್‌ಗೂಡಿಹುದು;
ಅದರ ಎಳ ಬಿಸಿಲು ಮಳೆ
ಜೊಂಡಿಗಾಸರೆಯು–
ಬಿದಿರು ಗಾಳಿಯಲಳುವ
ತೆರದಿ ಕರೆಕರೆಯು.

ಮೇ ೧೯೩೦]
(ಭಾವಾನುವಾದ; ಮೂಲ : Denis Mecarthy ಅವರ Lament ಎಂಬ ಆಂಗ್ಲ ಕವನ)

## ಅಣುಶಕ್ತಿ

ಅಂದು– ಋಷಿಗಳ್ ಯೋಗಿಗಳ್ ಪರಮದಾರ್ಶನಿಕರ್
ಭಕ್ತರ್ ವಿರಕ್ತರ್ ಕವೀಂದ್ರರ್
ದಿವ್ಯ ಚಕ್ಷುವಿನಿಂ
ಅಣುವನೊಡೆದರ್
ಜಗದ
ಗುಟ್ಟನೊಡೆದರ್:
ಒಡೆದು
ಕಂಡರದ್ಭುತಮಂ,
ಪೂರ್ಣದರ್ಶನಮಂ:

ವ್ಯೋಮಭೂಮಿಗಳೊಳ್
ರವಿಯಾಗಿ ಶಶಿಯಾಗಿ ತಾರಾನಿಕರಮಾಗಿ
ಸಿಡಿಲಾಗಿ ಮಿಂಚಾಗಿ ವೃಷ್ಟಿಯೆನಿಸಿ
ಕಡಲಾಗಿ ಭೂಮಿಯಡೊಲಾಗಿ
ತಾನ್ ಸರ್ವ ಸೃಷ್ಟಿಯೆನಿಸಿ
ಮೆರೆವ
ಪರಮ ತೇಜಸ್ವಿಯನ್
ಅಣುವಿಗಣುವಾದನನ್
ಮಹತೋಮಹೀಯನನ್
ಸರ್ವಶಕ್ತನನ್
ಸರ್ವಕಾರಣನನ್
ಪರಮಾತ್ಮನನ್
ಲೋಕತಾರಕನನ್,

ಇಂದು– ಹಿರಿ ವಿಜ್ಞಾನಿಗಳ್ ಪರಮಶಕ್ತರ್
ಪತ್ಯಕ್ಷತಾಪ್ರಮಾಣದ ವೀರ ಭಕ್ತರ್
ಯಂತ್ರಚಕ್ಷುವಿನಿಂ
ಅಣುವನೊಡೆದರ್
ಜಗದ
ಕಟ್ಟನೊಡೆದರ್:
ಒಡೆದು
ಕಂಡರದ್ಭುತಮಂ,
ಖಂಡದರ್ಶನಮಂ:
ವ್ಯೋಮ ಜಲ ಭುವಿಗಳೊಳ್
ರವಿಶಶಿಗಳಂ ನೊಣೆವ ರಾಹುಸಮನಾಗಿ
ತಾರೆಗಳ ಮುಕ್ಕುಳಿಪ ತಮದ ರಕ್ಕಸನೆನಿಸಿ
ಸಿಡಿಲಾಗಿ ಸಿಡಿದು ಸೀಳ್‌ಮಿಂಚಾಗಿ ಇಳಿದು
ಸುರಿದಗ್ನಿವೃಷ್ಟಿಯಾಗಿ
ಕಡಲನೇ ಕುಡಿದು ನೆಲಮೆಲ್ಲಮನ್ ಒಡೆದು

ಸೃಷ್ಟಿಸರ್ವಸ್ವಮಂ ಬಿಡದೆ ತೊಡೆದು
ಅತಿ ರೌದ್ರದೆಸಕದಿಂ
ಉರಿದು ಮಾಮಸಕದಿಂ
ಪ್ರಲಯರುದ್ರಂ ತಾನೆ ಎನಿಸಿ
ಮೆರೆವ
ಪರಮಪ್ರಕಾಶಮಂ
ಅಣುವಿನೊಳಶಕ್ತಿಯಂ
ಲೋಕಮಾರಕಮಂ.
ಅದು ಶಾಂತಿದರ್ಶನಂ,
ಲೋಕತಾರಕಶಾಂತಿ;
ಇದು ಕ್ರಾಂತಿದರ್ಶನಂ,
ಲೋಕಮಾರಕ ಕ್ರಾಂತಿ.
ವಿಜ್ಞಾನಿಗಳ್ ಧರ್ಮಜ್ಞಾನಿಗಳ ತಾವಾಗಿ
ವಿಜ್ಞಾನದ ಸಿಡಿಲ್ ಬಾನವರ ಹೂವಾಗಿ
ಮಾನವರಿಗೊಸಗೆಯಾಗೆ
ಶುಭವರಳೆ ಕ್ರಾಂತಿಯೊಳಗೆ
ಕ್ರಾಂತಿ 'ಸಂಕ್ರಾಂತಿ'ಯಾಗೆ
ನಿಶ್ಚಯಂ ಶಾಂತಿ ಇಳೆಗೆ.

## "ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ"

೧

God said :
"Let there be light",
And there was light.
ದೇವ ಕಣ್‌ತೆರೆಯೆ, ಬೆಳಕಾಗಿ, ಹೊರಹರಿದು ಕಿಡಿಹುಡಿಯ ಹೂವರಳಿತ್ತು
ಎಣಿಕೆಸೋಲುವ ಗುಂಪುಗುಂಪು–ಗೊಂಚಲು–ಬೆಳಕು:
ಬಾನಿನಂಗಳದ ಇಂಗಳದ ಮಳೆ ತಂಪಾಗಿ,

ಬೆಳುದಿಂಗಳಿನ ಬಳ್ಳಿಯರಳ ಸೊಂಪಾಗಿ;–
ಆ!
ಹಿರಿಬೆಳಕ ಬರಿಬೆಳಕ ಆಳಕಾಣದ ಬಾಳ ಸೆಲೆಯಿಂದ
ಚಿಲುಮೆಚಿಮ್ಮಿದ ಮೊದಲ ಚೆಲುವು ತುಂತುರು–ಬೆಳಕು:
ಕೋಟಿ ಸೂರ್ಯರ ಬೀಡು, ನಕ್ಷತ್ರಲೋಕ, ಆ ಬೆಳಕ ನಾಕ.
ಯಾರೆ ಹೊತ್ತಿಸದ, ಆರದ, ಕಾಣಬಾರದ, ಸ್ನೇಹಕೋರದ,
ಆ ಪರಂಜ್ಯೋತಿ ಬೆಳಕೂಡಿ ಮೂಡಿ ಬೆಳಗಿದ ಸಾಲು ಸಾಲು ದೀಪ:
ಆ ಸ್ವಯಂಪ್ರಕಾಶನ, ಆದಿಪುರುಷನ, ಬೆಳಕು–ಮೈ ಸಿಡಿಯೆ ಮೂಡಿದಳು,
ಆ ದೀಪಗಳ ಬೆಳಕುಬೊಂಬೆ ಮೂಡಿದಳು, ಮೂಡಿ ಆಡಿದಳು,
ಆ ಚಿದಂಬರಪುರುಷ ತನುಜಾತೆ, ಅವನ ಜೊತೆ, ನಮ್ಮ ಆದಿಮಾತೆ;
ಅವನ ಮೂಲಕೃತಿ, ಪುತ್ರಿ–ಪತ್ನಿ–ಪ್ರಕೃತಿ.
ನಾಮರೂಪದ ಧರಿಸಿ ಅವತರಿಸಿ ಮೆರೆದ
ಪರಮ ಪುರುಷನ ಮನದ ಹೊಮ್ಮುಗುಳು, ಮೈಬೆಳಕಿನರಳು,
ಅವನ ಸೃಷ್ಟಿಯ ಕಲೆಯ ಕಡೆದ ಬೆರಳು.

೨

ಓ ತಾಯೆ, ಓ ಮಾಯೆ,
ಪರಮ ಪುರುಷನ ಜಾಯೆ,
ಓ ಪ್ರಕೃತಿ, ಓ ವಿಕೃತಿ, ಅರಿತವರ ಸುಕೃತಿ,
ಓ ಪರಾತ್ಪರೆ, ರುಚಿರೆ, ಸೌಂದರ್ಯಸಾರೆ,
ನುಡಿಗೆ ನಿಲುಕದ ನಿಸರ್ಗ ನೀರೆ,
ಓ ವಿಶ್ವರೂಪಿಣಿ, ಓ ವಿಶ್ವಧಾರಿಣಿ!
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ:
ಹನಿ ಕಡಲ ಕಾಣಹೊರಟಂತೆ
ಕಿಡಿ ಅಗ್ನಿಯನು ಅಪ್ಪಬಯಸಿದಂತೆ,
ನಿನ್ನ ಕಾಣಲು ಬಂದೆ
ನಿನ್ನ ಸೇರಲು ಬಂದೆ;
ತೋರು ಮೊಗವ,
ಹರಸು ಮಗುವ

೩

ನಿನ್ನ ರೂಪರಹಸ್ಯ ನಿನ್ನ ದ್ವೈವಿಧದಾಸ್ಯ:
ಏನಿದಕೆ ಭಾಷ್ಯ?
ಹೊಳೆದಳಿವೆ, ಅಳಿದಳಿವೆ, ಮೂಡಿಸುವೆ, ಮುಳುಗಿಸುವೆ:
ಏನು ಈ ಗೈಮೆಯ ಭವಿಷ್ಯ?

ನೀನೊ, ಬೆಳಕಿನ ಅರಳು; ಅಹಹ, ಕೆಳಗೇ ನೆರಳು!
ಏನಿದಕೆ ಹುರುಳು?
ಮೆಲ್ಲಿತ್ತು ಹೂ, ಹಿಡಿಯೆ; ವಜ್ರವೋವೋ, ಹೊಡೆಯೆ!
ಸುಧೆಯೊಡನೆ ನಂಜು, ಕಡೆಯೆ.

ಅತ್ತ ಜ್ವಾಲಾಮುಖಿ, ನರ್ತಿಪಗ್ನಿಶಿಖಿ:
ಚಂಡಿ, ಚಾಮುಂಡಿ, ಕಾಳಿ;
ಇತ್ತ ಸುಮಸೌಮ್ಯಮುಖಿ, ರಮಣೀಯ ಲಾಸ್ಯಶಿಖಿ:
ಲಲಿತೆ, ಲಾವಣ್ಯಲಕ್ಷ್ಮೀ.

ನೋಟಕ್ಕೆ ನೀ ಚೆಲುವೆ, ಆಟಕ್ಕೆ ಜೊತೆನಿಲುವೆ.
ಬೇಟಕ್ಕೆ ಬಯಸೆ ಬರುವೆ;
ಪಾಟಕ್ಕೆ ನೀನೊಲಿವೆ, ಮಾಟಕ್ಕೆ ನೀ ಸಲುವೆ–
ಆದರೂ ಮುನಿದು ಇರಿವೆ!

ಹೊರಗಣ್ಣ ಮೃಣ್ಮಯೀ; ಒಳಗಣ್ಣ ಚಿನ್ಮಯೀ;
ಲೋಕಲೋಕಗಳ ತಾಯಿ;
ಸರ್ವಕೂ ನೀನಾದಿ; ಸರ್ವಕಂತೆ ಸಮಾಧಿ;
ನಿನಗೆ ನೀನೇ ವಿರೋಧಿ!

ವನದ ಕೋಕಿಲಕಂಠೆ, ಘನದ ರೌದ್ರ ನಿನಾದೆ;
ನಿನ್ನ ಇಬ್ಬಗೆ ದನಿಯ ಮರ್ಮವೇನು?

ಇರುಳ ಸಾವಿರಗಣ್ಣ ಸನ್ನೆನುಡಿಗಳವೇನು?
ಹಗಲಿನುರಿಗಣ್ಣಿನಾಕ್ರೋಶವೇಕೆ?

೪

ಮೂಡ ಬಾಗಿಲ ಹೊಸಿಲ ಹತ್ತಿ ಹೂನಗೆ ಚೆಲ್ಲಿ
ಋಷಿಯ ಹೃದಯವ ಕದ್ದ ಕನ್ನೆರನ್ನೆ;
ಮೋಡ ಮಾಡವನಿಳಿದು ಚೆಂಗಾವಿಯನ್ನುಟ್ಟು
ಕವಿಜನಮನವ ಗೆದ್ದ ಚೆಲುವೆ ಚಿನ್ನೆ.

ಸುಗ್ಗಿಯಲಿ ಹೂಮುಡಿದು ಹಿಗ್ಗಿ ಕುಣಿಯುವ ಹುಡುಗಿ,
ಮಳೆಮಿಂದು ಹಸುರುಟ್ಟ ಹಬ್ಬ ಮುತ್ತೈದೆ;
ಮಾಗಿಯಲಿ ತ್ಯಾಗಿ, ತಪನಿಂತಿಹ ವಿರಾಗಿಣಿ:
ಏನು ನಿನ್ನೀ ನಾಟಕದ ನೀತಿಬೋಧೆ

ಸೂತ್ರಧಾರನದಾರೊ ನಿನ್ನ ಕುಣಿಸುತ್ತಿನು
ದಣಿಯದಲೆ ತಕ್ಕಥೈ ಕುಣಿವೆ ನಿತ್ಯ;
ಕುಣಿಕುಣಿಯ ಮೈ ಮರೆತು ತೊತ್ತೊಳತುಳಿದು ಕುಣಿವೆ.
ಲೋಕ ಲೋಕಂಗಳನೆ–ಎಂಥ ನೃತ್ಯ!

ನಿನ್ನ ಮೋಹಕ ನೃತ್ಯಲಯದ ಬಲೆ–ಸೆರೆಯಾಗಿ
ವಿಶ್ವದಣುಕಣವೆಲ್ಲ ಹುಚ್ಚುಕುಣಿಯುವುವು;
ನಿನ್ನ ಕುಣಿತದ ಕಲೆಯ ಜೇಡಬಲೆಗೆರೆಯಾಗಿ
ಬಳಿಸಾರಿ ತಾವಾಗಿ ಮಡಿಯ ಮಣಿಯುವುವು.

ಸಪ್ತ ಸ್ವರಗಳ ಮೇಳ, ಸಪ್ತ ವರ್ಣದ ಜಾಲ,
ರೂಪರಸಗಂಧಗಳ ಜೇನುಗೂಡು;
ರೂಪ ರೂಪಾಂತರಕೆ ಚೈತನ್ಯಕಾರಿಕೆ:
ಕಡೆಗೆ ಸರ್ವವ ಬಳಿಗೆ ಸೆಳೆವ ಸೂಡು.

ಬಿಡಿನಿಂತು ನೀ ಬಿಂದು, ಒಡಗೂಡಿ ನೀ ಸಿಂಧು,
ಎಲ್ಲವೆಲ್ಲವು ನೀನೆ–ಒಂದೆ ಒಂದು;
ಇದ್ದೆ ನೀನಂದು, ಇಹೆ ಇಂದು ಮುಂದೆಂದೆಂದು–
ಮರಳಿ ಜನಿಸುವೆ ನೀನು ನಿನ್ನ ನೀ ತಿಂದು.

೫

ಓ ಪ್ರಕೃತಿ ಪಾರ್ವತಿ!
ರಾಮಣೀಯಕ ರೂಪದೀಪ ಲಕ್ಷ್ಮಿ,
ನಾದರೂಪಿಣಿ ವಾಣಿ,
ನಿನಗೆ ನಮನ, ನಿನಗೆ ನಮನ!
ಕೊಳ್ ಎನ್ನ ತನುಮನ,
ನಿನಗರ್ಪಣ.

ಡಿಸೆಂಬರ್ ೧೯೫೧]

(ಆಕಾಶವಾಣಿಯ ದೆಹಲಿಯ ಕೇಂದ್ರ ೨೫–೧–೧೯೬೦ರಂದು ಏರ್ಪಡಿಸಿದ್ದ ರಾಷ್ಟ್ರೀಯ ಕವಿ ಸಮ್ಮೇಳನದಲ್ಲಿ ಓದಿ, ಬಿತ್ತರಿಸಿದ ಕವನ)

## ನಿನ್ನ ಮಾಯೆ

ಬಲು ಸೊಗಸು ಬಲು ಸೊಗಸು ನಿನ್ನ ಮಾಯೆ
ಇಳೆಯೆಲ್ಲ ತುಂಬಿರುವ ನಿನ್ನ ಛಾಯೆ. ॥ಪ॥

ಸಾಕು ನನಗೀ ನೆರಳು ಹಿಡಿಯೆ ನಿನ್ನಯ ಹುರುಳು,
ಅದರ ತಂಪಿಂಪಿನಲಿ ಸುಖಿಸುತಿರುವೆ;
ಸಾಕಾರ ಲೋಕ ಲೋಚನ ಭಾಗ್ಯ ನೀನಿರೆ ನೀ–
ರಾಕಾರ ನಿರ್ವಯಲ ನೋಡಲಾತುರವೆ?

ಜನುಮ ಜನುಮಗಳಲ್ಲಿ ಕೊಂಡುಂಡು ಮುಗಿಯದಿಹ
ನಿನ್ನ ಚೆಲುವಿನ ನೋಟ ಊಟಪಾಟಗಳು
ಜೆನುಗುಜೇನಿನ ಹನಿಗಳಾಗಿ ತೊಟ್ಟಿಕ್ಕುತಿರೆ
ಬರಲುಂಟೆ ನಿನ್ನೆಡೆಗೆ ಎಡೆ ಮುಗಿವ ಮೊದಲು?

ನೀನೆ ಕರೆವೆಯೊ ಇಲ್ಲ ನಾನೆ ಬರಲೆಳಸುವೆನೊ
ಸಾಗಲಲ್ಲಿಯವರೆಗೆ ಪಯಣದಾಟ;
ನೀನೆ ಬಾಳ್ಕೊಟ್ಟಿರುವೆ ನೀನೆ ಬೀಳ್ಕೊಟ್ಟಿರುವೆ
ಕಟ್ಟಿ ಕೊಟ್ಟಿರುವೆ ಸವಿ ಬುತ್ತಿಯೂಟ.

ಮೇ ೧೯೬೧]

## ಮುಕ್ತಿಶ್ರೀ ಪದತಲ

ಕೆಂದಾವರೆಗಳ ಸಂದಣಿ–
ಯಿಂದ ಚೆಂದವಾಗಿರುವ
ಮಂದಾನಿಲ ಚುಂಬಿಸೆ ನಸು
ನಗೆಯಿಂದಲಿ ಮೆರೆವ
ನಲ್‌ಗೆರೆಗಳ ನಗೆಯ ಬೀಡು
ಶ್ರವಣಬೆಳುಗೊಳ.
ಮುಂಜಾನೆಯೆ ಎದ್ದೇರಲು
ಅರುಣೋದಯದಂದ
ಸಂಜೆಯವರೆಗಲ್ಲಿರಲು
ಸಂಧ್ಯಾರಾಗದ ಚೆಂದ
ಇರುಳಾಗಲು ಮಿನುಗಿ ನಗುವ
ತಾರಕೆಗಳ ವೃಂದ–
ಚೆಲುವಿನ ಈ ಚಾರುಹಾಸ
ಹೂವರಳುವುದೆಲ್ಲಿ?
ಮನುಮದನನ ಮೋಹದ ನೆಲೆ
ಶ್ರವಣಬೆಳುಗೊಳದಲಿ!

ಈ ಚೆಲುವಿನ ಹೂಬಳ್ಳಿಯ
ಹಬ್ಬಿಸಿ ಕುಡಿನಗೆಯಲ್ಲಿ
ಒಲುಮೆಯ ಗೆಲುವನು ಬೀರುತ
ನೋಟದ ಒಳಬಗೆಯಲ್ಲಿ
ತಪದುನ್ನತಿಯನು ತೋರುತ
ನಿಂತಿಹ ನಿಡುನಿಲುವಿನಲಿ;
ಜಗವ ಗೆಲುವ ಮುಗುಳುನಗೆಯ
ಶಾಂತಿಮಂತ್ರವುಸುರುವ
ಗೊಮ್ಮಟ ಮುನಿ ಚೆಲುವಿನ ಖನಿ
ನಿರಾಲಂಬ ನಿಂತಿರುವ
ಶ್ರವಣ ಬೆಳುಗೊಳ
ಮುಕ್ತಿಶ್ರೀ ಪದತಲ!

(ರಚನೆ: ಶ್ರವಣಬೆಳ್ಗೊಳವನ್ನು ಮೊದಲು ಸಂದರ್ಶಿಸಿದಾಗ: ಸು. ೧೯೩೦; ಈಗ (ಮೇ ೧೯೬೭) ಅಲ್ಲಲ್ಲಿ ತಿದ್ದುಪಾಟಾಗಿದೆ.)

## ಆ ದಾರಿ–ಈ ದಾರಿ

ಇರಲಿ ಅವರಿಗೆ ಅವರ ದಾರಿ,
ನಮ್ಮ ದಾರಿ ನಮಗೆ;
ಅವರ ದಾರಿಯೆ ಬೇರೆ, ಅವರ ಗುರಿಯೆ ಬೇರೆ;
ನಮ್ಮ ದಾರಿಯೆ ಬೇರೆ, ನಮ್ಮ ಗುರಿಯೆ ಬೇರೆ;
ಇರಲಿ ಅವರಿಗೆ ಅವರ ದಾರಿ.
ಇದು ಪೂರ್ವ, ಅದು ಪಶ್ಚಿಮ:
ಕರಗೀತೆ ಅಂತರ, ಕೂಡೀತೆ ತರತಮ?
ಅರಿಯಬಲ್ಲವನೊಬ್ಬನಾ ಪರಮಾತ್ಮ.

ಅವರದ್ದು–ಮಣ್ಣಿನ ದಾರಿ, ನಮ್ಮದು–ಕಣ್ಣಿನ ದಾರಿ;
ಅವರದ್ದು–ಹೊರಳುವ ಮರಳುವ ದಾರಿ;

ನಮ್ಮದು–ತೆರಳುವ, ಮರಳುವ ಯೋಚನೆ ಇಲ್ಲದ ದಾರಿ.
ಅವರದ್ದು–
ಮಣ್ಣಿನ ವಾಸನೆ ಅಂಟುವ ದಾರಿ, ಕುಂಟುವ ದಾರಿ;
ಹೆಣ್ಣಿನ ನೋಟದ ಹೊನ್ನಿನ ಮಾಟದ
ಮೋಹದ ದಾರಿ, ದಾಹದ ದಾರಿ;
ಕಳ್ಳು ಕುಡಿಸಿ ಮಳ್ಳು ಮಾಡುವ ದಾರಿ,
ಸುಳ್ಳು ಸವಿಯ ದಾರಿ, ಟೊಳ್ಳು ಕುಸಿವ ದಾರಿ,
ಕಳ್ಳಕಾಕರ ದಾರಿ, ಪೊಳ್ಳು ಮಾತಿನ ದಾರಿ.
ನಮ್ಮದು–ಇಲ್ಲೀದ ನೆಮ್ಮದೆ ಅಲ್ಲಿಗೆ
ಹೊರಟವರೆಲ್ಲಾ ಸಮೆಸಿದ ನೆಮ್ಮುವ ನೆಮ್ಮದಿ ದಾರಿ.

ನಮ್ಮದು–
ಭಯವ ಕಾಣದ ದಾರಿ:
'ಅಭಯ ಹಸ್ತ'ವ ನಂಬಿ ಉಭಯಕೆ ಸಲ್ಲುವ,
ತಂಪಾದ ನೆರಳಿನ ಸೊಂಪಾದ ಮರಗಳ
ಗುಂಪಿನ ನಡುವಿನ ಕಾಲುದಾರಿ;
ಬುತ್ತಿಯೂಟವನುಂಡು
ಹೊತ್ತು ಮುಳುಗುವ ಮುನ್ನ
ಸಮೆಯದ ಪಯಣವ
ಸಮಯಕ್ಕೆ ಸರಿಯಾಗಿ
ಮುಗಿಸಿಕೊಡುವ ದಾರಿ,
ಗೊತ್ತುಗುರಿಯ ದಾರಿ.

ಅವರದ್ದು–
ಹೊರಗಿನ ಹೆದ್ದಾರಿ, ಬೆರಗಿನ ಹೊಸ ದಾರಿ:
ಬಣ್ಣ ಬಣ್ಣದ ಬಲ್ಬು ರಂಗುಚೆಲ್ಲುವ ದಾರಿ;
ಕೈಗೊಂದು ಕಾಲ್ಗೊಂದು ಯಂತ್ರವ ಜೋಡಿಸಿ
ಮಾಯಾಬಜಾರಿಗೆ ಕರೆದೊಯ್ವ ಸಿರಿದಾರಿ;
ಇಂದ್ರಕುಬೇರರೆ ಹ್ಯಾಟುಬೂಟನು ಧರಿಸಿ

ಸ್ವಾಗತ ನೀಡುವ ಸ್ವರ್ಗದ ದಾರಿ;
ಲೋಕವ ಬೇಸರ, ಹೊಸ ಹೊಸ ನಾಕಕೆ ನೂಕಲು,
ಲೋಕಾಂತರಗಳಿಗೆ ಒಯ್ಯುವ ದಾರಿ.
ಹೊರಗಿನ ಹೊರಗಿನ ಹೊರಗಿನಾಚೆಯಾಚೆ
ಸೆಳೆಯುತ ಗಂಧರ್ವರೆಕ್ಕೆ ಕಟ್ಟುವ ದಾರಿ-
ರಕ್ಕೆ ಗಪ್ಪಿದ ದಾರಿ.

ನಮ್ಮದು-
ಇದು, ಒಳಗೆ ಒಳಗೊಳಗೆ ಒಳಗಿಂದ ಒಳಗೆ,
ಕೊರೆದು ಕೊರೆದು ಕೊರೆದು
ತೆರೆದು ತೆರೆದು ತೆರೆದು
ಇಂದ್ರಕುಬೇರರ ಮರೆದು
ಗರುಡನ ಗೂಡಿಗೆ ಒಯ್ಯುವ ದಾರಿ,
ನಾದ ಸ್ವರಾರೋಹಗಮನದ ದಾರಿ,
ಇದು ಹಾವಿನಾ ದಾರಿ, ಹಾವೇ ಆಗುವ ದಾರಿ:
ಹಾವು-ಹಗ್ಗದ ದಾರಿ,
ಶೂನ್ಯ-ಸಗ್ಗದ ದಾರಿ,
ಗುಹೆಯಾಚೆ ವೀಚಿ
ಚಾಚಿ ಅತ್ತಿತ್ತ
ಬಾಚಿ ಬೀಸಾಡದಂತೆ
ಕಾಯುವ ನಾವೆ ಇರುವ ದಾರಿ:
ನಾವೆ ನಾವಾಗುವ ದಾರಿ;
ಸೋಹಂ ಸರೋವರದಲ್ಲಿ ತೇಲಾಡುವ
ಹಂಸನಾವೆ ಇರುವ
ಚಿತ್‌ಕಡಲ ಕಡೆದಾರಿ:
ನಾವೆ ನಾವಾಗುವ ದಾರಿ:
ಅವರದ್ದು ಕಂಸಪಥ;
ನಮ್ಮದು ಹಂಸಪಥ.

೨೪-೯-೧೯೭೦]

## ಶ್ರೀನಿವಾಸನ ಪಾದ

ಕಾಪಾಡುವುದು ಪಾದ
ಆಪದ್ಬಾಂಧವ ಶ್ರೀ ಶ್ರೀನಿವಾಸನ ಪಾದ ॥ಪ॥

ಬಲಿಯ ಮೆಟ್ಟಿದ ಪಾದ ಶಿಲೆಗುಸಿರಿತ್ತಿಹ ಪಾದ
ಇಳೆ ತಳಕ್ಕಿಳಿದರೂ ನೆಲೆನಿಲ್ಲುವ ಪಾದ
ತಲೆಯ ತೆಗೆದಿತ್ತರೆ ತಲೆಗಾವ ತಿರುಪಾದ
ಲಲನೆ ಲಕುಮಿಯೊತ್ತುವ ಲಲಿತಪಾದ

ಗೆಜ್ಜೆಯ ಕಟ್ಟಿ ಭಸ್ಮನ ಸುಟ್ಟ ಚೆಲುಪಾದ
ಸಜ್ಜನ ಸೇವೆಗೆ ಸುಳಿಯುವ ಸಿರಿಪಾದ
ರಜ್ಜುಬಂಧಕೆ ಸಿಲುಕಿ ರಂಜಿಪ ಕಿರುಪಾದ
ಪಜ್ಜಳಿಪ ಪೊಂದಾವರೆಯ ಪೋಲುವ ಪಾದ
ಭಾಗವತ ಜನರ ಭಾಗ್ಯದ ಶ್ರೀಪಾದ
ಭೋಗಿ ಭೋಗ ರತ್ನ ರುಚಿ ರಮ್ಯಪಾದ
ಕೂಗಿ ಕರೆದರ ಮನಕೆ ಬೇಗ ಬರುವ ಪಾದ
ರಾಘವನೊಲಿದು ಬಿಡದೆ ಪಿಡಿದಿಹ ಪಾದ

೫-೮-೧೯೫೧]

## ಬೇಡಿಕೆ

ಒಂದು ವರವ ನಿನ್ನೊಳಿಂದು
ದೇವ, ಬೇಡುವೆ:
ಬೇಡಿ ಬೇಡಿ ಮೊರೆಯನಿಡುವೆ
ಕೊನೆಗೆ ಕಾಡುವೆ.

ಹೊನ್ನರಾಶಿ ಸುರಿಯಲೆಂಬ
ಕೀಳು ಬಯಕೆಯಲ್ಲ;

ಆಯುರಾರೋಹಗ್ಯ ಹೆಚ್ಚ-
    ಲೆಂಬ ಆಸೆಯಲ್ಲ;
ಜಸದ ಬಯಕೆ ಬೇಡವೆನಗೆ,
    ಜಸವು ಗರ್ವದಾಗರ;
ಮೋಕ್ಷವಲ್ಲ, ಮೋಕ್ಷವಲ್ಲ
    ಮೋಕ್ಷಶೂನ್ಯಸಾಗರ!

ಒಂದೆ ವರವ ನಿನ್ನೊಳಿಂದು
    ದೇವ ಬೇಡುವೆ;
ನನ್ನನೊಂದು ಹಕ್ಕಿ ಮಾಡು
    ಹಾಡಿ ಹಾಡಿ ಹಾಡುವೆ:
ನೀಲಗಗನದಾಳದಲ್ಲಿ
    ಮುಳುಗಿ ಏಳುವೆ;
ಸಾಲುಮುಗಿಲ ತೆರೆಯ ಮೇಲೆ
    ಹಾರಿ ತೇಲುವೆ!
ಗಗನ ಸಾಮ್ರಾಜ್ಯವನ್ನು
    ಅಂದು ಆಳುವೆ.

ಒಮ್ಮೆಯೇ ಇಳಿವೆನಿಳೆಗೆ
    ಆಟವಾಡಲು
ಕುಣಿಯುವಾಟವಾಡಲು;
ಹಸುರು ಗರಿಕೆ ಹಾಸ ಮೇಲೆ
    ಅಲ್ಲಿ ಇಲ್ಲಿ ನೆಗೆವೆನು;
ಬೇಸರಾಗಲೊಡನೆ ಮತ್ತೆ
    ನಭಕೆ ಚಿಮ್ಮುತೊಗೆವೆನು;
ಮುಗಿಲ ತಂಡದೊಡನೆ ಕೂಡಿ
    ಹಿಡಿಯುವಾಟವಾಡುತ,
ಗಾಳಿಯೊಡನೆ ಸಮತೆ ಹೂಡಿ
    ಓಟವನ್ನೋಡುತ,

ಗಿಡದ ಸೆಳೆಯನೇರುತಲ್ಲಿ
    ಉಯ್ಯಲಾಟವಾಡುತ.
ಆಡುತಾಡುತೆಲ್ಲೆಲ್ಲೂ
    ಹಾಡುತಿರುವೆನು–ಬಿಡದೆ
    ಹಾಡುತಿರುವೆನು.
ನನ್ನ ಹಾಡಿನಲ್ಲಿ ಮತ್ತೆ
    ವರವ ಬೇಡೆನು;
ಅವರು ಇವರು ಮೆಚ್ಚಲೆಂದು
    ಹಾಡ ಹಾಡೆನು;
ನನ್ನ ಹಾಡಿನಲ್ಲಿ ಅಂದು
    ಗೋಳುಕರೆಯೆನು;
ಆದರೆಂದು, ಎಂದೆಂದು
    ನಿನ್ನ ಮರೆಯೆನು.
ಎಲ್ಲಿ ಕುಳಿತರಲ್ಲಿ ನಾನು
    ಹಾಡುತಿರುವೆನು;
ಹಾಡಿಗಾಗಿ ಹಾಡನೊಂದ
    ಹಾಡುತಿರುವೆನು.
ಹಕ್ಕಿಯಾಗಿ ಹಾಡಿ ನಿನ್ನ
    ವೀಣೆಯಾಗುವೆ;
ಹಾಡಿ ಮಡಿದು, ಕೊನೆಗೆ ನಿನ್ನ
    ವಾಣಿಯಾಗುವೆ.

೧೯೪೩]

## ಹಾರೈಕೆ

ಎಂದಿಗಹುದೊ ನಿನ್ನ ಪ್ರೇಮ
ನಂದನಂದನ ದಯಾಧಾಮ ॥ಪ॥

ಜೀವನ ಜಮುನೆಯಲಿಂದು
ಕಾಳಿಯನ ಕಾಟ
ಜೀವಹೀರುತಿದೆ ಪಶುಗಳ–
ಜನರಿಗೆ ವಿಷದೂಟ.

ಮಾಧವ ಮೈದೊರೊ ಬಾರೊ
ತೋರೊ ನಿನ್ನ ಹೆಡೆಕುಣಿತ;
ಸಾಧುವಾಗಿ ಜಗದ ದೌಷ್ಟ್ಯ
ಕೇಳಲಿ ಕಿಂಕಿಣಿಕ್ವಣಿತ.

ಲೋಕವೆಲ್ಲ ಬೃಂದಾವನ–
ವಾಗಲಿ ಮುರಳಿ;
ನಾಕವ ನೇಯಲಿ ನಿನ್ನ
ದಿವ್ಯ ಬೋಧ ಮುರಳಿ.

ಜೂನ್ ೧೯೭೦]

## ನಾವೆಂಬರು ಒಂದು

೧

ನೆನಪಿರಲಿ ನೆನಪಿರಲಿ
ಇಂದು
ನಾವೆಂಬರು ಒಂದು:
ಜಗತ್ತಿನಲ್ಲಿ ಭಾರತ
ಭಾರತದಲ್ಲಿ ಕನ್ನಡ

ಕನ್ನಡದಲಿ ನಾವು,
ನಾವೆಂಬರು ಒಂದು.

೨

ಒಂದೆಂದರೆ ಬಾಳು,
ಎರಡಾದರೆ ಹೋಳು;
ಕಾಣನೇಕದಲ್ಲಿ ಏಕ–
ಅದೇ ದಿವ್ಯ ಲೋಕ, ನಾಕ;
ಬೇರೆ ಬೇರೆ ಒಡೆವ ಮುರಿಕ,
ಕಚ್ಚಾಟದ ಶ್ವಾನನರಕ.

೩

ಕನ್ನಡ ನೆಲ ಕನ್ನಡ ಜಲ
ಕನ್ನಡ ನುಡಿ ಕನ್ನಡ ಕಲೆ
ಇವನು ಬಿಟ್ರಿಲ್ಲ ನಾವು;
ಇವು ಅಳಿದರೆ ನಮ್ಮ ಸಾವು:
ಇಂದು ಮುಂದು ಎಂದೆಂದೂ
ನಾವೆಂಬರು ಒಂದು.

೪

'ಏಕಂ ಸತ್, ವಿಪ್ರಾ ಬಹುಧಾ ವದಂತಿ':
ಏಕದಲ್ಲನೇಕತೆಯ
ಜೀವಭಾವವೊಡೆದು ರಮ್ಯ:
ಏಕ ಸತ್ಯ; ಅದೇ ಕಾಮ್ಯ.
ಅನೇಕತೆಯ ಮಣಿಗಣದಲಿ
ಏಕಸೂತ್ರ ಪರಬ್ರಹ್ಮ;
ಸೀಮಿತ ತ್ರಿಗುಣದಲಿ,
ನಿರ್ಗುಣದಲಿ ನಿಸ್ಸೀಮ.
ಮರೆಯಾಗಿಹ ಒಳತನದಲಿ

ಕಾಣಬೇಕು ನಾವು ನಮ್ಮ
ಒಂದುತನವ, ಬಂಧುತನವ.

೫

ಕನ್ನಡತನ ನಮ್ಮೊಡಲು,
ಭಾರತೀಯತನವುಸಿರು,
ವಿಶ್ವಕುಟುಂಬತ್ವ ಆತ್ಮ:
ಮೊದಲಾಗಿದೆ ಕನ್ನಡತನ-
ದಿಂದ ನಮ್ಮ ಒಂದುತನ:
ಇಂದು ಒಂದು ನಾವೆಂಬರು,
ನಾವೆಲ್ಲರು ಒಂದೇ ಜನ.
ನಿತ್ಯ ಹಸುರು ವಿಶ್ವತರು-
ಅದಕೊಂದೇ ಬೇರು,
ಅದೆ ನಮ್ಮೆಲ್ಲರ ತೌರು;
ಅದರಿಂದಲೆ ನಾವೆಂಬರು
ಒಂದು ಇಂದು ಎಂದೆಂದೂ.

೬

ನೆನಪಿರಲಿ ನೆನಪಿರಲಿ,
ನಾವೆಂಬರು ಒಂದು:
ವಿಶ್ವಪ್ರಜೆ ನಾವೆಂದು
ಭಾರತಪ್ರಜೆ ನಾವೆಂದು
ನಾವ್ ಎಂಬರು ಒಂದು,
ಇಂದು ಮುಂದು ಎಂದೆಂದೂ
ಒಂದು ಒಂದು ಒಂದು.

೮-೧೦-೧೯೭೦]

# ನೆರವು

(ಸಂದರ್ಭ ಸೂಚನೆ – ಟಿಪ್ಪಣಿ)

೧. ಶರತ್ ಶಾರದೆಗೆ : ಶರದೃತುವಿಗೂ ಶಾರದೆಗೂ ಇರುವ ಅರ್ಥಪೂರ್ಣ ಭಾವನಾತ್ಮಕ ಸಂಬಂಧದ ವರ್ಣನೆ.

೨. ಮನೆಯ ದೀಪ : ಪ್ರತಿಯೊಬ್ಬನ ಅಂತರಂಗದಲ್ಲಿಯೂ ಆತ್ಮಸಾಕ್ಷಿ ರೂಪವಾದ ಅರಿವಿನ ಅಂತರ್ಬೋಧೆಯೊಂದು ಕೇಳಿ ಬರುತ್ತಲೇ ಇರುತ್ತದೆ. ಅದಕ್ಕೆ ಕಿವಿಗೊಟ್ಟು ಆಲಿಸಬೇಕು. ಅದು ಕೆಲವರಲ್ಲಿ ಸ್ಪಷ್ಟ ಬಹು ಮಂದಿಯಲ್ಲಿ ಇಲ್ಲವೋ ಎನ್ನುವಷ್ಟು ದುರ್ಬಲ. ಅದನ್ನು ಅದುಮಬಾರದು, ಅದರಂತೆ ನಡೆಯಬೇಕು; ಆ ನಡೆ ಇತರರಿಗೂ ಮಾರ್ಗದರ್ಶಕವಾಗಬಹುದು. ಈ ಒಳಗಿನ ಅರಿವಿನ ಬೆಳಕನ್ನು ಇಲ್ಲಿ 'ಮನೆಯ ದೀಪ'ವಾಗಿ ರೂಪಕ ಮಾಡಿದೆ,

೩. ನೀನು–ನಾನು: ದೇವರು–ಭಕ್ತ, ಪರಮಾತ್ಮ–ಜೀವಾತ್ಮ ಇವರ ಸಂಬಂಧದ ನಿರೂಪಣೆ.

೪. ನೆರೆಮನೆಯ ಕುಸುಮ : ಹೆರ ಹೆಣ್ಣಿನ ಬಗೆಗೆ ತಳೆಯಬೇಕಾದ ನಿಷ್ಕಾಮ ಭಾವನೆಯನ್ನು ಸೂಚಿಸುವ ಅನ್ಯೋಕ್ತಿ.

೫. ನಾ ತಾಯಿ ಸಾಕಿರುವ... ಕಾವಲು ನಾಯಿ : ೧೯೬೬ರಿಂದ ೧೯೬೭ರ ಪೂರ್ತಿ ಬೆಂಗಳೂರು ಸರ್ಕಾರದ ಕಾಲೇಜಿನಲ್ಲಿ (ಮೈಸೂರು ವಿಶ್ವವಿದ್ಯಾನಿಲಯದ ಆಡಳಿತದಲ್ಲಿ 'ಇಂಟರ್‌ಮೀಡಿಯಟ್ ಕಾಲೇಜ್' ಎಂದು ಪ್ರಸಿದ್ಧವಾಗಿತ್ತು) ಕನ್ನಡ ಅಧ್ಯಾಪಕನಾಗಿ, ಅಲ್ಲಿ ೧೯೫೫ರಿಂದ ಕರ್ನಾಟಕ ಸಂಘವನ್ನು ಕಟ್ಟಿ ಬೆಳಸಿದವನಾಗಿ, ಕವಿ ಸಲ್ಲಿಸಿದ ಅಲ್ಪ ಕನ್ನಡ ಸೇವೆಯ ವರ್ಣನೆ.

೬ ಬೆಲೆ : ಆದರ್ಶ ಸಾಧನೆಗಾಗಿ ಮಾಡಬೇಕಾದ ತ್ಯಾಗವನ್ನು ಕುರಿತ ಅನ್ಯೋಕ್ತಿ.

೭ ಅಂದಿನ ಪಾಠ : Wordsworth ಕವಿಯ Tables Turned ಎಂಬ ಕವಿತೆಯ ಪ್ರಭಾವವನ್ನು ಗುರುತಿಸಬಹುದು.

೮. ನಿಸರ್ಗದ ಒಂದು ನೋಟ : ವಯಿರಮುಡಿ=ವಜ್ರದ ಕಿರೀಟ, ಲೋಹದ ಹಕ್ಕಿ=ವಿಮಾನ.

೯. ನಾಗರಾಜ : ಕ್ಯಾರಬ್ ಮರ=ಮೆಡಿಟರೇನಿಯನ್ ಸಮುದ್ರದ ಸುತ್ತಮುತ್ತಣ ಪ್ರಾಂತದಲ್ಲಿ ಬೆಳೆಯುವ, ಕೆಂಪು ಹೂಬಿಡುವ, ಒಂದು ವೃಕ್ಷ ಜಾತಿ, ಸಿಸಿಲಿ=ಇಟಲಿ ದೇಶದ ದಕ್ಷಿಣದಲ್ಲಿರುವ ಒಂದು ದ್ವೀಪ; ಎಟ್ನ=ಅಲ್ಲಿನ ಒಂದು ಜ್ವಾಲಾಮುಖಿ. ಕಡಲಕೋಳಿ=ಮೂಲದಲ್ಲಿ albatross ಎಂದು ಕರೆದಿದೆ; ಇದು ಒಂದು ಬಗೆಯ ಭಾರಿಯಾದ ನೀರು ಹಕ್ಕಿ; ಬಾತಿನ ಹಾಗೆ ಜಾಲಪಾದ; ಕಡಲು ತೀರಗಳಲ್ಲಿ ವಾಸ; ಬಹು ದೂರ ಹಾರಬಲ್ಲದು. ಆಂಗ್ಲಕವಿ ಕೋಲ್‌ರಿಜ್ ರಚಿಸಿರುವ ಪ್ರಖ್ಯಾತ ಕವಿತೆ 'ಪುರಾತನ ನಾವಿಕ' (Ancient Mariner)ದಲ್ಲಿ, ಆ ನಾವಿಕ ದುಶ್ಶಕುನಸೂಚಕವೆಂದು ಹಡಗನ್ನು ಹಿಂಬಾಲಿಸಿ ಬರುತ್ತಿದ್ದ ಅಲ್ಬಟ್ರಾಸ್ ಹಕ್ಕಿಯೊಂದನ್ನು ಕೊಲ್ಲುತ್ತಾನೆ; ಬಳಿಕ ತನ್ನ ಕೊಲೆಗಾಗಿ ಪಶ್ಚಾತ್ತಾಪ ಪಡುತ್ತಾನೆ.

೧೦. ಜೇಡನ ಬಲೆ: ಊರ್ಣನಾಭ=ಜೇಡರ ಹುಳು (ತನ್ನ ಹೊಟ್ಟೆಯಲ್ಲಿಯೇ ತಾನು ನೇಯುವ ಬಲೆಯ 'ಊರ್ಣ'ವನ್ನು–ತಂತುದ್ರವ್ಯವನ್ನು–ಉಳ್ಳದ್ದು ಎಂದು ಅರ್ಥ): ಪರಬ್ರಹ್ಮನು ತನ್ನಿಂದಲೇ ಸೃಷ್ಟಿಸಾಮಾಗ್ರಿಯನ್ನು ಪಡೆದುಕೊಂಡು ತನ್ನ ಸೃಷ್ಟಿಕಾರ್ಯವನ್ನು ಮಾಡುವ ಘಟನೆಯನ್ನು ವಿವರಿಸುವಾಗ ವೇದಾಂತದಲ್ಲಿ ಈ 'ಊರ್ಣನಾಭ'ನ ಹೋಲಿಕೆ ಕೊಟ್ಟಿದೆ. ಆದ್ದರಿಂದ, ಜೇಡ 'ಪರಬ್ರಹ್ಮನಿಭ', ಪರಬ್ರಹ್ಮನಿಗೆ ಸಮಾನ.

೧೧. ಹಿಮವಂತ ಪ್ರಗಾಥ : ಸಾಧು ಗೋಧನ ಮಾತೆ.....ವಿಪ್ರಋಷಿ ವಾಸಿಷ್ಠ=ಬ್ರಹ್ಮಋಷಿಯಾಗುವುದಕ್ಕೆ ಮೊದಲು ಒಮ್ಮೆ ಕೌಶಿಕನು (ವಿಶ್ವಾಮಿತ್ರ) ವಸಿಷ್ಠಾಶ್ರಮಕ್ಕೆ ಹೋಗುತ್ತಾನೆ. ವಸಿಷ್ಠಋಷಿಯ ಬಳಿಯಿದ್ದ ನಂದಿನೀ ಎಂಬ ಹೋಮಧೇನುವನ್ನು ಮೋಹಿಸಿ, ಬಯಸುತ್ತಾನೆ. ವಸಿಷ್ಠನು ಅದನ್ನು ಅವನಿಗೆ ಕೊಡಲೊಪ್ಪುವುದಿಲ್ಲ. ಕೌಶಿಕನು ಸೇನಾ ಸಮೇತನಾಗಿ ಬಂದು ಬಲಪ್ರಯೋಗದಿಂದ ನಂದಿನಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ವಸಿಷ್ಠನು ನಂದಿನಿಯನ್ನು ಹಿಂದಿಟ್ಟುಕೊಂಡು, ತನ್ನ ಮುಂದೆ ಅಭಿಮಂತ್ರಿಸಿದ ಯೋಗದಂಡವನ್ನು ನಿಲ್ಲಿಸಿ, ಧ್ಯಾನ ಸಮಾಧಿಯಲ್ಲಿ ಕುಳಿತು ಬಿಡುತ್ತಾನೆ. ಕೌಶಿಕನ ಸೈನಿಕರು ಪ್ರಯೋಗಿಸಿದ ಶಸ್ತ್ರಗಳೆಲ್ಲವನ್ನೂ ಯೋಗದಂಡ ನಿವಾರಿಸಿಬಿಡುತ್ತದೆ. ಆಗ, ಕೌಶಿಕನು ವಸಿಷ್ಠರ ಬ್ರಹ್ಮತೇಜಸ್ಸಿನ ಬಲವನ್ನು

ಅರಿತು, ಕ್ಷಾತ್ರಬಲವನ್ನು ಧಿಕ್ಕರಿಸಿ, ತಾನೂ ಬ್ರಹ್ಮಋಷಿಯಾಗಲು ಬಯಸಿ, ಪ್ರತಿಜ್ಞೆ ಮಾಡಿ, ತಪಸ್ಸಿಗೆ ತೆರಳುತ್ತಾನೆ.

೧೨. ಕುರಿಯ ಮೆರವಣಿಗೆ : ಇದು ಕಾಲ್ಪನಿಕವಾದ ಸಂಗತಿ ಅಲ್ಲ. ಬೆಂಗಳೂರು ನಗರದ ಬಸವನಗುಡಿಯ ಗಾಂಧಿ ಬಜಾರಿನಲ್ಲಿ ಒಮ್ಮೆ ಕಂಡ ನಿಜವಾದ ಕುರಿಯ ಮೆರವಣಿಗೆ. ಕೊಬ್ಬಿದ ಕುರಿಗಳ ಮಂದೆಯನ್ನು ಕಸಾಯಿಖಾನೆಗಳಿಗೆ ಮಾರುವುದಕ್ಕಾಗಿ ಮೆರವಣಿಗೆಯಲ್ಲಿ ಕರೆದೊಯ್ಯುತ್ತಿದ್ದರು ಅದರ ಮಾಲಿಕರು.

೧೩. ನಗರ ದೀಪದ ಜೊತೆ ಮಾತುಕತೆ: "ಶುನಿಚೈವ...ಸಮದರ್ಶಿನಃ"– ಭಗವದ್ಗೀತೆಯ ವಾಕ್ಯ: 'ಜ್ಞಾನಿಗಳ ದೃಷ್ಟಿಯಲ್ಲಿ ನಾಯಿ ಚಂಡಾಲ ಎಂಬ ಭೇದವಿಲ್ಲ; ಅವರು ಎಲ್ಲ ಜೀವಿಗಳನ್ನೂ ಸಮನಾಗಿ ಕಾಣುತ್ತಾರೆ'.

೧೪. ಕಂಬನಿ ಕಾಣಿಕೆ : ಕನ್ನಡದ ಆಚಾರ್ಯಪುರುಷ ಬಿ.ಎಂ. ಶ್ರೀಕಂಠಯ್ಯರವರು ದಿವಂಗತರಾದಾಗ ರಚಿಸಿದ ಚರಮಗೀತೆ.

೧೫. ನುಡಿಗುಡಿಯ ಗೊಮ್ಮಟ : 'ಪೂಜೆ ಲಾಭ ನೆಗಟೆ' (=ಕವಿಗೆ ದೊರಕುವ ಗೌರವ, ಧನಲಾಭ, ಕೀರ್ತಿ)–ಪಂಪನು 'ಆದಿಪುರಾಣ'ದಲ್ಲಿ ತನ್ನ ಕಾವ್ಯರಚನೆಯ ಉದ್ದೇಶವನ್ನು ತಿಳಿಸುವ ಸಂದರ್ಭದಲ್ಲಿ ಆಡಿರುವ ಮಾತು.

೧೬. ಸಿದ್ಧವೃಕ್ಷದ ಸಿದ್ಧಾಪಥ : ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ಯತಿಯ ಐನೂರನೆಯ ಜನ್ಮಶತಾಬ್ದಿಯ ಸಂದರ್ಭದಲ್ಲಿ, ಆ ಪ್ರಸಿದ್ಧ ಸಿದ್ಧಪುರುಷನ ವ್ಯಕ್ತಿತ್ವ ಮಹಿಮೆಯನ್ನು ಕುರಿತು ರಚಿಸಿದ ಕವನ.

೧೭. ಪರಮಹಂಸರ ಮುಂದೆ ಪ್ರಶ್ನೆ ನಿಂತಿತ್ತು : ದಕ್ಷಿಣೇಶ್ವರದಲ್ಲಿ ರಾಮ ಕೃಷ್ಣ ಪರಮಹಂಸರನ್ನು ನರೇಂದ್ರನು (ಮುಂದೆ ವಿವೇಕಾನಂದ) ಮೊದಲ ಸಲ ಸಂದರ್ಶಿಸಿದ ಸನ್ನಿವೇಶವನ್ನು ಇಲ್ಲಿ ವರ್ಣಿಸಿದೆ.

೧೮. ಮಹಾತ್ಮರ ಕರುಣೆ : ಬೋಯರ್ ಜನ – ದಕ್ಷಿಣ ಆಫ್ರಿಕಾದಲ್ಲಿ ವಲಸೆ ಬಂದು ನೆಲಸಿದ ಯುರೋಪಿಯನ ಡಚ್ ಜನ (Boers)

೧೯. ಹೆಜ್ಜೆ ಪೂಜೆ : ಮಹಾತ್ಮ ಗಾಂಧಿಯವರಿಗೆ ಸ್ಮಾರಕಗಳನ್ನು ನಿರ್ಮಿಸಿ ಅವುಗಳನ್ನು ಪೂಜಿಸುವುದಕ್ಕಿಂತ ನಡೆನುಡಿಯಲ್ಲಿ ಅವರು ಹಾಕಿದ ದಾರಿಯಲ್ಲಿ ಕೈಲಾದ ಮಟ್ಟಿಗೆ ಅವರನ್ನು ಹಿಂಬಾಲಿಸುವುದು ಮೇಲು– ಇದು ಕವನದ ಆಶಯ.

೨೦. ಸ್ಥಿತ ಪ್ರಜ್ಞ: 'ಸ್ಥಿತಪ್ರಜ್ಞಸ್ಯ ಕಾ ಭಾಷಾ' (ಭಗವದ್ಗೀತೆ, ೨-೫೪) ಕುರುಕ್ಷೇತ್ರದಲ್ಲಿ ಅರ್ಜುನನು ಬಂಧುಗಳ ಕೊಲೆಗೆ ಹೇಸಿ ವಿಷಾದದಲ್ಲಿ ಮುಳುಗಿದಾಗ ಅವನಿಗೆ ಕೃಷ್ಣನು ನಿಷ್ಕಾಮ ಕರ್ಮದ ಸ್ವರೂಪವನ್ನು ತಿಳಿಸುತ್ತಾನೆ; ಫಲಾಫಲಗಳ ಚಿಂತೆಯಿಲ್ಲದೆ ಯುದ್ಧಮಾಡು ಎನ್ನುತ್ತಾನೆ. ಆ ಸಂದರ್ಭದಲ್ಲಿ ಅರ್ಜುನನು, 'ಸ್ಥಿತಪ್ರಜ್ಞಸ್ಯ ಕಾ ಭಾಷಾ' (ಆತ್ಮಜ್ಞಾನಿಯ ಲಕ್ಷಣವೇನು?) ಎಂದು ಕೃಷ್ಣನನ್ನು ಪ್ರಶ್ನಿಸುತ್ತಾನೆ.

'ಉಂಡೂ ಉಪವಾಸಿ, ಬಳಸಿ ಬ್ರಹ್ಮಚಾರಿ' : ಭೋಗದಲ್ಲಿ ಮುಳುಗಿಯೂ ಮುಳುಗದೆ ಯೋಗದಲ್ಲಿ ಮಗ್ನನಾದ ಭರತ ಚಕ್ರವರ್ತಿಯ ಬಗೆಗೆ ರತ್ನಾಕರವರ್ಣಿ 'ಭರತೇಶ ವೈಭವ'ದಲ್ಲಿ ಹೇಳಿರುವ ಮಾತು. ಭರತನ ದಾರಿ ಒಂದು ವಿಧದಲ್ಲಿ 'ಹಂಸಪಥ'ವೆ. ಭರತನ ಯೋಗ ವಿಜ್ಞಾನವನ್ನು 'ಹಂಸಕಲೆ' ಎಂದೇ ಕರೆದಿದ್ದಾನೆ ರತ್ನಾಕರ.

೨೧. ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ : ವಿಶ್ವದ ವಿಕಾಸವನ್ನೂ ವಿಶ್ವದ (ಪ್ರಕೃತಿಯ) ಸ್ವರೂಪರಹಸ್ಯವನ್ನೂ ಸೂಚಿಸುವ 'ಕವಿದರ್ಶನ'–ಈ ಕವನದ ವಸ್ತು. 'ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ': ಈಶ್ವರತ್ವವನ್ನು ತೋರುವ ನಿನ್ನ ರೂಪವನ್ನು ನೋಡ ಬಯಸುತ್ತೇನೆ' ಎಂದು ಅರ್ಜುನನು ಶ್ರೀ ಕೃಷ್ಣನನ್ನು ಪ್ರಾರ್ಥಿಸುವ ವಾಕ್ಯ (ಭಗವದ್ಗೀತೆ, ೧೧–೩)

"God said ...... was light" : ಪವಿತ್ರ ಬೈಬಲ್ಲಿನ ಹಳೆಯ ಒಡಂಬಡಿಕೆಯ ಸೃಷ್ಟಿಖಂಡದ (The Book of Genesis) ಮೊದಲ ಅಧ್ಯಾಯದ ಮೂರನೆಯ ವಾಕ್ಯ

೨೨. ನಾವೆಂಬುದು ಒಂದು : ನಾವೆಂಬರು ಒಂದು=೧. ನೊವೆಂಬರ್ ತಿಂಗಳ ಒಂದನೆಯ ತೇದಿ (ಕನ್ನಡ ರಾಜ್ಯೋತ್ಸವ ದಿನ); ೨. (ಕನ್ನಡಿಗರಾದ) ನಾವು+ಎಂಬರು+ಒಂದು (ಜನವರ್ಗ).

'ರಾಘವ' ಎಂಬ ಕಾವ್ಯನಾಮದಿಂದ ಖ್ಯಾತರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರು ಕವನ, ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯ, ಗ್ರಂಥ ಸಂಪಾದನೆ, ಕಾವ್ಯ ಮೀಮಾಂಸೆ, ಸಂಶೋಧನೆ – ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಗಾಢ ಅಧ್ಯಯನ ಹಾಗೂ ಬರವಣಿಗೆಯ ಅಚ್ಚುಕಟ್ಟಿನಿಂದ ಐದು ದಶಕಗಳ ಕಾಲ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಹಸ್ತಪ್ರತಿಶಾಸ್ತ್ರ ಎಂಬ ನೂತನ ಸಂಶೋಧನಾ ಕ್ಷೇತ್ರವನ್ನು ಆರಂಭಿಸಿ ಅಳಿಸಿ ಹೋಗುತ್ತಿದ್ದ ಪ್ರಾಚೀನ ಸಾಹಿತ್ಯದ ಸಂಗ್ರಹ, ಸಂರಕ್ಷಣೆಯತ್ತ ನಾಡಿನ ಗಮನವನ್ನು ಸೆಳೆದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರದು ಬಹುಮುಖ ಪ್ರತಿಭೆ.

ಪ್ರಸಕ್ತ ವರ್ಷ ಪ್ರೊ. ಎಂ.ವಿ. ಸೀತಾರಾಮಯ್ಯನವರ ಜನ್ಮಶತಮಾನೋತ್ಸವ ವರ್ಷವಾಗಿದ್ದು, ಈ ಸಂದರ್ಭದಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಹೊರತರಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಉದ್ದೇಶಿಸಿದೆ. ಈ ಲೇಖಕರ ಸಮಗ್ರ ಅಧ್ಯಯನ ಮಾಡಲು ಅನುಕೂಲವಾಗಬೇಕೆಂಬುದು ಈ ಯೋಜನೆಯ ಆಶಯ.

ಡಾ. ಮನು ಬಳಿಗಾರ್
ಆಯುಕ್ತರು



ಕರ್ನಾಟಕ ಸರ್ಕಾರ
**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಕನ್ನಡಭವನ, ಜೆ.ಸಿ. ರಸ್ತೆ, ಬೆಂಗಳೂರು – 560 002